# ಸಮಗ್ರಜೋತಿಷ್ಯಪಾರಿಜಾತ

ಲೇಖಕ
ವಿದ್ವಾನ್.ವಿಜಯವಿಠಲಾಚಾರ್ಯ ಎಂ.ಎ
ಶಿರೋಮಣಿ,ಅಧ್ಯಾಪಕ,ಎಸ್.ಜಿ.ವಿದ್ಯಾಪೀಠ
ಮಂತ್ರಾಲಯ

Name of Book - Samagrajothishyapaarijatha

Edit by-B.K.Vijayavittalachar
Ex,Adhyapaka,S.G.S.V.P. Mantralayam

Edition-First 2015

Pages :-154



Computing by- Kasyapa I.T.Center
Mantralayam(A.P.)

Prtinters-
Publishers :- Sri Raghavendragurusarvabowma
publications
Mantralayam (A.P.)

## ನಿವೇದನೆ

ಸದಾನಂದರೂಪಿಯಾದ ಶ್ರೀಹರಿಯು ಶಿಂಶುಮಾರ ರೂಪದಿಂದ ಈ ಬ್ರಹ್ಮಾಂಡವನ್ನು ಇದರಲ್ಲಿರುವ ನಕ್ಷತ್ರರಾಶಿಮಂಡಲಗಳು ಮತ್ತು ಗ್ರಹಾದಿಗಳನ್ನು ನಿಯಂತ್ರಿಸಿ ಸಮಸ್ತಚೇತನರ ಚೈತನ್ಯವನ್ನು ಅವರವರ ಕರ್ಮಾನುಸಾರ ಪ್ರೇರಣೆಮಾಡುತ್ತಾನೆ. ಆದ್ದರಿಂದ ಪ್ರತಿಯೊಬ್ಬರೂ ತಮ್ಮ ಪೂರ್ವಕರ್ಮಾನುಸಾರ ಫಲಗಳನ್ನು ಅನುಭವಿಸಲೆಂದೇ ಹುಟ್ಟಿಬರುತ್ತಾರೆ. ಆ ಕರ್ಮಗಳ ಪರಿಸ್ಥಿತಿಯನ್ನು ಜೀವಿಯ ಯೋಗ್ಯತಾನುಸಾರ ಶ್ರೀಹರಿಯ ಇಚ್ಛೆಯಂತೆ ತಿಳಿದು ಜನ್ಮಕುಂಡಲಿಯ ಗ್ರಹಚಾರದ ಮೂಲಕ ಅದಕ್ಕೆ ತಕ್ಕ ಪರಿಹಾರಮಾಡಿ ಕೊಳ್ಳಬಹುದು. ಜನನ ಕಾಲದಲ್ಲಿದ್ದ ಗ್ರಹರ ಸ್ಥಿತಿಯಿಂದ ಪ್ರತಿಯೊಬ್ಬನ ಸಂಚಿತ–ಆಗಾಮಿ ಕರ್ಮಗಳ ಜಾಡನ್ನು ತಿಳಿದು ಜಪತಪಹೋಮ ಶಾಂತ್ಯಾದಿ ಅನುಷ್ಠಾನ ಮಾಡಿ ಅರಿಷ್ಟವನ್ನು ಕಳೆದು ಕೊಳ್ಳಲು ಬರುತ್ತದೆ. ಹಿಂದೆ ದೇವನಾಗರಿಯಲ್ಲಿ ಹಿರಿಯರು ಸಂಗ್ರಹಿದ ಅಪೂರ್ವವಾದ ಜ್ಯೋತಿಷ್ಯಸಂಗ್ರಹವೆಂಬ ಸಂಸ್ಕೃತಗ್ರಂಥವನ್ನು ಕನ್ನಡದಲ್ಲಿ ಬರೆದಿರುವುದಲ್ಲದೆ ಮೇಲೆ ತಿಳಿಸಿದಂತಹ ಅನೇಕ ಯೋಗಗಳನ್ನು ಅನೇಕಗ್ರಂಥಗಳ ಪರಿಶಿಲನೆ ಮಾಡಿ ಯೋಗ್ಯ ವಾದುದನ್ನು ಆರಿಸಿ ಶ್ರೀಜೋತಿಷ್ಯಪಾರಿಜಾತ ವೆಂಬ ಶಿರೋನಾಮೆ ಯಿಂದ ಈ ಸಂಗ್ರಹಗ್ರಂಥವನ್ನು ರಚಿಸಿದ್ದೇನೆ.

ಇದರಲ್ಲಿ ಐದು ಅಧ್ಯಾಯಗಳು ಸಂಸ್ಕೃತಾನುವಾದವಾಗಿ ಪರಿಭಾಷಾಸಂಗ್ರಹ, ಯೋಗಸಂಗ್ರಹ,ಮುಹೂರ್ತಸಂಗ್ರಹ,ಷೋಡಶ ಕರ್ಮಸಂಗ್ರಹ, ಜಾತಕಫಲ ಸಂಗ್ರಹ ವೆಂಬುದಾಗಿಯೂ ಆರನೆಯದು ಪರಿಶಿಷ್ಟವೆಂಬ ಹೆಸರಿನಿಂದ ಸಮಸ್ತರಿಗೂ ಉಪಯೋಗ ವಾಗುವಂತೆ ರಚಿಸಿದ್ದೇನೆ. ಈ ಪರಿಶಿಷ್ಟದಲ್ಲಿ ಗ್ರಹಶೀಲಗಳು,ನಕ್ಷತ್ರಗಳ ವಿಶೇಷ ವಿಚಾರ ಜನನನಕ್ಷತ್ರಶಾಂತಿ,ರೋಗ ಕಾಡುವ ವಿಚಾರ, ರಜಸ್ವಲಾ ಪಟ್ಟಿ, ಸ್ತ್ರೀಜನ್ಮನಕ್ಷತ್ರದೋಷವಿಷಯ, ಆಯಾವರ್ಷದ ಪಂಚಾಂಗ ನೋಡಿ ಒಂದೊಂದು ನಕ್ಷತ್ರಕ್ಕೂ ಶುಭಾ–ಶುಭತಿಳಿಯಲು ತಾರಾಬಲ ವಿಚಾರವನ್ನು ವಿಶೇಷವಾಗಿ ಸೇರಿಸಿದ್ದೇನೆ. ರೋಗಶಾಂತಿಗಳಿಗಾಗಿ ದೇವತಾದಿ ಆರಾಧನೆಯನ್ನು ತಿಳಿಸಿದ್ದೇನೆ. ಎಲ್ಲರೂ ಇದರ ಉಪಯೋಗ ಪಡೆದು ಆಚರಿಸಿದಲ್ಲಿ ನಾನು ಸಂಗ್ರಹಿಸಿದ್ದು ಸಾರ್ಥಕವಾಗುತ್ತದೆಂದು ನಂಬಿದ್ದೇನೆ.

ಬಹುದಿನಗಳಿಂದ ಸಂಸ್ಕೃತದ ಜೋತಿಷ್ಯಸಂಗ್ರಹವೆಂಬ ಗ್ರಂಥವನ್ನು ಕನ್ನಡಿಸಬೇಕೆಂದು ಆಸೆ ಇತ್ತು, ಆದ್ದರಿಂದ ಒಂದು ಸಂಸ್ಕೃತಗ್ರಂಥವನ್ನು ಸಮಗ್ರವಾಗಿ ಕನ್ನಡದಲ್ಲಿ ತರ್ಜುಮೆ ಮಾಡಿ ಯಂತ್ರದಲ್ಲಿ ಇಟ್ಟಿದ್ದೆ ಆದರೆ ಈ ಮಧ್ಯೆ ಪ್ರವಾಹದ ಅವಾಂತರದಿಂದ ಎಲ್ಲವೂ ಹಾಳಾಗಿತ್ತು. ಆದರೆ ರಾಯರ ಅನುಗ್ರಹ ದಿಂದ ನಾನು ಕೆಲಸಮಾಡಿದ್ದ ಸಂಗ್ರಹದ ಫೈಲು ಒಂದು ಪೆನ್‌ಡ್ರೈವ್‌ನಲ್ಲಿ ಸ್ವಲ್ಪ ಪ್ರಮಾಣದಲ್ಲಿ ಹಾಗೆ ಇದ್ದದ್ದು ಸಿಕ್ಕಿದ್ದರಿಂದ ಅದಕ್ಕೆ ಇನ್ನಷ್ಟನ್ನು ಸೇರಿಸಿ ಆದಷ್ಟು ಬೇಗ ಹೊರತರಬೇಕೆಂದು ಸಾಹಸಮಾಡಿದ್ದಕ್ಕೆ ರಾಯರು ಅನುಗ್ರಹಮಾಡಿ ಶ್ರೀ ವಸಂತಕುಮಾರ ಅವರಿಗೆ ಪ್ರೇರಣೆಮಾಡಿದರೆಂದೇ ತಿಳಿಯತ್ತೇನೆ. ಈ ನನ್ನ ಸಂಗ್ರಹಕಾರ್ಯವು ಪೂಜ್ಯರಾದ ಶ್ರೀರಾಘವೇಂದ್ರತೀರ್ಥ ಗುರುಗಳ ಅಂತರ್ಯಾಮಿ ಪಂಚಮುಖೀಹನುಮಾಂತರ್ಗತ ಕುಲದೈವ ಪದ್ಮಾವತೀಸಹಿತ ಶ್ರೀಲಕ್ಷ್ಮೀಪತಿ ವೇಂಕಟೇಶ್ವರನ ಪ್ರೇರಣೆಯಿಂದಾದ ಈ ಸಮಗ್ರಗ್ರಂಥವನ್ನು ಆತನಿಗೇ ಅರ್ಪಿಸುತ್ತಿದ್ದೇನೆ.

ಶ್ರೀಕೃಷ್ಣಾರ್ಪಣಮಸ್ತು.

ಸಜ್ಜನವಿಧೇಯ

ಶ್ರೀಜಯಸಂ॥ ಬಿ.ಕೆ.ವಿಜಯವಿಠಲಾಚಾರ್ಯ

ಶ್ರಾವಣವದ್ಯ ದ್ವಿತೀಯ ಮಂತ್ರಾಲಯ

೧೨–೮–೨೦೧೪



## ಸಮಗ್ರಜ್ಯೋತಿಷ್ಯಪಾರಿಜಾತ ಅನುಕ್ರಮಣಿಕಾ

ನಮ್ಮ ಪ್ರಿಯಶಿಷ್ಯರಾದ ಚಿ॥ಶ್ರೀ ಬಿ.ಕೆ.ವಿಜಯವಿಠಲಾಚಾರ್ಯರು ಶ್ರೀಗುರುಸಾರ್ವಭೌಮ ವಿದ್ಯಾಪೀಠದಲ್ಲಿ ಹನ್ನೆರಡುವರ್ಷ ನಮ್ಮಿಂದಲೇ ಸಮಗ್ರಶಾಸ್ತ್ರಾಧ್ಯಯನಮಾಡಿ ಸಾಹಿತ್ಯಶಿರೋಮಣಿ,ಜ್ಯೋತಿಷ್ಯವಿದ್ವತ್ ಅಲಂಕಾರಾಆಯುರ್ವೇದಕೋವಿದ ಹಾಗು ಎಂ.ಎ ಇತ್ಯಾದಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಾರೆ ಅಲ್ಲದೆ ನಮ್ಮ ೧೦೦೮ ಶ್ರೀಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಲವರಲ್ಲಿ ಶಾಂತಿಪಾಠಹಾಕಿ ಸಮಗ್ರಮದ್ವತತ್ವಶಾಸ್ತ್ರವನ್ನು ರಾಷ್ಟ್ರಪ್ರಶಸ್ತಿವಿಜೇತರಾದ ಶ್ರೀಶ್ರೀ ಮಾಗಡೀರಂಗನಾಥಾಚಾರ್ಯರಲ್ಲಿಯೂ-ನಮ್ಮಲ್ಲಿಯೂ ಶ್ರೀಮನ್ನ್ಯಾಯಸುಧಾದಿಗಳನ್ನು ಅಧ್ಯಯನಮಾಡಿರುವರು. ಶ್ರೀಮಠದಿಂದ ಶ್ರೀಸುಜಯೀಂದ್ರ ಪಾರಿತೋಷಕ,ಶ್ರೀವ್ಯಾಸರಾಜಮಠದಿಂದ ಶ್ರೀ ವ್ಯಾಸರಾಜವಿದ್ಯಾ ಪುರಸ್ಕಾರ ಪ್ರಶಸ್ತಿ,ಶ್ರೀಪದ್ಮನಾಭತೀರ್ಥರ ಮಹಾಸಂಸ್ಥಾನವಾದ ಶ್ರೀಪಾದರಾಜ ಗುರುಪೀಠದಿಂದ ವಿದ್ಯಾಪುರಸ್ಕಾರ ಮೊದಲಾದವುಗಳನ್ನು ಪಡೆದಿರುವರು, ಇವರು ಸ್ವಯಂ ಕಂಪ್ಯೂಟರ ಕಲಿತು ತಮ್ಮ ಯಂತ್ರದಲ್ಲಿ ಈಗಾಗಲೇ ಶ್ರೀರಾಯರ ಸ್ತೋತ್ರಾದಿ ಅನೇಕ ಸ್ತ್ರೋತ್ರಹೊತ್ತಿಗೆಗಳನ್ನು,ಲಕ್ಷ್ಮೀಶೋಭಾನೆ, ಶ್ರೀಹರೇಶ್ರೀನಿವಾಸ ಎಂಬ ತಾರತಮ್ಯಭಜನಸಂಗ್ರಹ (ತೆಲುಗು)ಮುಂತಾದ ದಾಸಸಾಹಿತ್ಯ ಪುಸ್ತಕಗಳು, ಆಹ್ನೀಕಮಂಜರೀ (ತೆಲುಗು,ಕನ್ನಡ)ನಿತ್ಯೋಪಯೋಗಿ ಪುಸ್ತಕಗಳು ಶ್ರೀರಾಘವೇಂದ್ರವಿಜಯ ಮುಂತಾದ ಕಾವ್ಯಗ್ರಂಥಗಳು,ಸ್ಥಾಲೀಪಾಕ, ಮಹೋತ್ಸವವಿಧಿ(ತೆ),ಸಂಪ್ರೋಕ್ಷಣವಿಧಿ(ತೆ),ಜೀರ್ಣೋದ್ಧಾರವಿಧಿ ಮುಂತಾದ ಯಾಜ್ಞೀಕಗ್ರಂಥಗಳು ಇತ್ಯಾದಿ ಗ್ರಂಥಗಳನ್ನು, ಶ್ರೀಚಕ್ರಾಬ್ಜಮಂಡಲ ಚಿತ್ರಪಟಗಳು (ಕನ್ನಡತೆಲುಗುಸಂಸ್ಕೃತ)ಹೊರತಂದಿದ್ದಾರೆ.

ಇದೇರೀತಿ ಈಗ ಹೊರಬರುತ್ತಿರುವ ಸಮಗ್ರಜ್ಯೋತಿಷ್ಯಪಾರಿಜಾತ ದಂತೆ ಇನ್ನೂ ಅನೇಕ ಗ್ರಂಥಗಳು ಹೊರಬಂದು ಇವರಿಂದ ಜ್ಞಾನದುಂದುಭಿಯು ಎಲ್ಲಲ್ಲೊ ಮೊಳಗುವಂತಾಗಲೆಂದು ನಮ್ಮ ಕುಲಸ್ವಾಮಿಯಾದ ಶ್ರೀಪದ್ಮಾವತೀಸಹಿತ ಲಕ್ಷ್ಮೀವೇಂಕಟೇಶನು ಇತೋಪ್ಯತಿಶಯವಾದ ಆಯುರಾರೋಗ್ಯಗಳನ್ನು ಕೊಟ್ಟು ಕಾಪಾಡ ಲೆಂದು ಹಾರೈಸುತ್ತೇವೆ.

ಶ್ರೀಮನ್ಮಥಸಂ॥ ಪಂಡಿತಕೇಸರಿ ರಾಜಾ,ಸುಜ್ಞಾನೇಂದ್ರಾಚಾರ್ಯ
ಶ್ರಾವಣವದ್ಯದ್ವಿತೀಯ (ಗಿರಿಯಾಚಾರ್ಯ)
೩೧-೮-೨೦೧೬ ಶ್ರೀಪಾದಪುತ್ರರು, ಮಂತ್ರಾಲಯ

# ಸಮಗ್ರಜ್ಯೋತಿಷ್ಯಪಾರಿಜಾತ

## ಪರಿಭಾಷಾಸಂಗ್ರಹ

ನತ್ವಾವೇಂಕಟೇಶಂಚಾದೌ ಬುಧಾನಾಮುಪಯೋಗಾರ್ಥಮ್।
ಗುರುವರಪ್ರಸಾದೇನ ಕರಿಷ್ಯೇ ಜ್ಯೋತಿಸ್ಸಂಗ್ರಹಮ್॥೧॥

ಮೊದಲು ಕುಲಸ್ವಾಮಿಯಾದ ಶ್ರೀವೇಂಕಟೇಶದೇವನನ್ನು ನಮಸ್ಕರಿಸಿ ಗುರುಗಳ ವರಪ್ರಸಾದದಿಂದ ಜ್ಯೋತಿಷ್ಯಶಾಸ್ತ್ರವನ್ನು ತಿಳಿವದವರ ಉಪಯೋಗಕ್ಕಾಗಿ ಸಮಗ್ರ ಜ್ಯೋತಿಷ್ಯಪಾರಿಜಾತ ವೆಂಬ ಗ್ರಂಥವನ್ನು ರಚಿಸುತ್ತೇನೆ.

ಮೊದಲು ಶಾಲಿವಾಹನಶಕೆಯಿಂದ ಪ್ರಭವಾದಿ ಸಂವತ್ಸರವನ್ನು ತಿಳಿಸುತ್ತೇನೆ.

ಶಕಕಾಲೋರಾಶಿಯುತಃ ಶೂನ್ಯರಸರ್ಹತಾ ತಥಾ।
ಶೇಷಾ ಸಂವತ್ಸರಾಃ ಪ್ರೋಕ್ತಾ ಪ್ರಭವಾದ್ಯಾಃ ಬುಧೈಃಕ್ರಮಾತ್॥೨॥

ಶಕೆಸಂಖ್ಯೆಗೆ ೧೨ ನ್ನು ಸೇರಿಸಿ ೬೦ ರಿಂದ ಭಾಗಿಸಿದಾಗ ಶೇಷಸಂಖ್ಯೆಗನು ಸಾರವಾಗಿ ಪ್ರಭವಾದಿ ಸಂವತ್ಸರವೆಂದು ತಿಳಿಯಬೇಕು.

ಪ್ರಭವೋ ವಿಭವಃ ಶುಕ್ಲಃ ಪ್ರಮೋದೋಥ ಪ್ರಜಾಪತಿಃ।
ಅಂಗಿರಾಃ ಶ್ರೀಮುಖೋ ಭಾವೋ ಯುವಾ ಧಾತಾ ತಥೈವ ಚ॥೩॥
ಈಶ್ವರೋ ಬಹುಧಾನ್ಯಶ್ಚ ಪ್ರಮಾಥೀ ವಿಕ್ರಮೋ ವಿಷುಃ।
ಚಿತ್ರಭಾನುಃ ಸ್ವಭಾನುಶ್ಚ ತಾರಣಃ ಪಾರ್ಥಿವೋ ವ್ಯಯಃ॥೪॥
ಸರ್ವಜಿತ್ ಸರ್ವಧಾರೀಚ ವಿರೋಧೀ ವಿಕೃತಿಃ ಖರಃ।
ನಂದನೋ ವಿಜಯಶ್ಚೈವ ಜಯೋ ಮನ್ಮಥ ದುರ್ಮುಖೌ॥೫॥
ಹೇಮಲಂಬೀ ವಿಳಂಬೀಚ ವಿಕಾರೀ ಶಾರ್ವರೀ ಪ್ಲವಃ।
ಶುಭಕೃಚ್ಛೋಭಕೃತ್ ಕ್ರೋಧೀ ವಿಶ್ವಾವಸು ಪರಾಭವೌ॥೮॥
ಪ್ಲವಂಗಃ ಕೀಲಕಃ ಸೌಮ್ಯಃ ಸಾಧಾರಣ ವಿರೋಧಿಕೃತ್।
ಪರೀಧಾವೀ ಪ್ರಮಾದೀಚ ಹ್ಯಾನಂದೋ ರಾಕ್ಷಸೋ ನಳಃ॥೯॥
ಪಿಂಗಳಃ ಕಾಲಯುಕ್ತಶ್ಚ ಸಿದ್ಧಾರ್ಥೀ ರೌದ್ರದುರ್ಮತೀ॥
ದುಂದುಭೀ ರುಧಿರೋದ್ಗಾರೀ ರಕ್ತಾಕ್ಷೀ ಕ್ರೋಧನ ಕ್ಷಯಃ॥೧೦॥

ಪ್ರಭವಃ ವಿಭವಃ ಶುಕ್ಲಃ ಪ್ರಮೋದಃ ಪ್ರಜಾಪತಿಃ ಅಂಗಿರಾಃ ಶ್ರೀಮುಖಃ ಭಾವಃ ಯುವಾ ಧಾತಾ ಈಶ್ವರಃ ಬಹುಧಾನ್ಯಃ ಪ್ರಮಾಥೀ ವಿಕ್ರಮಃ ವಿಷುಃ ಚಿತ್ರಭಾನುಃ ಸ್ವಭಾನುಃ ತಾರಣಃ ಪಾರ್ಥಿವಃ ವ್ಯಯಃ ಸರ್ವಜಿತ್ ಸರ್ವಧಾರೀ ವಿರೋಧೀ ವಿಕೃತಿಃ ಖರಃ ನಂದನಃ ವಿಜಯಃ ಜಯಃ ಮನ್ಮಥಃ ದುರ್ಮುಖಃ ಹೇಮಲಂಬೀ ವಿಳಂಬೀ ವಿಕಾರೀ ಶಾರ್ವರೀ ಪ್ಲವಃ ಶುಭಕೃತ್



ಶೋಭಕೃತ್ ಕ್ರೋಧೀ ವಿಶ್ವಾವಸುಃ ಪರಾಭವಃ ಪ್ಲವಂಗಃ ಕೀಲಕಃ ಸೌಮ್ಯಃ ಸಾಧಾರಣಃ ವಿರೋಧಿಕೃತ್ ಪರೀಧಾವೀ ಪ್ರಮಾದೀ ಆನಂದ ರಾಕ್ಷಸ ನಳ ಪಿಂಗಳ ಕಾಲಯುಕ್ತಿ ಸಿದ್ಧಾರ್ಥೀ ರೌದ್ರಿ ದುರ್ಮತೀ ದುಂದುಭೀ ರುಧಿರೋದ್ಗಾರೀ ರಕ್ತಾಕ್ಷೀ ಕ್ರೋಧನ ಕ್ಷಯ ಎಂಬುದಾಗಿ ಕ್ರಮವಾಗಿ ೬೦ಸಂವತ್ಸರಗಳೆಂದು ತಿಳಿಯಬೇಕು.

ಶಿಶಿರಪೂರ್ವಮೃತುತ್ರಯಮುತ್ತರ್ ಹ್ಯಯನಮಾಹುರಹಶ್ಚ ತದಾಮರಮ್।
ಭವತಿ ದಕ್ಷಿಣಮನ್ಯದೃತುತ್ರಯಂ ನಿಗದಿತಾ ಚ ರಜನೀನಿರ್ಝರಾಣಾಂ॥೧೧॥

ಶಿಶಿರಋತು,ವಸಂತಋತು,ಗ್ರಿಷ್ಮಋತು ಎಂಬ ಮೂರು ಋತುಗಳು ದೇವತೆಗಳ ಹಗಲಾದ ಉತ್ತರಾಯಣವೆನಿಸುತ್ತವೆ. ಮಿಕ್ಕ ವರ್ಷಋತು, ಶರದೃತು, ಹೇಮಂತಋತುಗಳು ದೇವತೆಗಳ ರಾತ್ರಿಯಾದ ದಕ್ಷಿಣಾಯನ ವೆನಿಸುತ್ತವೆ.

ಮೃಗಾದಿ ರಾಶಿದ್ವಯ ಭಾನು ಭೋಗಾತ್ ಷಡರ್ತವಃ ಸ್ಯುಃ ಶಿಶಿರೋ ವಸಂತಃ।
ಗ್ರೀಷ್ಮಶ್ಚ ವರ್ಷಾ ಚ ಶರಚ್ಚ ತದ್ವದ್ಧೇಮಂತನಾಮಾ ಕಥಿತಶ್ಚ ಷಷ್ಠಃ॥೧೨॥

ಮಕರಾದಿ ಎರೆಡೆರಡು ರಾಶಿಗಳಲ್ಲಿ ಸೂರ್ಯಸಂಚರಿಸುತ್ತಿದ್ದಾಗ ಶಿಶಿರವಸಂತ ಗ್ರೀಷ್ಮಋತುಗಳೆನಿಸುತ್ತವೆ. ಕರ್ಕಾದಿ ಎರೆಡೆರೆಡುರಾಶಿಗಳಲ್ಲಿ ಸೂರ್ಯಸಂಚಾರ ದಿಂದ ವರ್ಷಶರತ್ ಹೇಮಂತಋತುಗಳೆನಿಸುತ್ತವೆ.

ಚೈತ್ರಾದಿ ದ್ವಿದ್ವಿ ಮಾಸಾನಾಂ ವಸಂತಾದ್ಯಾ ಋತವಶ್ಚ ಪ್ರೋಕ್ತಾ।
ದಾಕ್ಷಿಣಾತ್ಯಾಃ ಪ್ರಗೃಹ್ಯಂತಿ ದೈವೇಪಿತ್ರ್ಯೇಚ ಕರ್ಮಣಿ॥೧೩॥

ಚೈತ್ರಾದಿ ಎರೆಡೆರಡು ಮಾಸಗಳಿಗೆ ವಸಂತಾದಿ ಋತುಗಳಾಗುತ್ತವೆಂದು ನಮ್ಮ ಭರತಖಂಡದ ದಕ್ಷಿಣಭಾಗದವರು ದೈವ ಹಾಗು ಪಿತೃಗಳಿಗೆ ಸ್ವೀಕರಿಸುತ್ತಾರೆ.

ಚೈತ್ರಃವೈಶಾಖೋಜ್ಯೇಷ್ಠಶ್ಚಾಷಾಢೋ ಶ್ರಾವಣಸ್ತಥಾ।
ಭಾದ್ರಪದೋಶ್ವಯುಜಶ್ಚ ಕಾರ್ತಿಕೋಥಮಾರ್ಗಶಿರಃ।
ಪುಷ್ಯೋಮಾಘ ಫಾಲ್ಗುಣಶ್ಚ ಮಾಸಾಃ ದ್ವಾದಶಸ್ಮೃತಾಃ॥೧೪॥

ಚೈತ್ರ ವೈಶಾಖ ಜ್ಯೇಷ್ಠ ಆಷಾಢ ಶ್ರಾವಣ ಭಾದ್ರಪದ ಆಶ್ವಯುಜ ಕಾರ್ತಿಕ ಮಾರ್ಗಶಿರ ಪುಷ್ಯ ಮಾಘ ಫಾಲ್ಗುಣ ಎಂಬುದಾಗಿ ಹನ್ನೆರಡು ಚಾಂದ್ರಮಾನಮಾಸಗಳಾಗುತ್ತವೆ.

ದರ್ಶಾವಧಿಂ ಮಾಸಮುಶಂತಿ ಚಾಂದ್ರಂ ಸೌರಂ ತಥಾ ಭಾಸ್ಕರರಾಶಿಭೋಗಾತ್।
ತ್ರಿಂಶದ್ದಿನಂ ಸಾವನಸಂಜ್ಞಮಾರ್ಯಾ ನಕ್ಷತ್ರಮಿಂದ್ರೋರಗಣಾಶ್ರಯಾಚ್ಚ॥೧೫॥

ಅಮಾವಾಸ್ಯೆಯೇ ಕೊನೆಯಾಗಿ ಮಾಡಿಕೊಂಡು ಮಾಸಗಳನ್ನು ಚಾಂದ್ರಮಾನಮಾಸಗಳನ್ನು ಎಣಿಸಲಾಗುತ್ತದೆ, ಸೂರ್ಯನು ಒಂದುರಾಶಿಯಿಂದ ಇನ್ನೊಂದು ರಾಶಿಗೆ ಸಂಕ್ರಮಿಸುವುದನ್ನು ಎಣಿಸುತ್ತಾ ಮಾಸಗಳನ್ನು ಲೆಕ್ಕಿಸುವುದು ಸೌರಮಾನ ವೆನಿಸುತ್ತದೆ. ಒಂದು ಸೂರ್ಯೋದಯದಿಂದ ಇನ್ನೊಂದು ಸೂರ್ಯೋದಯದವರೆಗಿನ ಸಮಯವನ್ನು ಎಣಿಸುವುದು ಸಾವನಮಾಸ ವೆನಿಸುತ್ತದೆ.

ಚಂದ್ರನು ಒಂದುನಕ್ಷತ್ರದಿಂದ ಇನ್ನೊಂದು ನಕ್ಷತ್ರಕ್ಕೆ ಕ್ರಮಿಸುವ ಲೆಕ್ಕವನ್ನು ನಾಕ್ಷತ್ರಮಾನ ವೆಂದು ತಿಳಿಯಬೇಕು.

ವಿವಾಹಾದೌ ಸ್ಮೃತಃ ಸೌರೋ ಯಜ್ಞಾದೌ ಸಾವನ ಸ್ಮೃತಃ।
ಪಿತೃಕಾರ್ಯೇಷುಚಾಂದ್ರಸ್ಸ್ಯಾದಾರ್ಕ್ಷಂ ದಾನವ್ರತೇಷು ಚ ॥೧೬॥

ವಿವಾಹಾದಿಗಳಲ್ಲಿ ಸೌರಮಾನವನ್ನು, ಯಜ್ಞಾದಿಕರ್ಮಗಳಲ್ಲಿ ಸಾವನವನ್ನು, ಪಿತೃಕಾರ್ಯಾದಿಗಳಲ್ಲಿ ಚಾಂದ್ರಮಾನವನ್ನು ಮತ್ತು ದಾನವ್ರತಾದಿಗಳನ್ನು ನಕ್ಷತ್ರಮಾನವನ್ನು ಅನುಸರಿಸಬೇಕು.

ದ್ವಾತ್ರಿಂಶದ್ಭಿಃ ಗತೈರ್ಮಾಸೈರ್ದಿನೈಃ ಷೋಡಶಭಿಸ್ತಥಾ।
ಘಟಿಕಾನಾಂ ಚತುಷ್ಕೇಣ ಪತತ್ಯಧಿಕಮಾಸಕಃ॥೧೭॥

ಒಂದುಸಾರಿ ಅಧಿಕಮಾಸ ಬಂದು ಮುಗಿದಮೇಲೆ ೩೨ಮಾಸಗಳು ೧೬ ದಿನಗಳು ೪ ಘಳಿಗಳಿಗೆ ಚಾಂದ್ರಮಾಸದಲ್ಲಿ ಪುನಃ ಅಧಿಕಮಾಸ ಬರುತ್ತದೆ.

ಶಕೇ ಬಾಣಕರಾಂಕಕೇ ವಿರಹಿತೇ ನಂದೇಂದುಭಿರ್ಭಾಜಿತೇ
ಚೌತ್ರೇಮಾಧವಕೇ ನಲೇ ಶಿವಶಿತೇ ಜ್ಯೇಷ್ಟೇಂಬರೇ ಚಾಷ್ಟಕೇ।
ಆಷಾಢೇ ನೃಪತೌ ಶರೇ ಚ ನಭಸಿ ಭಾದ್ರೇ ಚ ವಿಶ್ವಾಂಕಕೇ
ನೇತ್ರೇ ಚಾಶ್ವಿನಕೇ ಧಿಮಾಸ ಉದಿತಃ ಶೇಷೇಣ್ಯಕೇ ಸ್ಯಾನ್ನಹಿ॥೧೮॥
ಅಸಂಕ್ರಾಂತಿಮಾಸೋಧಿಮಾಸಃ ಸ್ಫುಟಂಸ್ಯಾದ್ವಿಸಂಕ್ರಾಂತಿಮಾಸಃ ಕ್ಷಯಾಖ್ಯಃ ಕದಾಚಿತ್।
ಕ್ಷಯಃ ಕಾರ್ತಿಕಾದಿತ್ರಯೇ ನಾನ್ಯತಃ ಸ್ಯಾತ್ ತದಾ ವರ್ಷಮಧ್ಯೇಧಿಮಾಸದ್ವಯಂ ಚ॥೧೯॥

ಸಂಕ್ರಾಂತಿರಹಿತವಾದ ಚಾಂದ್ರಮಾಸವು ಅಧಿಕಮಾಸವೆನಿಸುತ್ತದೆ. ಎರಡುಸಂಕ್ರಾಂತಿ ಉಳ್ಳಮಾಸವು ಕ್ಷಯಮಾಸವೆನಿಸುತ್ತದೆ. ಈ ಕ್ಷಯಮಾಸ ಅಪುರೂಪವಾಗಿ ಬರುತ್ತದೆ. ಕಾರ್ತಿಕಾದಿ ಮಾಸತ್ರಯದಲ್ಲೆ ಕ್ಷಯಮಾಸವು ಬರುವುದು. ಕ್ಷಯಮಾಸ ಬಂದ ಸಂವತ್ಸರದಲ್ಲಿ ಎರಡು ಅಧಿಕಮಾಸ ಬರುತ್ತವೆ.

ವರ್ಷಾಯನರ್ತುಪೂರ್ವಕಮತ್ರ ಸೌರಾನ್ಮಾಸಾ ಸ್ತಥಾ ಚ ತಿಥಯಸ್ತುಹಿನಾಂಶುಮಾನಾತ್।
ಯತ್ಕೃಚ್ಛ್ರಸೂತಕಚಿಕಿತ್ಸಿತವಾಸಾರಾದ್ಯಂ ತತ್ ಸಾವನಾಚ್ಚ ಘಟಿಕಾದಿ ಮಾರ್ಕ್ಷಮಾನಾತ್॥೨೦॥

ಸಂವತ್ಸರ ಆಯನ ಋತು ಇತ್ಯಾದಿಗಳನ್ನು ಸೌರಮಾನದಿಂದಲೂ ತಿಥಿಗಳನ್ನು ಚಾಂದ್ರಮಾನದಿಂದಲೂ, ವ್ರತ,ನಿಯಮ,ಸೂತಕ,ಚಿಕಿತ್ಸ, ವಾರಪ್ರವೃತ್ತಿ ಇತ್ಯಾದಿಗಳನ್ನು ಸಾವನ ಮಾನದಿಂದ ಘಟಿಕಾದಿ ನಿಯಮಗಳನ್ನು ನಾಕ್ಷತ್ರಮಾನದಿಂದ ತಿಳಿಯಬೇಕು.

ಪೂರ್ವಾಪರಂ ಮಾಸದಲಂ ಹಿ ಪಕ್ಷೌ ಪೂರ್ವಾಪರೌತೌ ಸಿತನೀಲಸಂಜ್ಞೌ।
ಪೂರ್ವಸ್ತು ದೇವಶ್ಚ ಪರಶ್ಚ ಪಿತ್ರ್ಯಃ ಕೇಚಿತ್ತು ಕೃಷ್ಣೋ ಸಿತಪಂಚಮೀತಃ॥



ಆದೌಶುಕ್ಲ ಪ್ರವಕ್ತವ್ಯಃ ಕೇಚಿತ್ ಕೃಷ್ಣೇಪಿ ಮಾಸಕೇ॥೨೧॥

ಮಾಸದ ಪೂರ್ವಾರ್ಧ,ಉತ್ತರಾರ್ಧಗಳು ಕ್ರಮವಾಗಿ ಶುಕ್ಲಪಕ್ಷ, ಕೃಷ್ಣಪಕ್ಷ ಎಂದು ಕರೆಸಿಕೊಳ್ಳುತ್ತವೆ. ಶುಕ್ಲಪಕ್ಷವು ದೇವತೆಗಳಿಗೆ ಸಂಬಂಧಿಸಿದ್ದು, ಕೃಷ್ಣಪಕ್ಷವು ಪಿತೃಗಳಿಗೆ ಸಂಬಂಧಿಸಿದ್ದು. ಕೆಲವರು ಕೃಷ್ಣಪಕ್ಷಪಂಚಮಿಯಿಂದ ಶುಕ್ಲಪಕ್ಷಪಂಚಮೀವರೆಗೆ ಕೃಷ್ಣಪಕ್ಷವೆಂದು ಪರಿಗಣಿಸುತ್ತಾರೆ.

ಮಾಸಾಭಾಚ್ಚಾಂದ್ರಭಂ ಯಾವತ್ ಗಣಯೇತ್ತಾವದೇವ ತು।
ಯಾವಂತಿ ಗಣನಾದ್ಭಾನಿ ತಾವತ್ಯಂಸ್ತಿಥಯಃ ಕ್ರಮಾತ್॥೨೨॥

ಮಾಸನಕ್ಷತ್ರದಿಂದ ಪಂಚಾಂಗದಲ್ಲಿರುವ ನಿತ್ಯನಕ್ಷತ್ರದವರೆಗೆ ಎಣಿಸಲು ಎಷ್ಟು ಸಂಖ್ಯೆ ಬರುವುದೋ ಅಷ್ಟು ತಿಥಿಗಳೆಂದು ತಿಳಿಯಬೇಕು. ಆದರೆ ಇದು ಸ್ಥೂಲಕ್ರಮವಾಗಿದೆ. ಮಾಸ ನಕ್ಷತ್ರವೆಂದರೆ ಚೈತ್ರಕ್ಕೆ ಚಿತ್ರಾ, ವೈಶಾಖಕ್ಕೆ ವಿಶಾಖಾ, ಜ್ಯೇಷ್ಠಕ್ಕೆ ಜ್ಯೇಷ್ಠ, ಆಷಾಢಕ್ಕೆ ಪೂರ್ವಾಷಾಢ, ಶ್ರಾವಣಕ್ಕೆ ಶ್ರವಣ, ಭಾದ್ರಪದಕ್ಕೆ ಪೂರ್ವಾಭಾದ್ರ, ಆಶ್ವೀಜಕ್ಕೆ ಅಶ್ವಿನಿ, ಕಾರ್ತಿಕಕ್ಕೆ ಕೃತ್ತಿಕಾ, ಮಾರ್ಗಶಿರಕ್ಕೆ ಮೃಗಶಿರ, ಪುಷ್ಯಕ್ಕೆ ಪುಷ್ಯ, ಮಾಘಕ್ಕೆ ಮಘ, ಫಾಲ್ಗುಣಕ್ಕೆ ಪೂರ್ವಫಲ್ಗುಣಿ ಹೀಗೆ ಯಾವ ನಕ್ಷತ್ರ ಯಾವ ಮಾಸದಲ್ಲಿ ಹೇಳಿದೆಯೋ ಆ ನಕ್ಷತ್ರ ಸಾಮಾನ್ಯವಾಗಿ ಆಯಾ ಪೂರ್ಣಿಮೆಯ ದಿನ ವಿರುತ್ತದೆ. ಅಂದರೆ ಪೂರ್ಣಿಮಾಂತವಾಗಿ ಮಾಸಗಣನೆಯು ಸರಾಸರಿಯಾಗಿ ಸರಿ ಹೋಗುವುದು.

ಪ್ರತಿಪದ್ವಿತಿಯಾ ಚೈವ ತೃತೀಯಾ ತದನಂತರಮ್। ಚತುರ್ಥೀ ಪಂಚಮೀಷಷ್ಠೀ ಸಪ್ತಮೀ ಚಾಷ್ಟಮೀ
ತಥಾ॥೨೩॥ ನವಮೀ ದಶಮೀ ಚೈವೈಕಾದಶೀ ದ್ವಾದಶೀ ಕ್ರಮಾತ್।ತತೋ ತ್ರಯೋದಶೀ ಚೈವ
ಪ್ರೋಕ್ತಾ ಪಶ್ಚಾತ್ ಚತುರ್ದಶೀ॥ಪೌರ್ಣಿಮಾ ಶುಕ್ಲಪಕ್ಷೇತು ಕೃಷ್ಣಪಕ್ಷೇತ್ವಮಾ ಸ್ಮೃತಾ॥೨೪॥

ಪ್ರತಿಪತ್, ದ್ವಿತಿಯಾ, ತೃತೀಯಾ,ಚತುರ್ಥೀ, ಪಂಚಮೀ,ಷಷ್ಠೀ,ಸಪ್ತಮೀ,ಅಷ್ಟಮೀ, ನವಮೀ, ದಶಮೀ, ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶೀ, ಶುಕ್ಲಪಕ್ಷದಲ್ಲಿ ಪೂರ್ಣಿಮಾ, ಕೃಷ್ಣಪಕ್ಷದಲ್ಲಿ ಅಮಾವಾಸ್ಯೆ ಎಂದು ಕ್ರಮವಾಗಿ ತಿಳಿಯಬೇಕು.

ಕ್ರಮಾತ್ತಿಥೀನಾಂ ಪತಯೋಗ್ನಿಧಾತೃಗೌರೀಗಣೇಶೋಡುಗುಹೋರವಿಶ್ಚ।
ಮಹೇಶದುರ್ಗಾಂತಕವಿಶ್ವವಿಷ್ಣು ಕಾಮೇಶಸೋಮಾಃ ಪಿತರೋಹಿ ದರ್ಶೇ॥೨೫॥

ಪ್ರತಿಪತ್‌ಗೆ ಅಗ್ನಿ, ದ್ವಿತಿಯಾಕ್ಕೆ ಬ್ರಹ್ಮ, ತೃತೀಯಾಕ್ಕೆ ಗೌರಿ, ಚತುರ್ಥೀಗೆ ಗಣಪತಿ, ಪಂಚಮೀಗೆ ನಾಗರಾಜ, ಷಷ್ಠೀಗೆ ಸ್ಕಂದ, ಸಪ್ತಮೀಗೆ ಸೂರ್ಯ, ಅಷ್ಟಮೀಗೆ ಮಹಾರುದ್ರದೇವರು, ನವಮೀಗೆದುರ್ಗದೇವಿ, ದಶಮೀಗೆ ಯಮದೇವರು, ಏಕಾದಶೀ ವಿಶ್ವೇದೇವತಗಳು, ದ್ವಾದಶೀಗೆ ವಿಷ್ಣು, ತ್ರಯೋದಶಿಗೆ ಮನ್ಮಥ, ಚತುರ್ದಶೀ ರುದ್ರದೇವರು, ಪೂರ್ಣಿಮಾಕ್ಕೆ ಚಂದ್ರ, ಅಮಾವಾಸ್ಯೆಗೆ ಪಿತೃದೇವತೆಗಳು ಕ್ರಮವಾಗಿ ತಿಥಿಗಳಿಗೆ ಅಧಿಪತಿಗಳಾಗುತ್ತಾರೆಂದು ತಿಳಿಯಬೇಕು.

ಕೂಷ್ಮಂಡಬೃಹತೀಫಲಾನಿ ಲವಣಂವರ್ಜ್ಯಂ ತಿಲಾಮ್ಲಂ ತಥಾ,

ತೈಲಂ ಚಾಮಲಕಂ ದಿವಂ ಪ್ರವಸತಾ ಶೀರ್ಷಂ ಕಪಾಲಾಂತ್ರಕಮ್।
ನಿಷ್ಪಾವಾಶ್ಚ ಮಸೂರಿಕಾ ಫಲಮಥೋ ವೃಂತಾಕಸಂಜ್ಞಂ ಮಧು, ದ್ಯೂತಂ
ಸ್ತ್ರೀಗಮನಂ ಕ್ರಮಾತ್ ಪ್ರತಿಪದಾದಿಷ್ವೇವಮಾಷೋಡಶ॥೨೭॥

ಕುಂಬಳಕಾಯಿ ಬೃಹತೀಫಲ ಉಪ್ಪು ಎಳ್ಳು ಹುಳಿ ಎಣ್ಣೆ ನೆಲ್ಲಿಕಾಯಿ ತೆಂಗು ಕಾಶೀಫಲ ಪಡವಲ ನಿಷ್ಪಾವ ಮಸೂರ ಬದನೆ ಜೇನು ದ್ಯೂತ ಸ್ತ್ರೀಸಂಗ ಇವು ಪ್ರತಿಪದೆಯಿಂದ ೧೬ತಿಥಿಗಳಲ್ಲಿ ವರ್ಜಿಸಬೇಕು.

ಆದಿತ್ಯಶ್ಚಂದ್ರಮಾಭೌಮೋ ಬುಧಶ್ಚಾಥ ಬೃಹಸ್ಪತಿಃ।
ಶುಕ್ರಃ ಶನೈಶ್ಚರಶ್ಚೈತೇ ವಾಸರಾಃ ಪರಿಕೀರ್ತಿತಾಃ॥೨೮॥

ರವಿಸೋಮಮಂಗಳಬುಧಗುರುಶುಕ್ರಶನಿವಾರಗಳು ಎಂದು ಕ್ರಮವಾಗಿ ತಿಳಿಯಬೇಕು.

ಗುರುಶ್ಚಂದ್ರೋ ಬುಧಃ ಶುಕ್ರಃ ಶುಭಾಃ ವಾರಾಃ ಶುಭೇ ಸ್ಮೃತಾಃ।
ಕ್ರೂರಾಸ್ತು ಕ್ರೂರಕೃತ್ಯೇಷು ಸೂರಾರಸೂರಜಾಃ॥೨೯॥

ಗುರುವಾರಸೋಮವಾರಬುಧವಾರಶುಕ್ರವಾರಗಳು ಶುಭವಾರಗಳು ಶುಭಕಾರ್ಯಗಳಿಗೆ ಒಳ್ಳೆಯದು ರವಿವಾರ ಮಂಗಳವಾರ ಶನಿವಾರಕ್ರೂರ ಕರ್ಮಗಳಿಗೆ ಒಳ್ಳೆಯದು.

ರವಿಃಶುಕ್ರೋಮಹೀಸೂನುಃ ಸ್ವರ್ಭಾನುರ್ಭಾನುಜೋ ವಿಧುಃ।
ಬುಧೋಬೃಹಸ್ಪತಿಶ್ಚೈವ ದಿಶಾಮೀಶಾಸ್ತಥಾ ಗ್ರಹಾಃ॥೩೦॥

ಪೂರ್ವಕ್ಕೆ ರವಿ,ಆಗ್ನೇಯಕ್ಕೆ ಶುಕ್ರ, ದಕ್ಷಿಣಕ್ಕೆ ಮಂಗಳ, ನೈಋತ್ಯಕ್ಕೆ ರಾಹು, ಪಶ್ಚಿಮಕ್ಕೆಶನಿ, ವಾಯುವ್ಯಕ್ಕೆಚಂದ್ರ, ಉತ್ತರಕ್ಕೆ ಬುಧ, ಈಶಾನ್ಯಕ್ಕೆ ಗುರು ಗಳು ಕ್ರಮವಾಗಿ ಪೂರ್ವಾದಿ ದಿಕ್ಕುಗಳಿಗೆ ಅಧಿಪತಿಗಳೆಂದು ತಿಳಿಯಬೇಕು.

ಸೋಮಸೌಮ್ಯಗುರುಶ್ಶುಕ್ರವಾಸರಾಃ ಸರ್ವಕರ್ಮಸು ಭವಂತಿ ಸಿದ್ಧಿದಾಃ।
ಭಾನುಭೌಮಶನಿವಾಸರೇಷು ಚ ಪ್ರೋಕ್ತಮೇವ ಖಲು ಕ್ರಮಸಿದ್ಧ್ಯತಿ॥೩೧॥

ಸೋಮಬುಧಗುರುಶುಕ್ರವಾರಗಳು ಎಲ್ಲಾ ಕಾರ್ಯಸಿದ್ಧಿಪ್ರದ ದಿನಗಳಾಗಿವೆ. ರವಿಮಂಗಳಶನಿವಾರಗಳಲ್ಲಿ ಹೇಳಲ್ಪಟ್ಟ ಕಾರ್ಯಗಳು ಮಾತ್ರ ಸಿದ್ಧಿದಾಯಕಗಳಾಗಿವೆ.

ನವಾರದೋಷಾ ಪ್ರಭವಂತಿ ರಾತ್ರೌ ದೇವೇಜ್ಯದೈತ್ಯೇಜ್ಯದಿವಾಕರಾಣಾಮ್।
ದಿವಾ ಶಶಾಂಕರ್ಕಜಭೂಸುತಾನಾಂ ಸದಾ ಹಿ ನಿಂದ್ಯೋ ಬುಧವಾರದೋಷಃ॥೩೨॥

ಗುರುಶುಕ್ರಭಾನುವಾರಗಳಲ್ಲಿ ರಾತ್ರಿ ದೋಷವಿಲ್ಲ, ಚಂದ್ರಶನಿ ಮಂಗಳ ವಾರಗಳಲ್ಲಿ ಹಗಲು ದೋಷವಿಲ್ಲ ಸದಾಕಾಲ ಬುಧವಾರ ದೋಷ ತ್ಯಾಜ್ಯವಿರುತ್ತದೆ.

ಚೈತ್ರಾದಿ ದ್ವಿಗುಣಾ ಮಾಸಾ ಗತಾಶ್ಚ ತಿಥಿಭಿರ್ಯುತಾಃ।
ಸಪ್ತಭಿಶ್ತು ಹರೇದ್ಭಾಗಂ ಶೇಷಾಂಕೇ ದಿನ ಉಚ್ಯತೇ॥೩೩॥



ಚೈತ್ರಾದಿ ಮಾಸಸಂಖ್ಯೆಯನ್ನು ಎರಡರಿಂದ ಗುಣಿಸಿ ಗತತಿಥಿ ಸಂಖ್ಯೆಯನ್ನು ಸೇರಿಸಿ ೭ ರಿಂದ ಭಾಗಿಸಿದರೆ ಶೇಷಾಂಕವೇ ದಿನವಾಗುತ್ತದೆ.

ಶ್ರೀ ದಿನಂ ಕಲಹಶ್ಚೈವ ಆನಂದಃ ಕಲಾಕಂಟಕಃ।
ಧರ್ಮದಿನಂ ತಪಶ್ಚೈವ ಸಪ್ತಮೋ ಜನನಂದನಃ॥೩೪॥

ಶ್ರೀದಿನ ಕಲಹ ಆನಂದ ಕಲಾಕಂಟಕ ಧರ್ಮದಿನ ತಪಸ್ಸು ಜನನಂದನ ಎಂಬು ೭ದಿನಗಳನ್ನು ತಿಳಿಯಬೇಕು.

ದ್ವಿನಿಘ್ನಮಾಸ್ತಿಥಿಯುಗ್ವಿಧೂನೋ ಭಶೇಷಿತಃ ಸ್ಯಾದುಡುಶೇಷ ಸಂಖ್ಯಾ।
ಮಾಸಸ್ತು ಶುಕ್ಲಾದಿತ ಏವ ಬೋಧ್ಯಃ ಕೃಷ್ಣೇ ದ್ವಿಹೀನೇ ಮುಯೋ ವದಂತಿ॥೩೫॥

ಚೈತ್ರಾದಿ ಮಾಸಸಂಖ್ಯೆಯನ್ನು ೨ ರಿಂದ ಗುಣಿಸಿ ತಿಥಿಸಂಖ್ಯೆ ಯನ್ನು ಜೋಡಿಸಿ ಶುಕ್ಲಪಕ್ಷವಾಗಿದ್ದರೆ ೧ ಸೇರಿಸಿ ಕೃಷ್ಣಪಕ್ಷವಾದರೆ ೨ ಸೇರಿಸಿ ಬಂದಸಂಖ್ಯೆಯನ್ನು ೨೭ ರಿಂದ ಭಾಗಿಸಿದರೆ ಬಂದ ಶೇಷಕ್ಕನು ಗುಣವಾಗಿ ಅಶ್ವಿನ್ಯಾದಿ ನಕ್ಷತ್ರಗಳ ಸಂಖ್ಯೆಯನ್ನು ತಿಳಿಯಬಹುದೆಂದು ಮುನೀಶ್ವರರು ಹೇಳಿದ್ದಾರೆ.

ಅಶ್ವಿನೀಭರಣೀಚೈವ ಕೃತ್ತಿಕಾ ರೋಹಿಣಿಮೃಗಃ।
ಆರ್ದ್ರಾಪುನರ್ವಸುಃಪುಷ್ಯಸ್ತತೋಶ್ಲೇಷಾ ಮಘಾ ತಥಾ॥೩೬॥
ಪೂರ್ವಾಫಲ್ಗುನೀಕಾ ತಸ್ಮಾದುತ್ತರಾಫಾಲ್ಗುನೀ ತತಃ।
ಹಸ್ತಶ್ಚಿತ್ರಾ ತಥಾ ಸ್ವಾತಿ ವಿಶಾಖಾ ತದನಂತರಮ್॥೩೭॥
ಅನೂರಾಧಾ ತತೋ ಜ್ಯೇಷ್ಠಾ ತತೋ ಮೂಲಂ ನಿಗದ್ಯತೇ।
ಪೂರ್ವಾಷಾಢೋತ್ತರಾಷಾಢಸ್ತ್ವಭಿಜಿಚ್ಛ್ರವಣಸ್ತಥಾ॥೩೮॥
ಧನಿಷ್ಠಾ ಶತತಾರಾಖ್ಯಂ ಪೂರ್ವಾಭಾದ್ರಪದಾ ತತಃ।
ಉತ್ತರಾಭಾದ್ರಕಂ ಚೈವ ರೇವತ್ಯಾತಾನಿ ಭಾನಿಚ॥೩೯॥

ಅಶ್ವಿನೀ,ಭರಣೀ, ಕೃತ್ತಿಕಾ, ರೋಹಿಣೀ,ಮೃಗಶಿರ, ಆರ್ದ್ರಾ,ಪುನರ್ವಸು, ಪುಷ್ಯ,ಆಶ್ಲೇಷಾ, ಮಘಾ,ಪೂರ್ವಾಫಲ್ಗುನೀ, ಉತ್ತರಾಫಲ್ಗುನೀ, ಹಸ್ತ,ಚಿತ್ರಾ, ಸ್ವಾತಿ, ವಿಶಾಖಾ, ಅನೂರಾಧಾ, ಜ್ಯೇಷ್ಠಾ, ಮೂಲಾ, ಪೂರ್ವಾಷಾಢಾ, ಉತ್ತರಾಷಾಢಾ,ಅಭಿಜಿತ್,ಶ್ರವಣ, ಧನಿಷ್ಠಾ, ಶತತಾರಾ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತ್ಯೀಎಂಬುದಾಗಿ ೨೮ ನಕ್ಷತ್ರಗಳು.

ದಸ್ರೌ ಯಮೋನಲೋ ಧಾತಾ ಚಂದ್ರೋ ರುದ್ರೋದಿತಿರ್ಗುರುಃ।
ಭುಜಂಗಮಶ್ಚ ಪಿತರೋ ಭಗೋರ್ಯಮದಿವಾಕರೌ॥೪೦॥
ತ್ವಷ್ಟಾ ವಾಯುಶ್ಚ ಶಕ್ರಾಗ್ನೀ ಮಿತ್ರಃ ಶಕ್ರಶ್ಚ ನಿರ್ಋತಿಃ।
ಜಲಂ ವಿಶ್ವೇ ವಿಧಿರ್ವಿಷ್ಣುರ್ವಾಸವೋ ವರುಣಸ್ತಥಾ॥೪೧॥

ಅಜೈಕಪಾದಹಿರ್ಬುದ್ನ್ಯಃ ಪೂಷೇತಿ ಕಥಿತೋ ಬುಧೈಃ॥

ಅಷ್ಟಾವಿಂಶತಿ ಸಂಖ್ಯಾನಾಂ ನಕ್ಷತ್ರಾಣಾಂಮಧೀಶ್ವರಾಃ॥೪೨॥

ಅಶ್ವಿನಿಗೆ ಅಶ್ವಿನಿ ದೇವತೆಗಳು ಭರಣಿಗೆ ಯಮ, ಕೃತ್ತಿಕಾಕ್ಕೆ ಅಗ್ನಿ, ರೋಹಿಣಿಗೆ ಬ್ರಹ್ಮ, ಮೃಗಶಿರಾಕ್ಕೆ ಚಂದ್ರ, ಆರ್ದ್ರಾಕ್ಕೆ ಶಿವ,ಪುನರ್ವಸು, ಪುಷ್ಯ,ಆಶ್ಲೇಷಾ, ಮಘಾ,ಪೂರ್ವಾಫಲ್ಗುನೀ, ಉತ್ತರಾಫಲ್ಗುನೀ, ಹಸ್ತ,ಚಿತ್ರಾ, ಸ್ವಾತಿ, ವಿಶಾಖಾ, ಅನೂರಾಧಾ, ಜ್ಯೇಷ್ಠಾ, ಮೂಲಾ, ಪೂರ್ವಾಷಾಢಾ, ಉತ್ತರಾಷಾಢಾ, ಅಭಿಜಿತ್, ಶ್ರವಣ, ಧನಿಷ್ಠಾ, ಶತತಾರಾ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತ್ಯೀಎಂಬುದಾಗಿ ೨೮ ನಕ್ಷತ್ರಗಳು.

ಚೂಚೇಚೋಲಾ ಸ್ತು ಚಾಶ್ವಿನ್ಯ ಲೀಲೂಲೇಲೋ ಭರಣ್ಯಪಿ।

ಆಈ ಊಏ ಕೃತ್ತಿಕಾಚ ಓವಾವೀವೂಚ ರೋಹಿಣೀ॥೪೩॥

ವೇವೋಕಾಕೀ ಮೃಗಶಿರಾ ಕುಘಙಛಾರ್ದ್ರಕಂ ತಥಾ।

ಕೇಕೋಹಾಹಿ ಪುನರ್ವಸ್ವಃ ಹೂಹೇಹೋಡ ಚ ಪುಷ್ಯಭಮ್॥೪೪॥

ಡೀಡೂಡೇಡೋ ತಥಾಶ್ಲೇಷಾ ಮಾಮಿಮೂಮೇ ಮಘಾ ತಥಾ।

ಮೋಟಾಟೀಟು ಪೂರ್ವಭಂಚ ಟೇಟೋಪಾಪ್ಯುತ್ತರಾ ಮತಾ॥೪೫॥

ಪೂಷಣಠ ಹಸ್ತಃಋಕ್ಷಂ ಪೇಪೋರಾರಿ ಚ ಚಿತ್ರಭಮ್॥

ರೂರೇರೋತಾ ಸ್ವಾತಿ ಋಕ್ಷಂ ತೀತೂತೇತೋ ವಿಶಾಖಭಮ್॥೪೬॥

ನಾನೀನೂನೇ ಚಾನುರಾಧಾ ನೋಯಾಯಿಯೂತು ಜ್ಯೇಷ್ಠಭಮ್॥

ಯೇಯೋಬಭೀ ಭವೇನ್ಮೂಲಾ ಬುಧಫಢ ಪೂರ್ವಾಷಾಢಾ॥೪೭॥

ಬೇಬೋಜಾಜ್ಯುತ್ತರಾಷಾಢಾ ಜೂಜೇಜೋಖಾಭಿಜಿತ್ ಸ್ಮೃತಾ।

ಖೀಖೂಖೇಖೋ ಶ್ರವಣಭಂ ಗಾಗೀಗೂಗೇ ಧನಿಷ್ಠಭಮ್॥೪೮॥

ಗೋಸಾಸೀಸೂ ಶತಭಿಷಾ ಸೇಸೋದಾದೀ ಪೂರ್ವಾಭಾದ್ರಾ।

ದೂಝಞಥೋತ್ತರಾಭಾದ್ರಾ ದೇದೋಚಾಚೀಚ ರೇವತೀ॥೪೯॥

ಒಂದು ನಕ್ಷತ್ರಕ್ಕೆ ನಾಲ್ಕು ಪಾದಗಳು. ಅದಕ್ಕನುಸಾರವಾಗಿ ಚೂಚಾಚೋಲ ಅಶ್ವಿನಿ, ಲೀಲೂಲೇಲೋ ಭರಣಿ ಇತ್ಯಾದಿಯಾಗಿ ಪ್ರತಿನಕ್ಷತ್ರದ ನಾಲ್ಕುಪಾದಗಳ ಅಕ್ಷರಗಳಿಂದ ನಾಮನಕ್ಷತ್ರಗಳನ್ನು ತಿಳಿಯಬೇಕು.

ಮೇಷೋ ವೃಷಶ್ಚಮಿಥುನಃ ಕರ್ಕಃ ಸಿಂಹಶ್ಚ ಕನ್ಯಕಾ।

ತುಲಾಲಿಧನುರ್ನಕ್ರಃ ಘಟಮೀನಾಶ್ಚ ರಾಶಯಃ॥೫೦॥

ಮೇಷ,ವೃಷಭ,ಮಿಥುನ,ಕರ್ಕಾಟಕ,ಸಿಂಹ,ಕನ್ಯಾ,ತುಲಾ,ವೃಶ್ಚಿಕ, ಧನುಸ್ಸು,ಮಕರ,ಕುಂಭ,ಮೀನ ಎಂಬುದಾಗಿ ೧೨ ರಾಶಿಗಳು.



ಸಿಂಹಸ್ಯಾಧಿಪತಿಸ್ಸೂರ್ಯಃ ಕರ್ಕಟಸ್ಯ ನಿಶಾಕರಃ।

ಮೇಷವೃಶ್ಚಿಕಯೋರ್ಭೌಮಃ ಕನ್ಯಾಮಿಥುನಯೋರ್ಬುಧಃ॥೫೧॥

ಧನುರ್ಮೀನಾ ದ್ವಯೋಮಂತ್ರೀ ತುಲಾವೃಷಭಯೋರ್ಭೃಗುಃ।

ಮಕರಕುಂಭರಾಶೌ ಚ ನಾಯಕಃ ಸೂರ್ಯನಂದನಃ॥೫೨॥

ಸಿಂಹಕ್ಕೆ ರವಿಯು,ಕರ್ಕಾಟಕಕ್ಕೆ ಚಂದ್ರನು, ಮೇಷ–ವೃಶ್ಚಿಕಗಳಿಗೆ ಕುಜನು, ಕನ್ಯಾ–ಮಿಥುನಗಳಿಗೆ ಬುಧನು,ಧನು–ಮೀನಗಳಿಗೆ ಗುರುವು, ವೃಷಭ–ತುಲಾಗಳಿಗೆ ಶುಕ್ರನು,ಮಕರಕುಂಭ ರಾಶಿಗಳಿಗೆ ಶನಿಯು ರಾಶ್ಯಾಧಿಪತಿ ಗಳಾಗುತ್ತಾರೆ.

ಸಪ್ತವಿಂಶತಿ ಭಾನಾಂ ಚ ನವಭಿರ್ನವಭೀ ಪದೈಃ।

ಅಶ್ವಿನೀ ಪ್ರಮುಖಾನಾಂ ಚ ಮೇಷಾದ್ಯಾ ರಾಶಯಃ ಸ್ಮೃತಾಃ॥೫೩॥

೨೭ ನಕ್ಷತ್ರಗಳ ಒಂಬತ್ತು–ಒಂಬತ್ತು ಪಾದಗಳಿಗೆ ಒಂದೊಂದು ರಾಶಿಯಂತೆ ಅಶ್ವಿನಿಯೇ ಮೊದಲಾಗಿ ಮೇಷಾದಿ ೧೨ ರಾಶಿಗಳಾಗುತ್ತವೆ.

ಅಶ್ವಿನೀ ಭರಣೀಕೃತ್ತಿಕಾ ಪಾದಂ ಮೇಷಃ।

ಕೃತ್ತಿಕಾಸ್ತ್ರಯಃ ಪಾದಾ ರೋಹಿಣೀ ಮೃಗಶಿರಾರ್ಧ ವೃಷಭಃ॥೫೪॥

ಮೃಗಶಿರಾರ್ಧ ಆರ್ದ್ರಾ ಪುನರ್ವಸುಪಾದತ್ರಯಂ ಮಿಥುನಃ॥

ಪುನರ್ವಸು ಪಾದಂ ಪುಷ್ಯ ಅಶ್ಲೇಷಾಂತಂ ಕರ್ಕಾಟಕಃ॥೫೫॥

ಮಘಾ ಪೂರ್ವಾ ಉತ್ತರಾಫಲ್ಗುನೀಪಾದ ಮೇಕಂ ಸಿಂಹಃ।

ಉತ್ತರಾಫಲ್ಗುನೀತ್ರಯಃ ಪಾದಾಃ ಹಸ್ತಶ್ಚಿತ್ರಾರ್ಧಂ ಕನ್ಯಾ॥೫೬॥

ಚಿತ್ರಾರ್ಧಂ ಸ್ವಾದಿ ವಿಶಾಖಾಪಾದತ್ರಯಂ ತುಲಾ।

ವಿಶಾಖಪಾದ ಮೇಕಮನುರಾಧಾ ಜ್ಯೇಷ್ಠಾಂತಂ ವೃಶ್ಚಿಕಃ॥೫೭॥

ಮೂಲಂಚ ಪೂರ್ವಾಷಾಢೋತ್ತ ರಾಷಾಢಾಪಾದಮೇಕಂ ಧನುಃ।

ಉತ್ತರಾಷಾಢಾತ್ರಯಃ ಶ್ರವಣಧನಿಷ್ಠಾರ್ಧಂ ಮಕರಃ॥೫೮॥

ಧನಿಷ್ಠಾರ್ಧಂ ಶತಭಿಷಾ ಪೂರ್ವಾಭಾದ್ರಾಸ್ತ್ರಯಃ ಕುಂಭಃ।

ಪೂರ್ವಾಭಾದ್ರಪಾದಂ ಉತ್ತರಾಭಾದ್ರ ರೇವತ್ಯಾಂತಂ ಮೀನಃ॥೫೯॥

ಮೇಲೆ ತಿಳಿಸಿದ ಶ್ಲೋಕಗಳಂತೆ ನಕ್ಷತ್ರಗಳಿಗೆ ರಾಶಿಯನ್ನು ತಿಳಿಯಬೇಕು.

ಮೂಲಾಗ್ನೇಯ ಮಘಾದ್ವಿದೈವಭರಣೀಸಾರ್ಪಾಣಿ ಪೂರ್ವಾತ್ರಯಂ

ಜ್ಯೋತಿರ್ವಿದ್ಭಿರಧೋಮುಖಂ ಹಿ ನವಕಂ ಭಾನಾಮಿದಂ ಕೀರ್ತಿತಮ್।

ವಾಪೀಕೂಪತಡಾಗಗರ್ತ ಪರಿಖಾಖಾತಂ ನಿಧೇರುದ್ಧೃತಿ

ಕ್ಷೇಪೌ ದ್ಯೂತಬಿಲಪ್ರವೇಶಗಣಿತಾರಂಭಾಃ ಪ್ರಸಿದ್ಧ್ಯಂತಿ ಚ॥೬೧॥

ಮೂಲಾ,ಕೃತ್ತಿಕಾ,ಮಘಾ,ವಿಶಾಖಾ,ಭರಣೀ,ಆಶ್ಲೇಷಾ,ಪೂರ್ವಾಫಲ್ಗುಣೀ,

ಪೂರ್ವಾಷಾಢಾ,ಪೂರ್ವಾಭಾದ್ರ ಈ ಒಂಬತ್ತು ನಕ್ಷತ್ರಗಳು ಅಧೋಮುಖ ನಕ್ಷತ್ರಗಳೆಂದು ಜ್ಯೋತಿಷ್ಯವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ನಕ್ಷತ್ರಗಳಲ್ಲಿ ಭಾವಿತೋಡುವುದು, ಕಲ್ಯಾಣಿನಿರ್ಮಾಣ, ಸರೋವರ ನಿರ್ಮಾಣ, ಪರಿಖಾವಲಯ (ಕೋಟೆಯ ಸುತ್ತಲೂ ಆಳವಾಗಿತಗ್ಗು ತೋಡವಿಕೆ), ತಗ್ಗುತೋಡುವಿಕೆ, ನಿಕ್ಷೇಪಗಳಿಗಾಗಿ ತೋಡುವಿಕೆ, ಕಣಜತೋಡುವಿಕೆ, ನಿಧಿಗಾಗಿ ತೋಡುವಿಕೆ, ಗುಹಾಪ್ರವೇಶ,ದ್ಯೂತ, ಗಣಕಯಂತ್ರ ಹಾಗು ಗಣಿತಕರ್ಮಗಳನ್ನು ಪ್ರಾರಂಭಿಸಬೇಕೆಂಬುದು ಪ್ರಸಿದ್ಧವಾದವಿಚಾರವಾಗಿದೆ.

ಜ್ಯೇಷ್ಠಾದಿತ್ಯಕರಾಶ್ವಿನೀಮೃಗಶಿರಃ ಪೂಷಾನುರಾಧಾನಿಲ
ತ್ವಾಷ್ಟ್ರಾಖ್ಯಾನಿ ವದಂತಿ ಭಾನಿ ಮುನಯಃಸ್ತಿರ್ಯಙ್ಮುಖಾನ್ಯೇಷು ಚ।
ಅಶ್ವೇಭೋಷ್ಟ್ರಲುಲಾಯರಾಸಭವೃಷೋರಭ್ರಾದಿದಾಂತ್ಯಶ್ವಿನಾ,
ಗಂತ್ರೀಯಂತ್ರಹಲಪ್ರವಾಹಗಮನಾರಂಭಾಃ ಪ್ರಸಿದ್ಧ್ಯಂತಿ ಚ ॥೬೨॥

ಜ್ಯೇಷ್ಠಾ,ಪುನರ್ವಸು,ಹಸ್ತ,ಅಶ್ವಿನೀ,ಮೃಗಶಿರ,ಪೂರ್ವಾಷಾಢ,ಅನುರಾಧಾ,ಸ್ವಾತಿ,ಚಿತ್ರಾ ಈ ನಕ್ಷತ್ರಗಳು ತಿರ್ಯಙ್ಮುಖನಕ್ಷತ್ರಗಳೆಂದು ಮುನಿಗಳು ಹೇಳುತ್ತಾರೆ. ಈ ನಕ್ಷತ್ರಗಳಲ್ಲಿ ಕುದುರೆ,ಆನೆ, ಒಂಟೆ,ಎಮ್ಮೆ,ಕತ್ತೆ, ಎತ್ತು,ಕುರಿ,ಆಡು,ನಾಯಿ ಈ ತಿರ್ಯಕ್ ಪ್ರಾಣಿಗಳನ್ನು ಸಾಕಲು ಪ್ರಾರಂಭಿಸುವುದು,ಕೃಷಿಕಾರ್ಯಕ್ಕಾಗಿ ನೇಗಿಲು,ಕುಂಟೇ ಇತ್ಯಾದಿ ಉಳುವ ಯಂತ್ರಗಳ ಕಾರ್ಯಾರಂಭ ಮಾಡುವಿಕೆ, ಹರಿಯುವ ಜಲಪ್ರವಾಹದ ಪ್ರಾರಂಭಿಸುವಿಕೆ, ಯಾತ್ರಾ ಪ್ರವಾಸಾದಿಗಳನ್ನು ಪ್ರಾರಂಭಿಸಿದರೆ ಇಷ್ಟಸಿದ್ಧಿಯಾಗುವುದು.

ಪುಷ್ಯಾರ್ದ್ರಾ ಶ್ರವಣೋತ್ತರಾ ಶತಭಿಷಕ ಬ್ರಾಹ್ಮಶ್ರವಿಷ್ಠಾಹ್ವಯಾ–
ನ್ಯೂರ್ಧ್ವಸ್ಯಾನಿ ನವೋದಿತಾನೀ ಮುನಿಭಿರ್ಧಿಷ್ಣನ್ಯಥೈತೇಷು ಚ।
ಪ್ರಾಸಾದಧ್ವಜಧರ್ಮವಾರಣಗೃಹಪ್ರಾಕಾರಸತ್ತೋರಣೋ–
ಚ್ಛ್ರಾಯಾರಾಯವಿಧಿರ್ಹಿತೋ ನರಪತೇಃ ಪಟ್ಟಾಭಿಷೇಕಾದಿ ಚ॥೬೩॥

ಪುಷ್ಯ, ಆರ್ದ್ರಾ, ಶ್ರವಣೋತ್ತರಾ,ಶತಭಿಷ, ರೋಹಿಣಿ, ಧನಿಷ್ಠಾ ಇವು ಒಂಬತ್ತು ನಕ್ಷತ್ರಗಳು ಊರ್ಧ್ವಮುಖನಕ್ಷತ್ರಗಳೆಂದು ಮುನಿಗಳು ಹೇಳುತ್ತಾರೆ. ಇವುಗಳಲ್ಲಿ ದೇವಮಂದಿರಕಟ್ಟಿಸುವುದು, ಧ್ವಜವನ್ನು ಮಾಡುವುದು, ಕೋಟೆ, ಗೃಹಮಧ್ಯಭಾಗ, ಮಹಾದ್ವಾರತೋರಣ ಕಟ್ಟುವಿಕೆ, ತೋಟಹಾಕುವಿಕೆ, ರಾಜ್ಯಾಭಿಷೇಕಾದಿಗಳನ್ನು ಮಾಡುವುದರಿಂದ ಶುಭವಾಗುವುದು.

ರೋಹಿಣೀ ಸಹಿತಮುತ್ತರಾತ್ರಯಂ ಕೀರ್ತಯಂತಿ ಮುನಯೋ ಧ್ರುವಾಹ್ವಯಮ್।
ಬೀಜಹರ್ಮ್ಯನಗರಾಭಿಷೇಚನಾರಾಮಶಾಂತಿಷು ಹಿತಂ ಸ್ಥಿರೇಷು ಚ॥೬೪॥

ರೋಹಿಣೀ, ಉತ್ತರಾಫಲ್ಗುಣೀ, ಉತ್ತರಾಷಾಢ, ಉತ್ತರಾಭಾದ್ರ ಈ ನಾಲ್ಕುನಕ್ಷತ್ರಗಳನ್ನು ಧ್ರುವನಕ್ಷತ್ರಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಬೀಜಬಿತ್ತುವುದು, ಅರಮನೆ, ನಗರಪ್ರವೇಶ,



ಪಟ್ಟಾಭಿಷೇಕ, ತೋಟಹಾಕುವುದು, ಶಾಂತಿಕರ್ಮಗಳನ್ನು ಮಾಡುವುದು ಶುಭಕರವಾಗಿದೆ.

ತ್ವಾಷ್ಟ್ರಮಿತ್ರಶಶಿಪೂಷದೈವತಾನ್ಯಾಮನಂತಿ ಮುನಯೋ ಮೃದೂನ್ಯಥ।
ಮಿತ್ರಕಾರ್ಯರತಿಭೂಷಣಾಂಬರೋದ್ಗೀತಿಮಂಗಲವಿಧಾನಮೇಷು ಚ ॥೬೫॥

ಚಿತ್ತಾ, ಅನೂರಾಧಾ, ಮೃಗಶಿರ, ರೇವತೀ ನಕ್ಷತ್ರಗಳು ಮೃದುನಕ್ಷತ್ರಗಳೆಂದು ಹೇಳುತ್ತಾರೆ. ಈ ಮೃದುನಕ್ಷತ್ರಗಳಲ್ಲಿ ಮಿತ್ರಕಾರ್ಯ, ಸ್ತ್ರೀಪ್ರಸಂಗ, ಆಭೂಷಣ ಮತ್ತು ನವವಸ್ತ್ರಧಾರಣ, ಸಂಗೀತ, ಅನೇಕಮಂಗಳ ಕಾರ್ಯಗಳನ್ನು ಮಾಡುವಿಕೆಯು ಶುಭಕರವಾಗಿದೆ.

ಅಶ್ವಿನೀಗುರುಮರ್ಕದೈವತಂ ಸಾಭಿಜಿಲ್ಲಘುಚತುಷ್ಟಯಂ ಮತಮ್।
ಪಣ್ಯಭೂಷಣಕಲಾರತೌಷಧಜ್ಞಾನಶಿಲ್ಪಗಮನೇಷುಸಿದ್ಧಿದಮ್॥೬೬॥

ಅಶ್ವಿನೀ, ಪುಷ್ಯ, ಹಸ್ತ, ಅಭಿಜಿತ್ ಈ ನಾಲ್ಕುನಕ್ಷತ್ರಗಳು ಲಘುನಕ್ಷತ್ರಗಳು, ಇವುಗಳಲ್ಲಿ ಅಂಗಡಿಪ್ರಾರಂಭಿಸುವಿಕೆ, ಆಭೂಷಣ ಧಾರಣ, ಕ್ರೀಡಾ, ಔಷಧಿಮಾಡವುದು, ಶಿಲ್ಪಕಾರ್ಯ, ಪ್ರಯಾಣಗಳಲ್ಲಿ ಶುಭಕರವಾಗಿದೆ.

ಮೂಲಶಕ್ರಶಿವಸಾರ್ಪದೈವತಾನ್ಯುಲ್ಲಪಂತ್ಯಥ ಚ ತೀಕ್ಷ್ಣಸಂಜ್ಞಯಾ।
ಭೂತಯಕ್ಷನಿಧಿಮಂತ್ರಸಾಧನಂ ಭೇದಬಂಧವಧಕರ್ಮ ಚಾತ್ರ ತು ॥೬೭॥

ಮೂಲ, ಜ್ಯೇಷ್ಠ, ಆರ್ದ್ರಾ, ಆಶ್ಲೇಷಾ ನಕ್ಷತ್ರಗಳು ತೀಕ್ಷ್ಣಗಳಾಗಿವೆ. ಇವುಗಳಲ್ಲಿ ಭೂತಾದಿ ಪೀಡಾನಿವಾರಣೆ, ಗುಪ್ತನಿಧಿ ತೆಗೆಯುವುದು, ಮಂತ್ರಸಿದ್ಧಿ, ಬಂಧಮಾಡುವುದು ಇತ್ಯಾದಿಗಳು ಶುಭವಾಗಿದೆ.

ವೈಷ್ಣವತ್ರಯಯುತಃ ಪುನರ್ವಸುರ್ಮಾರುತಂ ಚ ಚರಪಂಚಕಂ ತ್ವಿದಮ್।
ದಂತವಾಜಿಕರಾದಿವಾಹನಾರಾಮಯಾನವಿಧಿಷು ಪ್ರಶಸ್ಯತೇ ॥೬೮॥

ಶ್ರವಣ,ಧನಿಷ್ಠ,ಶತಭಿಷ,ಪುನರ್ವಸು, ಸ್ವಾತಿ ಇವು ಚರನಕ್ಷತ್ರಗಳು ಇವುಗಳಲ್ಲಿ ಆನೆ,ಕುದುರೆ ವಾಹನಖರೀದಿ,ತೋಟಾದಿಗಳಲ್ಲಿ ಸುತ್ತಾಡುವುದು, ಪ್ರಯಾಣಮಾಡುವುದು ಇತ್ಯಾದಿಗಳಿಗೆ ಶುಭವಾಗಿದೆ.

ಪೂರ್ವಿಕಾತ್ರಿತಯಮಾತಂಕಂ ಮಘಾತ್ಯುಗ್ರಪಂಚಕಮಿದಂ ಜಗುರ್ಬುಧಾಃ।
ಶಾಠ್ಯನಾಶವಿಷಘಾತಬಂಧನೋತ್ಸಾಹ ಶಸ್ತ್ರ ದಹನಾದಿಷು ಸ್ಮೃತಮ್ ॥೬೯॥

ಪೂರ್ವಫಲ್ಗುಣೀ,ಪೂರ್ವಾಷಾಢ, ಪೂರ್ವಾಭಾದ್ರ,ಭರಣೀ, ಮಘಾ, ಈ ಐದು ನಕ್ಷತ್ರಗಳು ಉಗ್ರನಕ್ಷತ್ರಗಳೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. ಇವುಗಳಲ್ಲಿ ಉಗ್ರಕಾರ್ಯಗಳಾದ ಕೋಪ,ನಾಶ, ವಿಷಘಾತ,ಬಂಧನ, ಉತ್ಸಾಹ,ಶಸ್ತ್ರಾಭ್ಯಾಸ, ದಹನ ಇತ್ಯಾದಿ ಕರ್ಮಗಳು ಮಾಡಬಹುದಾಗಿದೆ.

ಹವ್ಯವಾಹಭಯುತಂ ದ್ವಿದೈವತಂ ಮಿಶ್ರಸಂಜ್ಞಮಥ ಮಿಶ್ರಕರ್ಮಸು।

ಸ್ವಾಭಿಧಾನಸಮಕರ್ಮಸಾಧನಂ ಕೀರ್ತಿತಾನಿ ಸಕಲಾನಿ ಸೂರಿಭಿಃ॥೭೦॥

ಕೃತ್ತಿಕಾ,ವಿಶಾಖ ಈ ಎರಡು ನಕ್ಷತ್ರಗಳು ಮಿಶ್ರಸಂಜ್ಞೆ ಉಳ್ಳವು, ಇವುಗಳಲ್ಲಿ ಮಿಶ್ರಕರವಾದ ಸಾಮಾನ್ಯಕರ್ಮಗಳನ್ನು ಮಾಡಬಹುದಾಗಿದೆ ಎಂದು ಜ್ಞಾನಿಗಳು ಹೇಳುತ್ತಾರೆ.

ವಾಸವೋತ್ತರ ದಲಾದಿ ಪಂಚಕೇ ಯಾಮ್ಯದಿಗ್ಗಮನಗೇಹಗೋಪನಮ್।

ಪ್ರೇತದಾಹತೃಣಕಾಷ್ಠಸಂಗ್ರಹಃ ಶಯ್ಯಕಾವಿರಚನಂ ಚ ವರ್ಜಯೇತ್॥೭೧॥

ಧನಿಷ್ಠಾ ಉತ್ತಾರಾರ್ಧದಿಂದ ರೇವತೀ ವರೆಗಿನ ೫ನಕ್ಷತ್ರಗಳನ್ನು ಪಂಚಕಗಳೆಂದು ಕರೆಯುತ್ತಾರೆ ಇವುಗಳಲ್ಲಿ ದಕ್ಷಿಣದಿಕ್ಕಿಗೆ ಪ್ರವಾಸ, ಗೃಹಾರಂಭ, ಪ್ರೇತದಾಹ, ಹುಲ್ಲು ಮತ್ತು ಕಟ್ಟಿಗೆ ಸಂಗ್ರಹ, ಮಂಚಮಾಡಿ ಸುವುದು ಇತ್ಯಾದಿ ಕರ್ಮಗಳನ್ನು ಮಾಡಬಾರದು.

ಪರಕೃತಮಖಿಲಂ ನಿಹಂತಿ ಪುಷ್ಯೋ ನ ಖಲು ನಿಹಂತಿ ಪರಂತು ಪುಷ್ಯದೋಷಮ್।

ಧ್ರುವಮಮೃತಕರೋಷ್ಟಮೇಪಿ ಪುಷ್ಯೇ ವಿಹಿತಮುಪೈತಿ ಮುದೈವ ಕರ್ಮಸಿದ್ಧಿಮ್॥೭೨॥

ಅಷ್ಟಮಚಂದ್ರದೋಷ ಮಹಾದೋಷವೆಂದು ಹೇಳಲ್ಪಟ್ಟಿದೆ, ಇಂತಹ ಮಹಾದೋಷವನ್ನು ಕೂಡ ನಾಶಮಾಡುವಶಕ್ತಿಉಳ್ಳದ್ದು ಪುಷ್ಯನಕ್ಷತ್ರ. ಈ ಪುಷ್ಯ ಬೇರೇನಕ್ಷತ್ರಾದಿಗಳದೋಷವನ್ನು ನಾಶಮಾಡಲು ಶಕ್ತವಾಗಿದೆ. ಆದರೆ ಪುಷ್ಯನಕ್ಷತ್ರದ ದೋಷವನ್ನುಮಾತ್ರ ಯಾವ ನಕ್ಷತ್ರವು ನಾಶಮಾಡಲು ಶಕ್ತವಲ್ಲ. ಅಂದರೆ ಅಷ್ಟಚಂದ್ರಮ ಇದ್ದರೂ ಪುಷ್ಯನಕ್ಷತ್ರವಿದ್ದರೆ ಕಾರ್ಯ ಸಾಧಿಸಬಹುದು.

ಸಿಂಹೋ ಯಥಾ ಸರ್ವಚತುಷ್ಪದಾನಾಂ ತಥೈವ ಪುಷ್ಯೋ ಬಲವಾನುಡೂನಾಮ್।

ಚಂದ್ರೇ ವಿರುದ್ಧೇಪ್ಯಥ ಗೋಚರೇ ಪಿ ಸಿದ್ಧ್ಯಂತಿ ಕಾರ್ಯಾಣಿ ಕೃತಾನಿ ಪುಷ್ಯೇ॥೭೩॥

ಸಿಂಹವು ಎಲ್ಲಾ ಪ್ರಾಣಿಗಳಲ್ಲಿ ಹೇಗೆ ಬಲಿಷ್ಠವಾದದ್ದೋ ಹಾಗೆ ನಕ್ಷತ್ರಗಳಲ್ಲೆಲ್ಲಾ ಪುಷ್ಯವು ಬಲಿಷ್ಠವಾಗಿದೆ,೪–೮–೧೨ರ ಚಂದ್ರ ಮತ್ತು ಗೋಚರದಲ್ಲಿ ಅನಿಷ್ಟಚಂದ್ರನಿದ್ದರೂ ಪುಷ್ಯದಲ್ಲಿ ಮಾಡಿದ ಕಾರ್ಯ ಸಿದ್ಧಿಯನ್ನುಂಟು ಮಾಡುತ್ತದೆ.

ಗ್ರಹೇಣ ವಿರುದ್ಧೋಪ್ಯಶುಭಾನ್ವಿತೋಪಿ ವಿರುದ್ಧತಾರೋ ಪಿ

ಸಕಲಾರ್ಥ ಸಿದ್ಧಿಂ ವಿಹಾಯ ಪಾಣಿಗ್ರಹಣಂತು ಪುಷ್ಯಃ॥೭೪॥

ಕ್ರೂರಗ್ರಹವಿದ್ದವಾಗಿ, ಅಶುಭಗ್ರಹದಿಂದ ಯುಕ್ತವಾಗಿದ್ದರೂ ಅಥವಾ ವಿರುದ್ಧತಾರೆ ಇದ್ದರೂ ಪ್ರತಿಕೂಲವಾಗಿದ್ದರೂ ಪುಷ್ಯದಲ್ಲಿ ಮಾಡಿದ ಕಾರ್ಯ ಸಿದ್ಧಿಯನ್ನು ಉಂಟುಮಾಡುತ್ತದೆ ಆದರೆ ವಿವಾಹಕ್ಕೆ ಮಾತ್ರ ಪುಷ್ಯ ಯೋಗ್ಯವಲ್ಲ.

ವಾಕ್ಪತೇರರ್ಕನಕ್ಷತ್ರಂ ಶ್ರವಣಾಚ್ಚಂದ್ರಮೇವ ಚ। ಗಣಯೇತ್ತದ್ಯುತಿಂ ಕುರ್ಯಾದ್ಯೋಗಃ ಸ್ಯಾದೃಕ್ಷಶೇಷತಃ॥

ಪುಷ್ಯನಕ್ಷತ್ರದಿಂದ ಸೂರ್ಯನಕ್ಷತ್ರದ ವರೆಗೂ ಮತ್ತು ಶ್ರವಣನಕ್ಷತ್ರದಿಂದ ಚಂದ್ರನಕ್ಷತ್ರದ ವರೆಗೂ ಎಣಿಸಿ ಎರಡೂ ಸಂಖ್ಯೆಯನ್ನು ಸೇರಿಸಿ ೨೭ರಿಂದ ಭಾಗಿಸಿದಾಗ ಬರುವ ಶೇಷಕ್ಕೆ



ವಿಷ್ಕಂಭಾದಿ ಯೋಗಗಳೆಂದು ತಿಳಿಯಬೇಕು. ಉದಾಹರಣೆ– ಶಕ೧೯೩೦ಶ್ರೀ ಸರ್ವಧಾರಿ ಸಂವತ್ಸರದ ಮಾರ್ಗಶಿರ ಪೂರ್ಣಿಮಾ ದಿನ ಯೋಗವನ್ನು ನೋಡೋಣ. ಸೂರ್ಯ ಜ್ಯೇಷ್ಠನಕ್ಷತ್ರದ ಕೊನೆಗಿದ್ದಾನೆ. ಪುಷ್ಯನಕ್ಷತ್ರದಿಂದ ಜ್ಯೇಷ್ಠನಕ್ಷತ್ರದ ವರೆಗೂ ಎಣಿಸಿದಾಗ ೧೧ ಬಂತು. ಆ ದಿನ ಚಂದ್ರನಕ್ಷತ್ರ ರೋಹಿಣಿಇದೆ. ಶ್ರವಣದಿಂದ ರೋಹಿಣಿವರೆಗೆ ಎಣಿಸಿದಾಗ ೧೦ ಎರಡನ್ನೂ ಕೂಡಿಸಿದಾಗ ೨೧ ಸಂಖ್ಯೆ ಬಂತು ಇದು ೨೭ರಿಂದ ಭಾಗಿಸಿದಾಗ ಹೋಗದೆ ಶೇಷ ೨೧ ಅಂತಲೇ ತಿಳಿಯಬೇಕು. ವಿಷ್ಕಂಭದಿಂದ ೨೧ ಎಣಿಸಿದಾಗ ಸಿದ್ಧಯೋಗಬಂತು ಅದರ ಮುಂದಿನದು ಸಾಧ್ಯವೆಂದು ಆದಿನ ಯೋಗವನ್ನು ತಿಳಿಯಬೇಕು.

ವಿಷ್ಕಂಭಃ ಪ್ರೀತಿರಾಯುಷ್ಮಾನ್ ಸೌಭಾಗ್ಯಃ ಶೋಭನಸ್ತಥಾ।

ಅತಿಗಂಡಸುಕರ್ಮಾ ಚ ಧೃತಿಃ ಶೂಲಸ್ತಥೈವ ಚ॥೭೬॥

ಗಂಡೋವೃದ್ಧಿರ್ಧ್ರುವಶ್ಚೈವ ವ್ಯಾಘಾತೋ ಹರ್ಷಣಸ್ತಥಾ।

ವಜ್ರಸಿದ್ಧೀ ವ್ಯತೀಪಾತೋ ವರೀಯಾನ್ ಪರಿಘಃ ಶಿವ। ॥೭೭॥

ಸಿದ್ಧಃ ಸಾಧ್ಯಃ ಶುಭಃ ಶುಕ್ಲೋ ಬ್ರಹ್ಮೇಂದ್ರೋ ವೈಧೃತಿಃ ಕ್ರಮಾತ್ ।

ಸಪ್ತವಿಂಶತಿಯೋಗಾಸ್ತು ಕುರ್ಯುರ್ನಾಮಸಮಂ ಫಲಮ್ ॥೭೮॥

ವಿಷ್ಕಂಭ, ಪ್ರೀತಿ,ಆಯುಷ್ಮಾನ್, ಸೌಭಾಗ್ಯ, ಶೋಭನ, ಅತಿಗಂಡ,ಸುಕರ್ಮಾ, ಧೃತಿ,ಶೂಲ,ಗಂಡ,ವೃದ್ಧಿ,ಧ್ರುವ, ವ್ಯಾಘಾತ, ಹರ್ಷಣ, ವಜ್ರ,ಸಿದ್ಧಿ, ವ್ಯತೀಪಾತ, ವರೀಯಾನ್, ಪರಿಘ, ಶಿವ,ಸಿದ್ಧ, ಸಾಧ್ಯ, ಶುಭ, ಶುಕ್ಲ, ಬ್ರಹ್ಮ, ಐಂದ್ರ, ವೈಧೃತಿ ಎಂಬುದಾಗಿ ಕ್ರಮವಾಗಿ ೨೭ ಯೋಗಗಳು ಪ್ರಸಿದ್ಧವಾಗಿವೆ. ಇವು ಹೆಸರಿಗೆ ತಕ್ಕಂತೆ ಫಲ ಶುಭಾಶುಭಫಲಗಳನ್ನು ಕೊಡುತ್ತವೆ.

ವಿರುದ್ಧಸಂಜ್ಞ ಇಹ ಯೇ ಚ ಯೋಗಾಸ್ತೇಷಾಮನಿಷ್ಟಃ ಖಲು ಪಾದ ಆದ್ಯಃ।

ಸವೈಧೃತಿಸ್ತು ವ್ಯತಿಪಾತನಾಮಾ ಸರ್ವೋಪ್ಯನಿಷ್ಟಃ ಪರಿಘಸ್ಯ ಚಾರ್ಧಮ್॥೭೯॥

ತ್ರಿಸ್ರಸ್ತು ಯೋಗೇ ಪ್ರಥಮೇ ಚ ವಜ್ರೇ ವ್ಯಾಘಾತಸಂಜ್ಞೇ ನವಪಂಚಶೂಲೇ।

ಗಂಡೇತಿಗಂಡೇ ಚ ಷಡೇವನಾಡ್ಯಃ ಶುಭೇಷು ಕಾರ್ಯೇಷು ವಿವರ್ಜನೀಯಾಃ ॥೮೦॥

ಹೆಸರಿನಿಂದಲೇ ಕೆಟ್ಟಯೋಗವೆಂದು ಗುರುತಿಸಿದ ಯೋಗಗಳಲ್ಲಿ ನಾಲ್ಕುಭಾಗಮಾಡಿ ಮೊದಲ ಭಾಗವು ಅರಿಷ್ಟಕರವೆಂದು ತಿಳಿಯಬೇಕು. ಇದನ್ನು ಶುಭಕಾರ್ಯಗಳಿಗೆ ಲಗ್ನಕ್ಕೆ ಗುರ್ವಾದಿಶುಭದೃಷ್ಟಿ ಇಲ್ಲದಾಗ ಬಿಡುವುದುತ್ತಮ. ಇವುಗಳಲ್ಲೂ ವ್ಯತೀಪಾತ–ವೈಧೃತಿಯೋಗಗಳು ಸಂಪೂರ್ಣವರ್ಜ್ಯಗಳು. ವಿಷ್ಕಂಭ ಹಾಗು ವಜ್ರ ಮೂರುಘಳಿಗೆ,ವ್ಯಾಘಾತ ೯ಘಳಿಗೆ, ಶೂಲ ೫ ಘಳಿಗೆ,ಮತ್ತು ಗಂಡ–ಅತಿಗಂಡಗಳಲ್ಲಿ ೬ ಘಳಿಗೆ ಬಿಟ್ಟು ಶುಭಕಾರ್ಯಮಾಡಲಿಕ್ಕೆ ಬರುತ್ತದೆ.

ತಿಥಿಂ ದ್ವಿಗುಣೀಕೃತ್ಯ ಏಕಹೀನಂ ಚ ಕಾರಯೇತ್।ಸಪ್ತಭಿಶ್ಚ ಹರೇದ್ಭಾಗಂ ಶೇಷಂ ಕರಣಮುಚ್ಯತೇ॥೮೧॥

ತಿಥಿಯನ್ನು ಎರಡರಿಂದ ಗುಣಿಸಿ ಒಂದು ಕಳೆದು ಏಳರಿಂದ ಭಾಗಿಸಿದಾಗ ಶೇಷಕ್ಕೆ ಕರಣವನ್ನು ತಿಳಿಯಬೇಕು.

ಬವಾಹ್ವಯಂ ಬಾಲವಕೌಲವಾಖ್ಯೇ ತತೋ ಭವೇತ್ತೈತಿಲ ನಾಮಧೇಯಮ್।
ಗರಾಭಿಧಾನಂ ವಣಿಜಂ ಚ ವಿಷ್ಟಿರಿತ್ಯಾಹುರಾರ್ಯಾಃ ಕರಣಾನಿ ಸಪ್ತ॥೮೨॥

ಬವ, ಬಾಲವ,ಕೌಲವ, ತ್ತೈತಿಲ,ಗರಜ, ವಣಿಜ,ವಿಷ್ಟಿ(ಭದ್ರ), ಶಕುನಿ, ಚತುಷ್ಪಾದ, ನಾಗವಾನ್,ಕಿಂಸ್ತುಘ್ನ, ಎಂಬುದಾಗಿ ೧೧ ಕರಣಗಳು ಪ್ರಸಿದ್ಧವಾಗಿವೆ. ಇವುಗಳಲ್ಲಿ ಬವದಿಂದ ಭದ್ರದ ವರೆಗೂ ೭ ಕರಣಗಳು ಚರಕರಣಗಳು ಒಂದುತಿಥಿಗೆ ಎರಡುಕರಣಗಳಂತೆ ಇವುಗಳನ್ನು ಎಣಿಸಬೇಕು.

ಕೃಷ್ಣಪಕ್ಷೇ ಚತುರ್ದಶ್ಯಾಂ ಶಕುನಿಃ ಪಶ್ಚಿಮೇ ದಲೇ।ಚತುಷ್ಪದಶ್ಚ ನಾಗಶ್ಚ ಅಮಾವಾಸ್ಯದಲೇ ದ್ವಯೇ ॥೮೩॥
ಶುಕ್ಲಪ್ರತಿಪದಾಯಾಶ್ಚ ಕಿಂಸ್ತುಘ್ನಃ ಪ್ರಥಮೇ ದಲೇ।ಸ್ಥಿರಾಣ್ಯೇತಾನಿ ಚತ್ವಾರಿ ಕರಣಾನಿ ಜಗುರ್ಬುಧಾಃ ॥೮೪॥

ಶಕುನಿ,ಚತುಷ್ಪಾದ, ನಾಗವಾನ್,ಕಿಂಸ್ತುಘ್ನ ಇವು ೪ ಸ್ಥಿರಕರಣಗಳು. ಕೃಷ್ಣಪಕ್ಷದ ಚತುರ್ದಶಿಯ ಉತ್ತಾರ್ಧದಿಂದ ಈ ೪ ಕರಣಗಳನ್ನು ಕ್ರಮವಾಗಿ ಎಣಿಸಬೇಕು.

ಶುಕ್ಲಪ್ರತಿಪಾದಾಯಾಂತೇ ಬವಾಖ್ಯಃ ಕರಣೋ ಭವೇತ್।
ಏಕಾದಶೈವ ಜ್ಞೇಯಾನಿ ಚರಸ್ಥಿರವಿಭಾಗತಃ ॥೮೫॥

ಶುಕ್ಲಪಕ್ಷ ಪ್ರತಿಪದೆಯ ಉತ್ತರಾರ್ಧಕ್ಕೆ ಕಿಂಸ್ತುಘ್ನವೂ, ಕೃಷ್ಣಪಕ್ಷದ ಚತುರ್ದಶಿಯ ಉತ್ತರಾರ್ಧವು ಶಕುನಿ ಕರಣವೂ, ಅಮಾವಾಸ್ಯೆಯ ಪೂರ್ವಾರ್ಧದಲ್ಲಿ ಚತುಷ್ಪಾತ್, ಅಮಾವಾಸ್ಯೆಯ ಉತ್ತರಾರ್ಧವು ನಾಗವ ಕರಣವು ಸ್ಥಿರವಾಗಿ ಬರುತ್ತವೆಂದು ತಿಳಿಯಬೇಕು. ಹೀಗೆ ಶುಕ್ಲಪ್ರತಿಪದೆಯ ಉತ್ತರಾರ್ಧದಿಂದ ಬವಾದಿ ೭ ಕರಣಗಳು ತಿಥಿಗೆ ಎರಡರಂತೆ ಎಣಿಸುವುದು ಕೊನೆಗೆ ಶಕುನಿ ಇತ್ಯಾದಿ ೪ ಕರಣಗಳನ್ನು ಕೃಷ್ಣಚತುರ್ದಶಿಯ ಉತ್ತರಾರ್ಧದಿಂದಶುಕ್ಲಪ್ರತಿಪದೆಯ ಪೂರ್ವಾರ್ಧದವರೆಗೆ ಎಣಿಸಬೇಕು. ಹೀಗೆ ೧೧ ಕರಣಗಳೆಂದು ತಿಳಿಯಬೇಕು.

ಪೌಷ್ಠಿಕಸ್ಥಿರಶುಭಾನಿ ಬವಾಖ್ಯೇ ಬಾಲವೇ ದ್ವಿಜಹಿತಾ ನ್ಯಪಿ ಕುರ್ಯಾತ್।

ವ್ರತಶಾಂತ್ಯಾದಿ ಪೌಷ್ಟಿಕ ಶುಭಕರ್ಮಗಳಲ್ಲಿಯೂ, ಸ್ಥಿರವಾದ ದೇವಾಲಯ, ಗೃಹನಿರ್ಮಾಣಾದಿ ಶುಭಕರ್ಮಗಳಲ್ಲಿಯೂ ಬವಕರಣವು ಶುಭ, ಬ್ರಾಹ್ಮಣರಿಗೆ ಶುಭವಾಗಲು ಬಾಲವಕರಣವು,

ಕೌಲವೇ ಪ್ರಮದಮಿತ್ರವಿದಾನಂ ತ್ಯೈತಿಲೇ ಶುಭಗತಾಶ್ರಯಕರ್ಮ ॥೮೬॥

ತ್ಯೈತಿಲಕರಣದಲ್ಲಿ ವಿವಾಹಾದಿಮಂಗಳಕಾರ್ಯಗಳು, ಧಣಿಯನ್ನು ಆಶ್ರಯಿಸುವುದು ಇತ್ಯಾದಿಗಳಿಗೆ ಶುಭ.

ಗರೇ ಚ ಬೀಜಾಶ್ರಯಕರ್ಷಣಾನಿ ವಾಣಿಜ್ಯಕೇ ಸ್ಥೈರ್ಯವಣಿಕ್ಕ್ರಿಯಾಶ್ಚ।
ನ ಸಿದ್ಧಿಮಾ ಯಾತಿ ಕೃತಂ ಚ ವಿಷ್ಟ್ಯಾಂ ವಿಷಾರಿಘಾತಾದಿಷು ತಂತ್ರಸಿದ್ಧಿಃ ॥೮೭॥



ಗರಜಕರಣದಲ್ಲಿ ಬೀಜಬಿತ್ತುವುದು,ನೇಗಿಲುಹೊಡೆಯುವುದು ಇತ್ಯಾದಿ ಕೃಷಿಗೆಸಂಬಂಧಿಸಿದ ಕಾರ್ಯಗಳನ್ನು ಮಾಡಬೇಕು. ವ್ಯಾಪಾರಾಂದಿ ವಾಣಿಜ್ಯಕರ್ಮಗಳನ್ನು( ಸ್ಥಿರವಾದ ಮತ್ತು ವ್ಯಾಪಾರದ ವಹಿವಾಟುಗಳು) ವಣಿಜಕರಣದಲ್ಲಿ ಮಾಡಬೇಕು. ಭದ್ರಾಕರಣದಲ್ಲಿ ಮಾತ್ರ ಯಾವ ಶುಭಕರ್ಮವೂ ಯೋಗ್ಯವಲ್ಲ, ಆದರೆ ಕ್ರೂರಕರ್ಮಗಳಾದ ವಿಷ,ಘಾತಾದಿ,ನಾಶನಾದಿಕರ್ಮಗಳನ್ನು ಮಾಡಬಹುದು. ಅಂದರೆ ಬೆಳೆಗಳಿಗೆ ಕ್ರಿಮಿಸಂಹಾರಕಗಳನ್ನು ಸಿಂಪಡಿಸುವುದು, ಮನೆಯಲ್ಲಿ ಸೊಳ್ಳೆ, ತಿಗಣೆ,ಜಿರಳೆ ಇತ್ಯಾದಿ ಔಷಧಿ ಹೊಡೆಯುವುದು ಇತ್ಯಾದಿ ಮಾಡಬಹುದು.

ಮಂತ್ರೌಷಧಾನಿ ಶಕುನೌ ತು ಸಪೌಷ್ಟಿಕಾನಿ ಗೋವಿಪ್ರರ್ರಾಜ್ಯಪಿತೃಕರ್ಮ ಚತುಷ್ಪದೇತು।
ಸೌಭಾಗ್ಯದಾರುಣ ಧೃತಿ ಧ್ರುವ ಕರ್ಮ ನಾಗೇ। ಕಿಂಸ್ತುಘ್ನನಾಮ್ನಿ ನಿಖಿಲಂ ಶುಭಕರ್ಮಕಾರ್ಯಮ್॥೮೮॥

ಶಕುನಿಕರಣದಲ್ಲಿ ಮಂತ್ರೌಷಧ,ಗ್ರಹಪೂಜಾದಿಗಳನ್ನು, ಚತುಷ್ಪಾದ ಕರಣದಲ್ಲಿ ಗೋ,ಬ್ರಾಹ್ಮಣಸೇವಾ, ರಾಜ್ಯಕಾರ್ಯ,ಪಿತೃಕಾರ್ಯಗಳು, ನಾಗವಾನ್ ಕರಣದಲ್ಲಿ ಸೌಭಾಗ್ಯ ಕರ್ಮ,ಯುದ್ಧಕ್ಕಾಗಿ ಹೊರಡುವುದು, ಧೈರ್ಯ, ಸಾಹಸದಕಾರ್ಯ, ಬುದ್ಧಿಶಕ್ತಿಯಿಂದಮಾಡುವ ಕಾರ್ಯ, ವಿದ್ಯಾಭ್ಯಾಸ ಇತ್ಯಾದಿ ಕಾರ್ಯಗಳು, ಕಿಂಸ್ತುಘ್ನಕರಣದಲ್ಲಿ ಎಲ್ಲಾ ಶುಭಕಾರ್ಯಗಳನ್ನು ಮಾಡಬಹುದು.

ದಶಮ್ಯಾಂ ಚ ತೃತೀಯಾಯಾಂ ಕೃಷ್ಣ ಪಕ್ಷೇ ಪರೇ ದಲೇ ।
ಸಪ್ತಮ್ಯಾಂ ಚ ಚತುರ್ದಶ್ಯಾಂ ವಿಷ್ಟಿಃ ಪೂರ್ವದಲೇ ಸ್ಮೃತಾ।
ಏಕಾದಶ್ಯಾಂ ಚತುರ್ಥ್ಯಾಂ ಚ ಶುಕ್ಲೇ ಪಕ್ಷೇ ಪರೇದಲೇ।
ಅಷ್ಟಮೀಪೂರ್ಣೀಮಾಯಾಂ ಚ ಭದ್ರಾ ಪೂರ್ವೇ ದಲೇ ಸ್ಮೃತಾ ॥೮೯॥

ಕೃಷ್ಣಪಕ್ಷದ ದಶಮೀ ತೃತೀಯಾ ಉತ್ತರಾರ್ಧದಲ್ಲಿ ಸಪ್ತಮೀ ಚತುರ್ದಶೀ ಪೂರ್ವಾರ್ಧದಲ್ಲಿ ಶುಕ್ಲಪಕ್ಷದ ಏಕಾದಶೀ ಚತುರ್ಥೀ ಉತ್ತರಾರ್ಧದಲ್ಲಿ ಅಷ್ಟಮೀ ಪೂರ್ಣೀಮಾಗಳ ಪೂರ್ವಾರ್ಧದಲ್ಲಿಯೂ ಭದ್ರಾಕರಣಬರುತ್ತದೆ.

ಕರಾಲೌ ನಂದನೌ ರೌದ್ರೌ ದುರ್ಮುಖೌ ಸುಮುಖೀ ತಥಾ।
ಮಿಶ್ರೌ ಚ ವೈಷ್ಣವೌ ಹಂಸೌ ಹ್ಯಷ್ಟೌ ನಾಮಾನಿ ಭದ್ರಯಾ ॥೯೦॥

ಕರಾಲೀ, ನಂದಿನೀ, ರೌದ್ರೀ, ದುರ್ಮುಖೀ, ಸುಮುಖೀ, ಮಿಶ್ರಾ, ವೈಷ್ಣವೀ, ಹಂಸಾ ಎಂಬುದಾಗಿ ಎಂಟುನಾಮಗಳು ಭದ್ರಾಕರಣಕ್ಕೆ ಇವೆ.

ಮೀನೇಮೇಷೇಚ ಸಿಂಹೇ ಅಲಿನಿ ನಿವಸತೇ ಸ್ವರ್ಗಲೋಕೇ ಚ ಭದ್ರಾ।
ಕನ್ಯಾಯಾಂ ತೌಲಿಸಂಸ್ಥೇ ಧನುಷಿ ಚ ಮಕರೇ ನಾಗಲೋಕೇ ಸ್ಥಿತಿಶ್ಚ।
ಕರ್ಕೇ ಕುಂಭೇ ವೃಷೇ ಸ್ಯಾನ್ಮಿಥುನ ಹಿಮಕರೇ ವರ್ತತೇ ಮರ್ತ್ಯಲೋಕೇ ಜ್ಞೇಯಾ,
ಚಂದ್ರ ಪ್ರವಾಹತ್ರಿಭುವನ ವಿಜಯಾ ಮರ್ತ್ಯಸಂಸ್ಥಾ ವಿವರ್ಜ್ಯಾ॥೯೧॥

ಮೀನ,ಮೇಷ,ಸಿಂಹ,ವೃಶ್ಚಿಕಗಳಲ್ಲಿ ಚಂದ್ರನಿದ್ದಾಗ ಸ್ವರ್ಗಲೋಕದಲ್ಲಿ ಭದ್ರಾ ಇರುವುದು, ಕನ್ಯಾ, ತುಲಾ, ಧನುಸ್ಸು,ಮಕರಗಳಲ್ಲಿ ಚಂದ್ರನಿರುವಾಗ ನಾಗಲೋಕದಲ್ಲಿ ಭದ್ರಾ ಇರುವುದು. ಕರ್ಕ ಕುಂಭ, ವೃಷಭ,ಮಿಥುನಗಳಲ್ಲಿ ಚಂದ್ರನಿರುವಾಗ ಭದ್ರಾಕರಣವು ಮರ್ತ್ಯಲೋಕದಲ್ಲಿ ಇರವುದು, ಈ ರೀತಿ ಚಂದ್ರನ ಗತಿಗನುಸಾರವಾಗಿ ಮೂರುಲೋಕಸಂಚರಿಸುವ ಭದ್ರವು ಕಾರ್ಯಗಳಲ್ಲಿ ವಿಜಯವನ್ನು ಕೊಡುತ್ತದೆ ಆದರೆ ಮರ್ತ್ಯಲೋಕದಲ್ಲಿದ್ದ ಭದ್ರ ಶುಭಕೊಡುವುದಿಲ್ಲ. ಅದಕ್ಕೆ ಮರ್ತ್ಯಲೋಕದ ಭದ್ರೆಯನ್ನು ಶುಭಕರ್ಮಗಳಲ್ಲಿ ಬಿಡಬೇಕು.

ನಾಡ್ಯಸ್ತು ಪಂಚವದನೇಥ ಗಲೇ ತಥೈಕಾ। ವಕ್ಷೋ ದಶಾಕಸಹಿತಂ ನಿಯತಂ ಚತಸ್ರಃ, ನಾಭ್ಯಾಂ
ಕಟೌ ಷಡಥ ಪುಚ್ಛಲಯಾ ಚ ತಿಸ್ರೋ, ವಿಷ್ಟೇಬುದ್ಧೈರಭಿಹಿತೋಂಗ ವಿಭಾಗ ಏಷಃ॥೯೨॥

೩೦ಘಳಿಗೆ ಭದ್ರಾ ಇದ್ದಾಗ ಅದರಲ್ಲಿ ಮೊದಲ ೫ಘಳಿಗೆ ಮುಖ,ನಂತರ ೧ಘಳಗೆ ಕಂಠ, ನಂತರ೧೧ ಘಳಿಗೆ ವಕ್ಷಸ್ಥಳ, ನಂತರ ೪ ಘಳಿಗೆ ನಾಭಿ, ನಂತರ ೬ ಘಳಿಗೆ ಸೊಂಟ,ಕೊನೆಗೆ ೩ ಘಳಿಗೆ ಪುಚ್ಛ ಎಂಬುದಾಗಿ ಭದ್ರಾ ಅಂಗವಿಭಾಗವನ್ನು ಪಂಡಿತರು ಮಾಡಿದ್ದಾರೆ.

ಮುಖೇಕಾರ್ಯಧ್ವಸ್ತಿರ್ಭವತಿ ಮರಣಂಚಾಥ ಗಲಕೇ, ಧನೇಹಾನಿರ್ವಕ್ಷಸ್ಯಥ ಕಟಿತಟೇ ಬುದ್ಧಿವಿಲಯಃ।
ಕಲಿರ್ನಾಭೌದೇಶೇ ವಿಜಯಮಥ ಪುಚ್ಛೇ ಚ ಜಗದುಃ,ಶರೀರೇ ಭದ್ರಾಯಾಃ ಪೃಥಯತಿ ಫಲಂ
ಪೂರ್ವಮುನಯಃ॥೯೩॥

ಭದ್ರಾಮುಖದಲ್ಲಿದ್ದಾಗ ಕಾರ್ಯಮಾಡಿದರೆ ಕಾರ್ಯಧ್ವಂಸ, ಕಂಠದಲ್ಲಿ ಮರಣ, ವಕ್ಷಸ್ಥಳದಲ್ಲಿ ಧನಹಾನಿ, ಸೊಂಟದಲ್ಲಿ ಬುದ್ಧಿನಾಶ, ನಾಭಿಯಲ್ಲಿ ಕಲಹ, ಪುಚ್ಛದಲ್ಲಿದ್ದರೆ ಕಾರ್ಯಸಿದ್ಧಿ ಎಂದು ಫಲಗಳನ್ನು ತಿಳಿಯಬೇಕು.

ಮೇಷೇಚ ಸಿಂಹೇ ಧನುಪೂರ್ವ ಭಾಗೇ ವೃಷೇಚ ಕನ್ಯಾ ಮಕರೇ ಚ ಯಾಮ್ಯಾಮ್।
ಯುಗ್ಮೇತುಲೇ ಕುಂಭಸು ಪಶ್ಚಿಮಾಯಾಂ ಕರ್ಕಾಲಿಮೀನೇಷು ತಥೋತ್ತರಾಯಾಮ್ ॥೯೪॥

ಮೇಷ, ಸಿಂಹ, ಧನುಸ್ಸು ಪೂರ್ವದಿಕ್ಕು, ವೃಷಭ, ಕನ್ಯಾ, ಮಕರ, ದಕ್ಷಿಣದಿಕ್ಕು. ಮಿಥುನ,ತುಲಾ, ಕುಂಭ, ಪಶ್ಚಿಮದಿಕ್ಕು, ಕರ್ಕ,ವೃಶ್ಚಿಕ,ಮೀನ, ಉತ್ತರದಿಕ್ಕು ಗಳಲ್ಲಿ ಚಂದ್ರನಿರುವನೆಂದು ತಿಳಿಯಬೇಕು. ಈ ದಿಕ್ಕುಜ್ಞಾನ ಕಳೆದವಸ್ತು,ಪಶು,ಚೋರದಿಕ್ಕಿನ ವಿಚಾರಕೂಡ ಮಾಡಲು ಬರುವುದು.

ಅಲೌ ಸಿಂಹೇರುಣೇ ಯುದ್ಧಕಾರೀ ವೃಷೇ ಕರ್ಕಟೇ ತೌಲಿಕೇ ಶ್ವೇತಸಿದ್ಧಿಃ।
ಧನುರ್ಮೀನಯುಗ್ಮೇಷು ಪೀತೇಚ ಲಕ್ಷ್ಮೀರ್ಮೃಗೇ ಕುಂಭಕನ್ಯಾ ಶಶೀ ಶ್ಯಾಮ ಮೃತ್ಯುಃ॥೯೫॥

ವೃಶ್ಚಿಕ,ಸಿಂಹಗಳಲ್ಲಿ ಕೆಂಪುಬಣ್ಣ ಯುದ್ಧಅಥವಾ ಕಲಹಕಾರಿ, ವೃಷಭ, ಕರ್ಕಟ ತುಲಾ ಬಿಳಿಬಣ್ಣ, ಕಾರ್ಯಸಿದ್ಧಿ, ಧನುರ್ಮೀನಮಿಥುನಗಳಲ್ಲಿ ಹಳದಿಬಣ್ಣ ಧನಯೋಗ. ಮಕರ,ಕುಂಭ,ಕನ್ಯಾ, ಕಪ್ಪುಬಣ್ಣ ಮೃತ್ಯುಕಾರಿ ಎಂದು ತಿಳಿಯಬೇಕು

ಇತಿ ಶ್ರೀಕೃಷ್ಣಾರ್ಯಪುತ್ರೇಣ ಜ್ಯೋತಿರ್ವಿದುಷಾವಿಜಯವಿಠಲಾಚಾರ್ಯೇಣ ವಿಲಿಖಿತೇ
ಸಮಗ್ರಜ್ಯೋತಿಷ್ಯ ಪಾರಿಜಾತೇಪ್ರಥಮಾಧ್ಯಾಯಃ ಸಂಪೂರ್ಣಮ್॥



## ಅಥದ್ವಿತೀಯಾಧ್ಯಾಯ
## **ಯೋಗಸಂಗ್ರಹ**

ಆದಿತ್ಯಾಚಾಷ್ಟಮೀ ಹಸ್ತೇ ಅಶ್ವಿನೌ ಚೋತ್ತರಾತ್ರಯಮ್।
ಮೂಲಂಪುಷ್ಯೋಧನಿಷ್ಠಾಚ ಸಿದ್ಧಿಯೋಗಾಃ ಪ್ರಕೀರ್ತಿತಾಃ॥೧॥

ಭಾನುವಾರ ಅಷ್ಟಮೀ ತಿಥಿ ಬಂದು, ಅಶ್ವಿನೀ, ಉತ್ತರಾತ್ರಯ, ಮೂಲ,ಪುಷ್ಯ, ಧನಿಷ್ಠಾ ಈ ನಕ್ಷತ್ರಗಳು ಬಂದರೆ ಸಿದ್ಧಿಯೋಗ ವೆಂದು ಹೇಳಲ್ಪಟ್ಟಿದೆ.

ಸೋಮೇ ಚ ನವಮೀಪುಷ್ಯೇ ಶ್ರವಣೇರೋಹಿಣೀ ಮೃಗಃ।
ದಶಮ್ಯಾಂ ವರುಣಂ ಭಂಚ ಸಿದ್ಧಿಯೋಗಾಃ ಪ್ರಕೀರ್ತಿತಾಃ ॥೨॥

ಸೋಮವಾರ ನವಮೀತಿಥಿಬಂದು, ಶ್ರವಣ,ರೋಹಿಣೀಸ ಮೃಗಶಿರ, ದಶಮಿಯಲ್ಲಿ ಶತಭಿಷನಕ್ಷತ್ರ ಬಂದರೂ ಬಂದರೆ ಸಿದ್ಧಿಯೋಗ ವೆಂದು ಹೇಳಲ್ಪಟ್ಟಿದೆ.

ಭೌಮೇ ಷಷ್ಠೀ ತೃತೀಯಾ ಚ ಅಷ್ಟಮೀಚ ತ್ರಯೋದಶೀ।
ಮೂಲಾಶ್ವಿನೀ ಮೃಗಶ್ಲೇಷಾ ಸಿದ್ಧಾನ್ಯುತ್ತರಭಾದ್ರಪಾತ್ ॥೩॥

ಮಂಗಳವಾರ ಷಷ್ಠೀ, ತೃತೀಯಾ,ಅಷ್ಟಮೀ,ತ್ರಯೋದಶೀ, ಮೂಲಾ,ಅಶ್ವಿನೀ, ಮೃಗಶಿರಾ, ಆಶ್ಲೇಷಾ,ಉತ್ತರಾಭಾದ್ರನಕ್ಷತ್ರ ಬಂದರೆ ಸಿದ್ಧಿಯೋಗವೆಂದು ಹೇಳಲ್ಪಟ್ಟಿದೆ.

ಬುಧವಾರೇ ದ್ವಿತೀಯಾ ಚ ಸಪ್ತಮೀ ದ್ವಾದಶೀಷು ಚ।
ಮೃಗಾನುರಾಧಾಪುಷ್ಯಾಶ್ಚ ಸಿದ್ಧಾ ಕೃತ್ತಿಕರೋಹೀಣೀ॥೪॥

ಬುಧವಾರ ದ್ವಿತೀಯಾ,ಸಪ್ತಮೀ, ದ್ವಾದಶೀತಿಥಿಗಳು, ಮೃಗಶಿರಾ,ಅನುರಾಧಾ, ಪುಷ್ಯಾ,ಕೃತ್ತಿಕಾ,ರೋಹೀಣೀನಕ್ಷತ್ರ ಬಂದರೆ ಸಿದ್ಧಿಯೋಗ ವೆಂದು ಹೇಳಲ್ಪಟ್ಟಿದೆ.

ಗುರೌಚ ದಶಪಂಚಮ್ಯಾಂ ಪೌರ್ಣಮಾಸ್ಯಾಂ ವಿಶಾಖಯೋಃ।
ಪೌಷ್ಣಾಶ್ವಿನ್ಯಾ ನುರಾಧಾಚ ಸಿದ್ಧಾ ಪುಷ್ಯಂ ಪುನರ್ವಸುಃ ॥೫॥

ಗುರುವಾರ ದಶಮೀ,ಪಂಚಮೀ,ಪೂರ್ಣಿಮಾ ತಿಥಿಗಳಲ್ಲಿ, ವಿಶಾಖ, ಅನೂರಾಧ, ರೇವತೀ,ಅಶ್ವಿನೀ,ಪುಷ್ಯ,ಪುನರ್ವಸು ನಕ್ಷತ್ರ ಬಂದರೆ ಸಿದ್ಧಿಯೋಗ ವೆಂದು ಹೇಳಲ್ಪಟ್ಟಿದೆ.

ಶುಕ್ರಂ ಪ್ರತಿಪದಾ ಷಷ್ಠ್ಯೈಕಾದಶೀ ಚ ತ್ರಯೋದಶೀ।
ರೇವತೀ ಪೂರ್ವಭಾಶ್ವಿನ್ಯೌ ಶ್ರುತಿಶ್ಚಿತ್ರಾದಿತಿಃ ಶುಭಾ ॥೬॥

ಶುಕ್ರವಾರ ಪ್ರತಿಪದಾ, ಷಷ್ಠೀ,ಏಕಾದಶೀ,ತ್ರಯೋದಶೀ,ರೇವತೀ, ಪೂರ್ವಭಾದ್ರ, ಅಶ್ವಿನೀ, ಶ್ರವಣಾ,ಚಿತ್ರಾ,ಪುನರ್ವಸು ನಕ್ಷತ್ರ ಬಂದರೆ ಸಿದ್ಧಿಯೋಗ ವೆಂದು ಹೇಳಲ್ಪಟ್ಟಿದೆ.

ಶನೌ ಚತುರ್ಥೀ ನವಮೀ ಚತುರ್ದಶೀ ಚ ರೋಹೀಣೀ।

ಶ್ರವಣಂ ಚ ಮಘಾಸ್ವಾತೀ ಪೂರ್ವಫಲ್ಗುನೀ ಸಿದ್ಧಿದಾ ॥೭॥

ಶನಿವಾರ ಚತುರ್ಥೀ,ನವಮೀ,ಚತುರ್ದಶೀ,ರೋಹೀಣೀ,ಶ್ರವಣ, ಮಘಾ,ಸ್ವಾತೀ,ಪೂರ್ವಫಲ್ಗುಣೀ ನಕ್ಷತ್ರ ಬಂದರೆ ಸಿದ್ಧಿಯೋಗ ವೆಂದು ಹೇಳಲ್ಪಟ್ಟಿದೆ.

ಸೂರ್ಯೇ ವಿಶಾಖಾ ಭರಣೀ ದ್ವಾದಶೀಚ ಚತುರ್ದಶೀ।

ಅನುರಾಧಾ ಮಘಾಜ್ಯೇಷ್ಠಾ ವಿರುದ್ಧಾ ಸಪ್ತಮೀ ಸದಾ॥೮॥

ಭಾನುವಾರ ಸಪ್ತಮೀ ತಿಥಿಬಂದು ವಿಶಾಖಾ,ಭರಣೀ,ದ್ವಾದಶೀ, ಚತುರ್ದಶೀ, ಅನುರಾಧಾ,ಮಘಾ,ಜ್ಯೇಷ್ಠಾನಕ್ಷತ್ರಗಳು ಬಂದರೇ ವಿರುದ್ಧಯೋಗವಾಗುವುದು.

ಚಂದ್ರೇ ಚಿತ್ರೋತ್ತರಾಷಾಢಾ ಪೂರ್ವಾಷಾಢಾವಿಶಾಖಯೋಃ।

ಏಕಾದಶ್ಯಾಂ ತ್ರಯೋದಶ್ಯಾ ಷಷ್ಠೀ ಯತ್ನೇನ ವರ್ಜಯೇತ್ ॥೯॥

ಸೋಮವಾರ ಏಕಾದಶೀ, ತ್ರಯೋದಶೀ, ಷಷ್ಠೀತಿಥಿಗಳು ಬಂದು ಚಿತ್ರಾ, ಉತ್ತರಾ ಷಾಢಾ, ವಿಶಾಖಾ ನಕ್ಷತ್ರಗಳು ಬಂದರೇ ವಿರುದ್ಧಯೋಗವಾಗುವುದು.

ಭೌಮೇ ಆರ್ದ್ರಾ ಧನಿಷ್ಠಾಚ ಪ್ರತಿಪತ್ ಪೂರ್ವಭಾದ್ರಪತ್।

ಶತಭಿಷಕ್ ಚೋತ್ತರಾಷಾಢಾ ದಶಮೀ ಚ ವಿವರ್ಜಯೇತ್॥೧೦॥

ಮಂಗಳವಾರ ಪ್ರತಿಪತ್,ದಶಮೀ,ತಿಥಿಗಳು ಬಂದು, ಆರ್ದ್ರಾ,ಧನಿಷ್ಠಾ, ಪೂರ್ವಭಾದ್ರ, ಶತಭಿಷ,ಉತ್ತರಾಷಾಢಾ ನಕ್ಷತ್ರಗಳು ಬಂದರೇ ವಿರುದ್ಧಯೋಗ ವಾಗುವುದು.

ಬುಧೇಧನಿಷ್ಠಾಭರಣೀ ಅಶ್ವಿನೀ ಮೂಲಸಂಯುತಾ।

ತೃತೀಯಾ ನವಮೀ ಚೈವ ಪ್ರತಿಪದ್ರೇವತೀ ತ್ಯಜೇತ್॥೧೧॥

ಬುಧವಾರ ತೃತೀಯಾ,ನವಮೀ,ಪ್ರತಿಪತ್ ತಿಥಿಗಳು ಬಂದು ಧನಿಷ್ಠಾ,ಭರಣೀ, ಅಶ್ವಿನೀ,ಮೂಲ,ರೇವತೀ ನಕ್ಷತ್ರಗಳು ಬಂದರೆ ವಿರುದ್ಧಯೋಗವಾಗುವುದು.

ಜೀವೇಷ್ಟಮೀ ಚತುರ್ಥ್ಯಾಂತು ಆರ್ದ್ರಾ ಚೋತ್ತರಾಫಲ್ಗುನೀ।

ರೋಹಿಣೀ ಶತಭಿಷಕ್ ಷಷ್ಠೀ ಕೃತ್ತಿಕಾ ಮೃಗವರ್ಜಿತಾ॥೧೨॥

ಗುರುವಾರ ಅಷ್ಟಮೀ,ಚತುರ್ಥೀ,ಷಷ್ಠೀತಿಥಿಗಳು ಬಂದು, ಆರ್ದ್ರಾ, ಉತ್ತರಾಫಲ್ಗುನೀ, ರೋಹಿಣೀ,ಶತಭಿಷ,ಕೃತ್ತಿಕಾ,ಮೃಗಶಿರ ನಕ್ಷತ್ರಗಳು ಬಂದರೆ ವಿರುದ್ಧಯೋಗವಾಗುವುದು.

ಭಾರ್ಗವೇ ರೋಹಿಣೀ ಜ್ಯೇಷ್ಠಾ ದ್ವಿತೀಯಾ ಸಪ್ತಮೀಷುಚ।

ಪುಷ್ಯಾಶ್ಲೇಷಾ ಮಘಾ ಚೈವ ಸರ್ವಕರ್ಮಣೀ ವರ್ಜಯೇತ್ ॥೧೩॥

ಶುಕ್ರವಾರ ದ್ವಿತೀಯಾ, ಸಪ್ತಮೀತಿಥಿಗಳಲ್ಲಿ ರೋಹಿಣೀ,ಜ್ಯೇಷ್ಠಾ,ಪುಷ್ಯಾ, ಆಶ್ಲೇಷಾ,ಮಘಾ ನಕ್ಷತ್ರಗಳು ಬಂದರೇ ವಿರುದ್ಧಯೋಗವಾಗುವುದು.



ಶನೌ ಚಿತ್ರೋತ್ತರಾಷಾಢಾ ರೈವತೀ ತ್ರೀಣೀ ಸಪ್ತಮೀ।

ಷಷ್ಠೌಚೋತ್ತರಫಾಲ್ಗುನ್ಯಾ ಪೂರ್ವಾಷಾಢಾ ವಿವರ್ಜಯೇತ್॥೧೪॥

ಶನಿವಾರ ಷಷ್ಠೀ,ಸಪ್ತಮೀತಿಥಿಗಳಲ್ಲಿ ಚಿತ್ರಾ,ಉತ್ತರಾಷಾಢಾ,ರೈವತೀ,ಅಶ್ವಿನೀ, ಭರಣೀ,ಉತ್ತರಫಾಲ್ಗುನೀ,ಪೂರ್ವಾಷಾಢಾ ನಕ್ಷತ್ರಗಳು ಬಂದರೇ ವಿರುದ್ಧಯೋಗ ವಾಗುವುದು.

ಷಷ್ಠೀತು ಶನಿವಾರೇಣ ಶುಕ್ರೇಣ್ಯೈವತು ಸಪ್ತಮೀ।

ಅಷ್ಟಮೀ ಗುರುವಾರೇಣ ನವಮೀ ಚಂದ್ರಜೇನ ತು॥೧೫॥

ದಶಮೀ ಭೌಮವಾರೇಣ ಸೋಮೇ ಹ್ಯೇಕಾದಶೀ ತಥಾ।

ಸೂರ್ಯೇ ಚ ದ್ವಾದಶೀ ಪ್ರೋಕ್ತಾಕ್ರಕಚ ಯೋಗಾಃ ವರ್ಜಯೇತ್॥೧೬॥

ಶನಿವಾರ–ಷಷ್ಠೀ, ಶುಕ್ರವಾರ–ಸಪ್ತಮೀ, ಗುರುವಾರ–ಅಷ್ಟಮೀ,ಬುಧವಾರ–ನವಮೀ, ಮಂಗಳವಾರ–ದಶಮೀ,ಸೋಮವಾರ–ಏಕಾದಶೀ,ಭಾನುವಾರ–ದ್ವಾದಶೀ ಈಯೋಗಗಳು ಕ್ರಕಚಯೋಗಗಳು ವರ್ಜ್ಯವಾಗಿವೆ.

ರವೌ ಪೂಷಾ ಗುರೌ ಪುಷ್ಯಃ ಶನೌ ಮೂಲಂ ಭೃಗೌ ಮಘಾ।

ಸೌಮ್ಯೇ ಬ್ರಾಹ್ಮ್ಯಂ ವಿಶಾ ಭೌಮೇ ಚಂದ್ರೇದ್ರಾ ಚರಯೋಗಕಾಃ॥೧೭॥

ಭಾನುವಾರ–ರೇವತಿ, ಗುರುವಾರ–ಪುಷ್ಯ,ಶನವಾರ–ಮೂಲ, ಶುಕ್ರವಾರ–ಮಘಾ, ಬುಧವಾರ–ರೋಹಿಣೀ,ಮಂಗಳವಾರ–ವಿಶಾಖ, ಸೋಮವಾರ–ಆರ್ದ್ರಾ,ಇದ್ದರೆ ಚರಯೋಗವಾಗುವುದು.

ಬುಧವಾರ–ತೃತೀಯ,ಮಂಗಳವಾರ–ಪಂಚಮೀ, ಗುರವಾರ–ಷಷ್ಠೀ,ಶುಕ್ರವಾರ–ಅಷ್ಟಮೀ,ಸೋಮವಾರ–ಏಕಾದಶೀ,ಶನಿವಾರ–ನವಮೀ,ಭಾನುವಾರ–ದ್ವಾದಶೀ ಇವು ದಗ್ಧಯೋಗಗಳು.

ಶುಕ್ರೇನಂದಾ ಬುಧೇ ಭದ್ರಾ ಜಯಾಭೌಮೇ ಪ್ರಕೀರ್ತಿತಾಃ।

ಶನೌ ರಿಕ್ತಾ ಗುರೌ ಪೂರ್ಣಾ ಸಿದ್ಧಿಯೋಗಾ ಉದಾಹೃತಾಃ॥೧೯॥

ಶುಕ್ರವಾರ–ನಂದಾತಿಥಿ(೧–೬–೧೧) ಬುಧವಾರ ಭದ್ರಾತಿಥಿ(೨–೭–೧೨) ಮಂಗಳವಾರ–ಜಯಾತಿಥಿಗಳು(೩–೮–೧೩) ಶನಿವಾರ–ರಿಕ್ತಾತಿಥಿಗಳು(೪–೯–೧೪) ಗುರವಾರ–ಪೂರ್ಣಾತಿಥಿಗಳು(೫–೧೦–೧೫)ಸಿದ್ಧಿಯೋಗಗಳೆಂದು ಹೇಳಲ್ಪಟ್ಟಿದೆ.

ಅದಿತ್ಯಹಸ್ತೇ ಗುರುಪುಷ್ಯೋ ಯೋಗೇ ಬುಧಾನುರಾಧಾ ಶನಿರೋಹಿಣೀಚ।

ಶ್ರವಣೇಂದುವಾರೇ ಭೃಗರೇವತೀಚ ಭೌಮಾಶ್ವಿನೀ ಚಾಮೃತಸಿದ್ಧಿಯೋಗಾಃ॥೨೦॥

ಭಾನುವಾರ–ಹಸ್ತ, ಗುರುವಾರ–ಪುಷ್ಯ, ಬುಧವಾರ–ಅನುರಾಧಾ, ಶನಿವಾರ–ರೋಹಿಣೀ, ಸೋಮವಾರ–ಶ್ರವಣ, ಶುಕ್ರವಾರ–ರೇವತೀ, ಮಂಗಳವಾರ–ಅಶ್ವಿನೀ ಇವು ಅಮೃತಸಿದ್ಧಿಯೋಗಗಳು.

ಚಂದ್ರೇಚಿತ್ರಾ ಭೃಗೌ ಜ್ಯೇಷ್ಠಾ ಶನೌ ಚೈವ ತು ರೇವತೀ।

ಚಂದ್ರಜೇ ತು ಧನಿಷ್ಠೋಕ್ತಾ ರವೌ ತು ಭರಣೀ ತಥಾ॥೨೧॥

ಉಷಾಶ್ಚೈಚತು ಭೌಮೇ ಚ ಗುರೌ ಚೈವೋತ್ತರಾ ತಥಾ।

ಅಯಂ ಮುಸಲವಜ್ರಾಖ್ಯೋ ಯೋಗೋ ವರ್ಜ್ಯಃ ಶುಭೈ ಬುಧೈಃ॥೨೨॥

ಸೋಮವಾರ–ಚಿತ್ರಾ,ಶುಕ್ರವಾರ–ಜ್ಯೇಷ್ಠಾ ಶನಿವಾರ–ರೇವತೀ,ಬುಧವಾರ–ಧನಿಷ್ಠಾ,ಭಾನುವಾರ–ಭರಣೀ, ಮಂಗಳವಾರ–ಉತ್ತರಾಷಾಢ, ಗುರುವಾರ–ಉತ್ತರಾ ಇವು ಮುಸಲವಜ್ರವೆಂಬ ಯೋಗಗಳು ಶುಭಕಾರ್ಯಗಳಲ್ಲಿ ಬುದ್ದಿವಂತನಾದವನು ಬಿಡಬೇಕು.

ರವೌ ಮಘಾ ಬುಧೇ ಮೂಲಂ ಗುರೌ ಚೈವ ತು ಕೃತ್ತಿಕಾ,

ಭೌಮೇ ಚಾರ್ದ್ರಾ ಶನೌ ಹಸ್ತಾ ಶುಕ್ರೇ ಚೈವತು ರೋಹಿಣೀ।

ಚಂದ್ರೇ ವಿಶಾಖಾ ಯೋಗೋಯಂ ಯಮಘಂಟಃ ಪ್ರಕೀರ್ತಿತಃ॥೨೩॥

ಭಾನುವಾರ–ಮಘಾ, ಬುಧವಾರ–ಮೂಲ, ಗುರುವಾರ–ಕೃತ್ತಿಕಾ, ಮಂಗಳವಾರ–ಆರ್ದ್ರಾ, ಶನಿವಾರ–ಹಸ್ತಾ, ಶುಕ್ರವಾರ–ರೋಹಿಣೀ, ಸೋಮಾರ–ವಿಶಾಖಾ ಇವು ಯಮಘಂಟಯೋಗಗಳು.

ಮಘ ಧನಿಷ್ಠಾ ಸೂರ್ಯೇ ತು ಚಂದ್ರೇ ಮೂಲವಿಶಾಖಕೇ।

ಕೃತ್ತಿಕಾ ಭರಣೀ ಭೌಮೇ ಸೌಮ್ಯೇ ಪೂಷಾ ಪುನರ್ವಸುಃ॥೨೪॥

ಗುರೌ ಉಷಾಶ್ವಿನೀ ಶುಕ್ರೇ ರೋಹಿಣೀ ಚುನಾರಾಧಿಕಾ।

ಶನೌ ವಿಷ್ಣುಃಶತಭಿಷಕ್ ಯಮದಂಷ್ಟ್ರಾ ಪ್ರಕೀರ್ತಿತಾ॥೨೫॥

ಭಾನುವಾರ–ಮಘ, ಧನಿಷ್ಠಾ। ಸೋಮವಾರ–ಮೂಲಾ,ವಿಶಾಖಾ। ಮಂಗಳವಾರ–ಕೃತ್ತಿಕಾ,ಭರಣೀ। ಬುಧವಾರ–ಪೂಷಾ,ಪುನರ್ವಸು। ಗುರುವಾರ–ಉಷಾ,ಅಶ್ವಿನೀ। ಶುಕ್ರವಾರ–ರೋಹಿಣೀ, ಅನಾರಾಧಿ। ಶನಿವಾರ–ಶ್ರವಣ–ಶತಭಿಷ। ಇವು ಯಮದಂಷ್ಟ್ರಯೋಗಗಳು.

ರವೌ ಭೌಮೇ ಭವೇನ್ನಂದಾಭದ್ರಾ ಜೀವಶಶಂಕಾಯೋಃ।

ಜಯಾ ಶುಕ್ರೇ ಬುಧೇ ರಿಕ್ತಾ ಶನೌ ಪೂರ್ಣಾ ಚ ಮೃತ್ಯುದಾ॥೨೬॥

ಭಾನುವಾರ,ಮಂಗಳವಾರ–ನಂದಾ(೧–೬–೧೧),ಗುರುಸೋಮವಾರ–ಭದ್ರಾ(೨–೭–೧೨), ಶುಕ್ರವಾರ ಜಯಾ(೩–೮–೧೩)। ಬುಧವಾರ ರಿಕ್ತಾ(೪–೯–೧೪)। ಶನಿವಾರ ಪೂರ್ಣಾ(೫–೧೦–೧೫) ಇವು ಮೃತ್ಯುದಾಯಕ ಯೋಗಗಳು.

ವಿಶಾಖಾದಿ ಚತುಷ್ಕತು ಭಾಸ್ಕರಾದಿ ಕ್ರಮೇಣ ತು ।

ಉತ್ಪಾತಮೃತ್ಯುಕಾಲಾಖ್ಯ ಸಿದ್ಧಿಯೋಗಾಃ ಪ್ರಕೀರ್ತಿತಾಃ॥೨೭॥

ಉತ್ಪಾತ–ಮೃತ್ಯು–ಕಾಲ–ಸಿದ್ಧಿ ಎಂಬುದಾಗಿ ಯೋಗಗಳು ವಿಶಾಖಾದಿ ನಕ್ಷತ್ರಗಳನ್ನು ಭಾನುವಾರಾದಿಯಾಗಿ ಎಣಿಸಬೇಕು.

ಆನಂದಾಖ್ಯಃ ಕಾಲದಂಡಶ್ಚ ಧೂಮ್ರೋ ಧಾತಾ ಸೌಮ್ಯೋ ಧ್ವಾಂಕ್ಷಕೇತುಃ ಕ್ರಮೇಣ।



ಶ್ರೀವತ್ಸಾಖ್ಯೋ ವಜ್ರಕಂ ಮುದ್ಗರಶ್ಚ ಛತ್ರಂ ಮಿತ್ರಂ ಮಾನಸಂ ಪದ್ಮಲುಂಬೌ॥೨೮॥

ಉತ್ಪಾತಮೃತ್ಯುಃ ಕಿಲ ಕಾಣಸಿದ್ಧಿಃ ಶುಭೋಮೃತಾಖ್ಯೋ ಮುಶಲಂ ಗದಶ್ಚ।

ಮಾತಂಗರಕ್ಷಶ್ಚ ರಸುಸ್ಥಿರಾಖ್ಯಾಃ ಪ್ರವರ್ಧಮಾನಾಃ ಫಲದಾಃ ಸ್ವನಾಮ್ನಾ॥೨೯॥

ಆನಂದ, ಕಾಲದಂಡ, ಧೂಮ್ರ, ಧಾತಾ, ಸೌಮ್ಯ, ಧ್ವಾಂಕ್ಷ,ಕೇತು, ಶ್ರೀವತ್ಸ, ವಜ್ರ, ಮುದ್ಗರ, ಛತ್ರ, ಮಿತ್ರ, ಮಾನಸ, ಪದ್ಮ,ಲುಂಬ,ಉತ್ಪಾತ,ಮೃತ್ಯು, ಕಾಣ,ಸಿದ್ಧಿ, ಶುಭ,ಅಮೃತ, ಮುಸಲ ಗದ, ಮಾತಂಗ,ರಾಕ್ಷಸ,ಚರ, ಸುಸ್ಥಿರ,ಪ್ರವರ್ಧಮಾನ ಎಂಬುದಾಗಿ ೨೮ ಯೋಗಗಳು ಹೆಸರಿಗೆ ತಕ್ಕಂತೆ ಫಲನೀಡುತ್ತವೆ.

ಸೂರ್ಯೇಶ್ವಿಭಾತ್ ಶ್ರವಣಚಚಂದ್ರೇ ಸಾರ್ಪಾತ್ ಕುಜೇ,

ಹಸ್ತಾತ್ ಬುಧೇ ಗುರೌ ಮೈತ್ರಾತ್ ವಿಶ್ವೇಚ ಶುಕ್ರೇ।

ಮೈತ್ರಾತ್ ಗುರೌ ವೈಶ್ವದೇವಾಚ್ಚ ಶುಕ್ರೇ

ವರುಣಾಚ್ಛನೌ ಆನಂದಾದಿಯೋಗಾಃಸ್ಯುಃ॥೩೦॥

ಭಾನುವಾರ ಅಶ್ವಿನಿ,ಸೋಮವಾರ ಶ್ರವಣ,ಮಂಗಳವಾರ ಆಶ್ಲೇಷಾ, ಬುಧವಾರ ಹಸ್ತ, ಗುರುವಾರ ಅನೂರಾಧ, ಶುಕ್ರವಾರ ಉತರಾಷಾಢ, ಶನಿವಾರ ಶತಬಿಷ ದಿಂದ ಆನಂದಾದಿಯೋಗಗಳನ್ನು ಎಣಿಸಬೇಕು.

ಧ್ವಾಂಕ್ಷೇ ವಜ್ರೇ ಮುದ್ಗರೇ ಚೇಷುಪಾಡ್ಯೋ ವೇದಾ ನಾಡ್ಯಃ ಪದ್ಮಲುಂಬೇ ಗದೇಶ್ವಾಃ। ಧೂಮ್ರೇ ಕಾಣೇ ಮುಸಲೇ ಭೂರ್ದ್ವಯಂ ದ್ವೇ ರಕ್ಷೋ ಮೃತ್ಯೂತ್ಪಾತ ಕಾಲಶ್ಚ ಸರ್ವೇ॥೩೧॥

ಧ್ವಾಂಕ್ಷ,ವಜ್ರ,ಮುದ್ಗರ ಈ ಯೋಗಗಳ ಆದಿಯಲ್ಲಿ ೫ ಘಳಿಗೆಗಳು, ಪದ್ಮ, ಲುಂಬಗಳಲ್ಲಿ ೪ ಘಳಿಗೆಗಳು,ಗದೆಯಲ್ಲಿ ೭ ಘಳಿಗೆಗಳು, ಧೂಮ್ರದಲ್ಲಿ ೧ಘಳಿಗೆ, ಕಾಣ, ಮುಸಲಗಳಲ್ಲಿ ೨ಘಳಿಗೆ, ರಾಕ್ಷಸ, ಮೃತ್ಯು,ಉತ್ಪಾತಗಳ ಎಲ್ಲ ಸಮಯವೂ ವರ್ಜ್ಯವೆಂದು ತಿಳಿಯಬೇಕು.

ಭದ್ರಾತಿಥೀ ರವಿಭೂತನಯಾರ್ಕವಾರೇ ದ್ವೀಶಾರ್ಯಾಮಾಜಚರಣಾದಿತಿ ವಹ್ನಿವಿಶ್ವೇ। ತ್ರೈಪುಷ್ಕರೋ ವತಿಮೃತ್ಯುವಿನಾಶವೃದ್ಧೌ ತ್ರೈಗುಣ್ಯದೋ ದ್ವಿಗುಣಕೃದ್ವಸುತಕ್ಷಚಾಂದ್ರೇ॥

ತ್ರಿಪುಷ್ಕರಯೋಗ–ಭದ್ರಾತಿಥಿ(೨–೭–೧೨),ಶನಿ,ಮಂಗಳ,ರವಿವಾರಗಳು, ವಿಶಾಖಾ,ಉತ್ತರಾ,ಪೂರ್ವಾಭಾದ್ರ,ಪುನರ್ವಸು, ಕೃತ್ತಿಕಾ,ಉತ್ತರಾಷಾಢಾ ನಕ್ಷತ್ರಗಳು, ಈ ತಿಥಿ,ವಾರ,ನಕ್ಷತ್ರಗಳ ಯೋಗವಾದಾಗ ತ್ರಿಪುಷ್ಕರಯೋಗ ವಾಗುವುದು. ಈ ತ್ರಿಪುಷ್ಕರಯೋಗಗಳಲ್ಲಿ ವೃದ್ಧಿ, ಶುಭ, ಅಶುಭ, ಮೃತ್ಯು,ವಿನಾಶಾದಿಗಳು ಒಂದು ಬಾರಿಯಾದರೆ ಮೂರರಷ್ಟು ವೃದ್ಧಿ, ಶುಭ,ಅಶುಭ,ಮೃತ್ಯು, ವಿನಾಶಗಳುಂಟಾಗುತ್ತವೆ. ಒಂದುವೇಳೆ ಮೇಲೆ ಹೇಳಿದ ವಾರತಿಥಿಗಳಿಗೆ ದ್ವಿಪಾದಿ ನಕ್ಷತ್ರಗಳಾದ ಮೃಗಶಿರ, ಚಿತ್ರಾ, ಧನಿಷ್ಠಗಳ ದ್ವಿಪುಷ್ಕರಯೋಗವಾಗುವುದು, ಮೇಲಿನಂತೆ ಇವುಗಳಲ್ಲಿ ಎರಡರಷ್ಟು ಲಾಭ,ನಷ್ಟಗಳಾಗುತ್ತವೆ.

ಅಯೋಗಃ ಸಿದ್ಧಿಯೋಗಶ್ಚ ದ್ವಾವೇತೌ ವತೋ ಯದಿ।

ಅಯೋಗೋ ಹನ್ಯತೇ ತೇನ ಸಿದ್ಧಿಯೋಗಃ ಪ್ರವರತತೇ॥ ೩೩॥

ಅರಿಷ್ಠಯೋಗ–ಶುಭಯೋಗಗಳು ಒಂದೇದಿನ ಬಂದಾಗ ಅರಿಷ್ಠಯೋಗವು ದುರ್ಬಲವಾಗಿ ಮಾಡಲ್ಪಟ್ಟು ಶುಭಯೋಗವೇ ಫಲಿಸುವುದು.

ಸೂರ್ಯಭಾದ್ವೇದಗೋತರ್ಕದಿಗ್ವಿಶ್ವನಖಸಮಿತೇ।

ಚಂದ್ರರ್ಕ್ಷೇ ರವಿಯೋಗಾಃಸ್ಯುರ್ದೋಷಸಂಘವಿನಾಶಕಾಃ॥೩೪॥

ಸೂರ್ಯನಕ್ಷತ್ರದಿಂದ ಚಂದ್ರನಕ್ಷತ್ರದವರೆಗೂ ಎಣಿಸಿದಾಗ ೪–೬–೯–೧೩–೨೦ ಈ ಸಂಖ್ಯೆಬಂದರೆ ರವಿಯೋಗವಾಗುವುದು ಇದು ಸಮಸ್ತದೋಷಸಮೂಹವನ್ನು ನಾಶಮಾಡಿ ಶುಭವನ್ನುಂಟುಮಾಡುವುದು.

ಆಶ್ವಿನೇ ಕೃಷ್ಣಪಕ್ಷೇಚ ಷಷ್ಠ್ಯಾಂ ಭೌಮೇಥ ರೋಹಿಣೀ।

ವ್ಯತೀಪಾತಸ್ತದಾ ಷಷ್ಠೀ ಕಪಿಲಾನಂತಪುಣ್ಯದಾ॥೩೫॥

ಕಪಿಲಷಷ್ಠಿಯೋಗ–ಆಶ್ವಯುಜಮಾಸ ಕೃಷ್ಣಪಕ್ಷ ಷಷ್ಠಿತಿಥಿಯಲ್ಲಿ ಮಂಗಳವಾರ, ರೋಹಿಣೀನಕ್ಷತ್ರ,ವ್ಯತೀಪಾತಯೋಗಗಳು ಕೂಡಿಬಂದರೆ ಕಪಿಲಷಷ್ಠಿ ಯೋಗ ವಾಗುವುದು. ಇದು ಅಪರೂಪವಾದಯೋಗವು ೬೦ವರ್ಷಗಳಿಗೊಮ್ಮೆ ಬರುವುದು. ಈ ಯೋಗದಲ್ಲಿ ಸ್ನಾನ–ದಾನ–ಜಪ–ತರ್ಪಣ–ಹೋಮಗಳನ್ನು ಮಾಡಿದರೆ ಅನಂತಪುಣ್ಯ ವುಂಟಾಗುವುದು.

ಯದಾಚಾಪೇ ಜೀವೋಭವತಿ ಘಟರಾಶೌ ದಿನಮಣಿಸ್ಥಥಾ

ತಾರಾನಾಥಃ ಸ್ವಭವನಗತಃ ಫಾಲ್ಗುನಸಿತೇ।

ಯದಾರ್ಕೋ ದ್ವಾದಶ್ಯಾಮದಿತಿಯುತಃ ಶೋಭನಯುತಸ್ತದಾ

ಗೋವಿಂದಾಖ್ಯಂ ಹರಿದಿವಸಮಸ್ಮಿನ್ ಭುವಿತಲೇ॥೩೭॥

ಗೋವಿಂದದ್ವಾದಶೀ–ಫಾಲ್ಗುಣಮಾಸ ಶುಕ್ಲಪಕ್ಷ ದ್ವಾದಶಿ ಭಾನುವಾರ, ಪುನರ್ವಸು ನಕ್ಷತ್ರ, ಶೋಭನಯೋಗ ಬಂದಾಗ–ಧನುಸ್ಸಿನಲ್ಲಿ ಗುರುವಿದ್ದು, ಕುಂಭರಾಶಿಯಲ್ಲಿ ರವಿ, ಕರ್ಕರಾಶಿಯಲ್ಲಿ ಚಂದ್ರ,ಬಂದರೆ ಗೋವಿಂದ ಯೋಗವಾ ಗುವುದು.ಈಯೋಗದಲ್ಲಿ ಸ್ನಾನ–ದಾನ–ಜಪ–ತರ್ಪಣ–ಹೋಮಗಳನ್ನು ಮಾಡಿದರೆ ಅನಂತಪುಣ್ಯ ವುಂಟಾಗುವುದು.

ವಿಶಾಖಾಸ್ಥೋ ಯದಾ ಭಾನುಃ ಕೃತ್ತಿಕಾಸುಚ ಚಂದ್ರಮಾಃ।

ಸಯೋಗಃ ಪದ್ಮಕೋ ನಾಮ ಪುಷ್ಕರೇಷ್ವತಿದುರ್ಲಭಃ॥೩೭॥

ವಿಶಾಖಾನಕ್ಷತ್ರದಲ್ಲಿ ರವಿ ಇದ್ದಾಗ ಕೃತ್ತಿಕಾದಲ್ಲಿ ಚಂದ್ರ ಬಂದರೆ ಪದ್ಮಕವೆಂಬ ಯೋಗವಾಗುವುದು. ಇದು ನೂರಾರುಸೂರ್ಯಗ್ರಹಣಗಳಿಗೆ ಸಮ ವಾಗಿದೆ. ಈಯೋಗದಲ್ಲಿ ಸ್ನಾನ–ದಾನ–ಜಪ–ತರ್ಪಣ–ಹೋಮಗಳನ್ನು ಮಾಡಿದರೆ ಅನಂತಪುಣ್ಯ ವುಂಟಾಗುವುದು.



ವಾರುಣೇನ ಸಮಾಯುಕ್ತೋ ಮಧೌ ಕೃಷ್ಣತ್ರಯೋದಶೀ।

ಗಂಗಾಯಾಂ ಯದಿ ಲಭ್ಯೇತ ಸೂರ್ಯಗ್ರಹಶತೈಃಸಮಾ॥೩೯॥

ಚೈತ್ರಕೃಷ್ಣ ತ್ರಯೋದಶೀ ದಿನ ಶತಭಿಷನಕ್ಷತ್ರ ಬಂದರೆ ವಾರುಣೀಯೋಗ ವಾಗುವುದು ಇದು ನೂರಾರು ಸೂರ್ಯಗ್ರಹಣಗಳಿಗೆ ಸಮವಾದದ್ದು. ಅದೇದಿನ ಶನಿವಾರಬಂದರೆ ಮಹಾವಾರುಣಿ ಎನಿಸುವುದು, ಇದಕ್ಕೆ ಶುಭಯೋಗವೂ ಸೇರಿದರೆ ಮಹಾಮಹಾವಾರುಣೀಯೋಗವಾಗುವುದು. ಈಯೋಗದಲ್ಲಿ ಸ್ನಾನ–ದಾನ–ಜಪ–ತರ್ಪಣ–ಹೋಮಗಳನ್ನು ಮಾಡಿದರೆ ಅನಂತಪುಣ್ಯ ಫಲವುಂಟಾಗುವುದು.

ಶನಿವಾರಸಮಾಯುಕ್ತಾ ಸಾ ಮಹಾವಾರುಣೀ ಸ್ಮೃತಾ।

ಶುಭ ಯೋಗಸಮಾಯುಕ್ತಾ ಶನೌ ಶತಭಿಷಾ ಯದಿ॥

ಮಹಾಮಹೇತಿ ವಿಖ್ಯಾತಾ ತ್ರಿಕೋಟಿ ಕುಲಮುದ್ಧರೇತ್॥೩೯॥

ಪಂಚಾನನಸ್ಥೌ ಗುರುಭೂಮಿಪುತ್ರೌ ಮೇಷೇ ರವಿಃ ಸ್ಯಾದ್ಯತಿ ಶುಕ್ಲಪಕ್ಷೇ।

ಮಾಸಾದಿನಾ ಕರಭೇಣ ಯುಕ್ತಾ ತಿಥಿವ್ಯತೀಪಾತ ಇತೀಹ ಯೋಗಃ॥೪೧॥

ಸಿಂಹರಾಶಿಯಲ್ಲಿ ಗುರು–ಕುಜರಿದ್ದು ಮೇಷರಾಶಿಯಲ್ಲಿ ಸೂರ್ಯಬಂದಾಗ ಅದು ವೈಶಾಖ ಶುಕ್ಲಪಕ್ಷ ದ್ವಾದಶಿಯಾಗಿದ್ದರೆ ಆದಿನವು ವ್ಯತೀಪಾತಯೋಗ ವೆಂದು ಹೇಳಲ್ಪಟ್ಟಿದೆ ಇದು ಕೂಡ ಅಪೂರ್ವ ಪುಣ್ಯಕರ ಯೋಗವಾಗಿದೆ. ಈಯೋಗದಲ್ಲಿ ಸ್ನಾನ–ದಾನ–ಜಪ–ತರ್ಪಣ–ಹೋಮಗಳನ್ನು ಮಾಡಿದರೆ ಅನಂತಪುಣ್ಯ ವುಂಟಾಗುವುದು.

ವೈಶಾಖೇ ಚ ತೃತೀಯಾ ಚ ನವಮೀ ಕಾರ್ತಿಕೇ ಸಿತಾ।

ತ್ರಯೋದಶೀ ಭಾದ್ರಪದೇ ಮಾಘೇ ದರ್ಶೋ ಯುಗಾದಯಃ॥೪೨॥

ವೈಶಾಖಶುಕ್ಲ ತೃತೀಯಾ ತ್ರೇತಾಯುಗಾದಿ, ಕಾರ್ತಿಕ ಶುಕ್ಲ ನವಮೀ ಕೃತಯುಗಾದಿ, ಭಾದ್ರಪದಕೃಷ್ಣ ತ್ರಯೋದಶೀ ಕಲಿಯುಗಾದಿ, ಮಾಘ ಅಮಾವಾಸ್ಯೆದ್ವಾಪರ ಯುಗಾದಿಯಾಗಿದೆ

ಇತಿ ಶ್ರೀಕೃಷ್ಣಾರ್ಯಪುತ್ರೇಣ ಜ್ಯೋತಿರ್ವಿದುಷಾವಿಜಯವಿಠಲಾಚಾರ್ಯೇಣ ವಿಲಿಖಿತೇ ಜ್ಯೋತಿಷ್ಯ ಪಾರಿಜಾತೇ ದ್ವಿತೀಯಾಧ್ಯಾಯಃ ಸಂಪೂರ್ಣಮ್॥

# ಅಥ ತೃತೀಯಾಧ್ಯಾಯಃ

ಮುಹೂರ್ತಸಂಗ್ರಹ

ಸರ್ವೇಷು ಶುಭಕಾರ್ಯೇಷು ಕ್ರೂರಯೋಗಾನ್ ಪರಿತ್ಯಜೇತ್।

ದಗ್ಧಂ ವಿದ್ಧಂ ಚ ನಕ್ಷತ್ರಂ ತಿಥಿದಗ್ಧಂ ಚ ವರ್ಜಯೇತ್॥೧॥

ಎಲ್ಲಾ ಶುಭಕಾರ್ಯಗಳಲ್ಲಿ ಕ್ರೂರಯೋಗಗಳನ್ನು ಬಿಡಬೇಕು, ದಗ್ಧ-ವೇಧಯುಕ್ತ ಮತ್ತು ದಗ್ಧತಿಥಿಗಳನ್ನು ಬಿಡಬೇಕು.

ಅರ್ಧಪ್ರಹರಕಸ್ತ್ಯಾಜ್ಯಃ ಕುಲಿಕೋ ವಿಷ್ಟರೇವ ಚ।

ಏಕಾರ್ಗಲಂ ಗ್ರಹರ್ಕ್ಷಂ ಚ ಜನ್ಮರ್ಕ್ಷಂ ಪೂರ್ವಮೇವ ಚ॥೨॥

ಅರ್ಧಪ್ರಹಾರ,ಗುಳಿಕ,ಭದ್ರಾಕರಣ,ಏಕಾರ್ಗಳ, ಗ್ರಹಣನಕ್ಷತ್ರ,ಜನ್ಮನಕ್ಷತ್ರ, ಪರ್ವದಿನಗಳನ್ನು ಬಿಡಬೇಕು.

ಚತುರ್ದಶ್ಯಷ್ಟಮೀ ಕೃಷ್ಣಾ ಅಮಾವಾಸ್ಯಾ ಚ ಪೂರ್ಣಿಮಾ।

ಪುಣ್ಯಾನಿ ಪಂಚ ಪರ್ವಾಣಿ ಸಂಕ್ರಾಂತಿರ್ದಿನಪಸ್ಯ ಚ॥೩॥

ಕೃಷ್ಣಪಕ್ಷದ ಚತುರ್ದಶೀ, ಅಷ್ಟಮೀ, ಅಮಾವಾಸ್ಯ, ಪೂರ್ಣಿಮಾ,ಸಂಕ್ರಾಂತಿ ಇವು ಐದು ಪಂಚಪರ್ವದಿನಗಳೆಂದು ಪ್ರಸಿದ್ಧವಾದವು ಇವು ಶುಭಕಾರ್ಯಗಳಲ್ಲಿ ವರ್ಜ್ಯಗಳು.

ದುಷ್ಟಯೋಗೇ ತಿಥೌ ರಿಕ್ತೇ ಕ್ಷೀಣೇ ಚಂದ್ರೇಧಿಮಾಸಕೇ।

ಮಾಂಗಲ್ಯೇ ಶುಭಯಾತ್ರಾಂ ಚ ನ ಕುರ್ಯಾದ್ಧಿತಮಿಚ್ಛತಾ॥೪॥

ದುಷ್ಟಯೋಗ ಮತ್ತು ರಿಕ್ತಾತಿಥಿ(೪-೯-೧೪) ಕ್ಷೀಣಚಂದ್ರ,ಅಧಿಕಮಾಸ ಇವು ವಿವಾಹಾದಿ ಶುಭಕಾರ್ಯಗಳಲ್ಲಿಯೂ,ತೀರ್ಥಯಾತ್ರಾದಿ ಶುಭಪ್ರಯಾಣಗಳಲ್ಲಿಯೂ ಶುಭೇಚ್ಛುಗೆ ವರ್ಜ್ಯಗಳು.

ವಿವಾಹಂ ಚ ಕ್ಷೌರಕರ್ಮ ಪ್ರತಿಷ್ಠಾ ವ್ರತಬಂಧನಮ್।

ಅಯನೇ ಚೋತ್ತರೇ ಕುರ್ಯಾದುದಿತೇ ಭಾರ್ಗವೇ ಗುರೌ॥೫॥

ಉದಿತೇ ಚ ತಥಾ ಚಂದ್ರೇ ಶುಭಯೋಗೇ ಶುಭೇ ದಿನೇ।

ಕೃಷ್ಣಸ್ಯ ದಶಮೀ ಯಾವಚ್ಛುಭಕಾರ್ಯಾಣಿ ಕಾರಯೇತ್॥೬॥

ವಿವಾಹ,ಕ್ಷೌರ,ಪ್ರತಿಷ್ಠಾ,ಉಪನಯನ ಉತ್ತರಾಯಣದಲ್ಲಿ ಗುರು,ಶುಕ್ರರು ಉದಿತರಾಗಿದ್ದಾಗ, ಚಂದ್ರನು ಶುಭಯೋಗಹೊಂದಿದ್ದಾಗ,ಶುಕ್ಲಪಕ್ಷದ ದ್ವಿತೀಯಾದಿಂದ ಕೃಷ್ಣಪಕ್ಷದ ದಶಮೀವರೆಗೆ ಮೇಲೆತಿಳಿಸಿದ ಶುಭಕಾರ್ಯಗಳನ್ನು ಮಾಡಬೇಕು.

ನಿಜರಾಶೌ ಸ್ವೋಚ್ಚರಾಶೌ ಶ್ರೇಷ್ಠಂ ಚಂದ್ರಬಲಂ ಸದಾ।

ಜನ್ಮಸ್ಥಃ ಕುರುತೇ ಪುಷ್ಟಿಂ ದ್ವಿತೀಯೇ ಚ ಧನಾಗಮಮ್॥೭॥



ಸ್ವರಾಶಿಯಾದ ಕರ್ಕ ಉಚ್ಚರಾಶಿಯಾದ ವೃಷಭದಲ್ಲಿರುವ ಚಂದ್ರನು ಬಲಿಷ್ಠನಾಗಿ ರುತ್ತಾನೆ. ಪ್ರಥಮಚಂದ್ರನು ಪುಷ್ಟಿಯನ್ನು ಕೊಡುವನು, ದ್ವಿತೀಯಚಂದ್ರನು ಧನಕೊಡುವನು.

ತೃತೀಯಾ ರಾಜ್ಯಸನ್ಮಾನಂ ಚತುರ್ಥೇ ಕಲಹಾಗಮಮ್।

ಪಂಚಮೇ ಮತಿವಿಭ್ರಂಶೋ ಭವೇಚ್ಚಂದ್ರೇ ನಸಂಶಯಃ॥೮॥

ಧನಧಾನ್ಯಾಗಮಂ ಷಷ್ಠೇ ಸಂತೋಷಃ ಸ್ಯಾತ್ತು ಸಪ್ತಮೇ।

ಅಷ್ಟಮೇ ಪ್ರಾಣಸಂದೇಹೋ ನವಮೇ ಕ್ಲೇಶ ಏವ ಚ॥೯॥

ದಶಮೇ ಕಾರ್ಯನಿಷ್ಪತ್ತಿರ್ಧ್ರುವಮೇಕಾ ದಶೇ ಜಯಃ

ದ್ವಾದಶೇನ ಶಶಾಂಕೇನ ಮೃತ್ಯುರೇವ ನ ಸಂಶಯಃ॥೧೦॥

ತೃತೀಯಚಂದ್ರನು ರಾಜಸನ್ಮಾನವನ್ನು, ಚತುರ್ಥಚಂದ್ರನು ಕಲಹವನ್ನು, ಪಂಚಮಚಂದ್ರನು ಬುದ್ಧಿನಾಶವನ್ನು,ಷಷ್ಠಚಂದ್ರನು ಧನಧಾನ್ಯಲಾಭವನ್ನು, ಸಪ್ತಮಚಂದ್ರನು ಸಂತೋಷವನ್ನು, ಅಷ್ಟಮಚಂದ್ರನು ಪ್ರಾಣಾಪಾಯ ವನ್ನು, ನವಮಚಂದ್ರನು ಕ್ಲೇಶವನ್ನು,ದಶಮಚಂದ್ರನು ಕಾರ್ಯಸಿದ್ಧಿಯನ್ನು, ಏಕಾದಶಚಂದ್ರನು ಜಯವನ್ನು,ದ್ವಾದಶಚಂದ್ರನು ಮೃತ್ಯುಸಮಾನ ಭಯವನ್ನು ಕೊಡುವನು.

ತಿಥಿರೇಕಗುಣಾ ಪ್ರೋಕ್ತಾ ನಕ್ಷತ್ರಂ ಚ ಚತುರ್ಗುಣಮ್।

ವಾರಸ್ಯಾಷ್ಟಗುಣಂ ಪ್ರೋಕ್ತಂ ಕರಣಂ ಷೋಡಶಾನ್ವಿತಮ್ ॥೧೧॥

ಚಂದ್ರಃಶತಗುಣಂ ಪ್ರೋಕ್ತಂ ಕರಣಂ ತಸ್ಮಾಚ್ಚಂದ್ರಬಲ ಮದೇತ್।

ದ್ವಾತ್ರಿಂಶದ್ ಗುಣಿತಂ ಯೋಗೇ ತಾರಾ ಷಷ್ಠಿಗುಣಾನ್ವಿತಾ॥೧೨॥

ಶುಕ್ಲಪಕ್ಷೇ ಬಲೀ ಚಂದ್ರಃ ಕೃಷ್ಣೇ ತಾರಾ ಬಲೀಯಸೀ।

ದ್ವಿಪಂಚನವಮಃ ಶ್ರೇಷ್ಠಃ ಪ್ರಾಕ್ಪಕ್ಷೇ ಗೌರವಃ ಶಶೀ॥೧೩॥

ತಿಥಿಯು ಒಂದು ಗುಣ,ನಕ್ಷತ್ರ ನಾಲಕ್ಕು ಗುಣ, ವಾರ ಎಂಟುಗುಣ, ಕರಣ ಹದಿನಾರುಗುಣ, ಯೋಗ ಇಪತ್ತೆರಡುಗುಣ,ತಾರಾಬಲವು ಅರವತ್ತು ಗುಣ, ಚಂದ್ರ ನೂರುಗುಣ. ಆದ್ದರಿಂದ ಶುಭಕಾರ್ಯಗಳಿಗೆಲ್ಲಾ ಚಂದ್ರಬಲ ಮುಖ್ಯ. ಶುಕ್ಲಪಕ್ಷದಲ್ಲಿ ಚಂದ್ರಬಲ,ಕೃಷ್ಣಪಕ್ಷದಲ್ಲಿ ತಾರಾಬಲ ಮುಖ್ಯ ವಾಗಿವೆ. ೨-೫-೯-ರಾಶಿಯ ಶುಕ್ಲಪಕ್ಷದ ಚಂದ್ರ ಶುಭವನ್ನು ಕೊಡುತ್ತಾನೆ.

ಜನ್ಮಭಾದ್ ಗಣಯೇದಾದೌ ದಿನಧಿಷ್ಣ್ಯಾವಧಿಃಕಿಲ।

ನವಭಿಸ್ತು ಹರೇದ್ಭಾಗಂ ಶೇಷಂ ತಾರಾ ವಿನಿರ್ದಿಶೇತ್॥೧೪॥

ಜನ್ಮಸಂಪದ್ವಿಪಕ್ಷ್ಕ್ಷೇಮ ಪ್ರತ್ಯಕ್ಸಾಧನ ನೈಧನಂ।

ಮಿತ್ರಂ ಪರಮಮೈತ್ರಂ ಚ ನವತಾರಾ ಪ್ರಕೀರ್ತಿತಾ॥೧೫॥

ಜನ್ಮತಾರಾ ದ್ವಿತೀಯಾಚ ಷಷ್ಠೀ ಚೈವ ಚತುರ್ಥಿಕಾ।

ಅಷ್ಟಮೀನವಮೀ ಚೈತೇ ಷಟ್ ಚ ತಾರಾ ಶುಭಾವಹಾ॥೧೬॥

ಜನ್ಮ ನಕ್ಷತ್ರದಿಂದ ನಿತ್ಯನಕ್ಷತ್ರದ ವರೆಗೆ ಎಣಿಸಿ ಒಂಬತ್ತರಿಂದ ಭಾಗಿಸಿದಾಗ ಬಂದಶೇಷಕ್ಕೆ ತಾರಾಫಲವನ್ನು ತಿಳಿಯಬೇಕು. ಕ್ರಮವಾಗಿ ಶೇಷ ೧ ಜನ್ಮತಾರೆ. ೨ ಸಂಪತ್ತಾರೆ. ೩.ವಿಪತ್ತಾರೆ. ೪. ಕ್ಷೇಮತಾರೆ. ೫.ಪ್ರತ್ಯಕ್ ತಾರೆ. ೬.ಸಾಧನತಾರೆ. ೭.ನೈಧನತಾರೆ. ೮.ಮಿತ್ರತಾರೆ. ೯.ಪರಮಮೈತ್ರ ತಾರೆ. ಇವುಗಳಲ್ಲಿ ೧–೨–೪–೬–೮–೯ ಈ ತಾರೆಗಳು ಶುಭವಾಗಿವೆ.

ಯದ್ಯಪಿ ಬಲವಾನ್ ಚಂದ್ರೋ ಮುನಿಭಿಃ ಕಥಿತಃ ಶುಭಃ।
ಶಮಯತಿ ತಥಾ ದುರಿತಂ ತ್ರಿಪಂಚಸಪ್ತವರ್ಜಿತಾ ತಾರಾ॥೧೭॥

ಬಲವುಳ್ಳಚಂದ್ರನು ಶುಭನೆಂದು ಜ್ಞಾನಿಗಳು ಹೇಳುತ್ತಾರೆ ಆದರೂ ೩–೫–೭ನೇ ತಾರೆಗಳು ಬಿಡುವುದು ಒಳ್ಳೆಯದು.

## ಸ್ತ್ರೀಯರು ನವವಸ್ತ್ರಧರಿಸಲು

ಹಸ್ತಾದಿಪಂಚಕೇಶ್ವಿನ್ಯಾಂ ಧನಿಷ್ಠಾಯಾಂ ಚ ಪೂಷಣಿ।
ಗುರೌಶುಕ್ರೇಬುಧೇ ವಾರೇ ಧಾರ್ಯಂ ಸ್ತ್ರೀಭಿರ್ನವಾಂಬರಮ್॥೧೮॥

ಹಸ್ತ,ಚಿತ್ರಾ,ಸ್ವಾತಿ,ವಿಶಾಖಾ, ಅನೂರಾಧ,ಅಶ್ವಿನೀ,ಧನಿಷ್ಠಾ,ರೇವತಿನಕ್ಷತ್ರಗಳಲ್ಲಿಯೂ,ಗುರು,ಶುಕ್ರ,ಬುಧವಾರಗಳಲ್ಲಿ ಸ್ತ್ರೀಯರು ಹೊಸವಸ್ತ್ರ ಧರಿಸಲು ಶುಭವಾಗಿದೆ.

## ಪುರುಷರು ನವವಸ್ತ್ರಧರಿಸಲು

ಲಗ್ನಂ ಮೀನಶ್ಚ ಕನ್ಯಾಂ ಚ ಮಿಥುನಂ ಚ ವೃಷಃ ಶುಭಃ।
ಪೂಷಾ ಪುನರ್ವಸು ದ್ವಂದ್ವೇ ರೋಹಿಣ್ಯುತ್ತರಭೇಷು ಚ॥೧೮॥

ಮೀನ,ಕನ್ಯಾ,ಮಿಥುನ,ವೃಷಭಲಗ್ನಗಳಲ್ಲೂ, ರೇವತೀ,ಪುನರ್ವಸು, ಪುಷ್ಯ, ರೋಹಿಣೀ, ಉತ್ತರಾ,ಉತ್ತರಾಷಾಢ, ಉತ್ತರಾಭಾದ್ರ ನಕ್ಷತ್ರಗಳಲ್ಲೂ ಪುರುಷರು ನವವಸ್ತ್ರಧರಿಸಲು ಶುಭವಾಗುವುದು.

ಸೂರ್ಯೇ ಚಾಲ್ಪಧನಂ ವ್ರಣಂ ಶಶಿದಿನೇ ಕ್ಲೇಶಃ ಸದಾ ಭೂಮಿಜೇ,
ವಸ್ತ್ರಾಣಾಂ ಬಹುತಾ ಬುಧೇ ಸುರುಗುರೌ ವಿದ್ಯಾಗಮಃ ಸಂಪದಃ।
ನಾನಾಭೋಗಯುತಂ ಪ್ರಮೋದ ಶಯನಂ ದಿವ್ಯಂಗನಾ ಭಾರ್ಗವೇ
ಸೌರೇ ಸ್ಯುಃ ಖಲು ರೋಗಶೋಕಕಲಹಾ ವಸ್ತ್ರೇ ಧೃತೇ ನೂತನೇ॥
ರಕ್ತವಸ್ತ್ರಂ ಸ್ತ್ರಿಯಾ ಭೌಮದಿನೇಪಿಧಾರ್ಯಮ್॥೨೦॥

ಭಾನುವಾರ ಹೊಸವಸ್ತ್ರಧರಿಸಲು ಅಲ್ಪಧನ,ಸೋಮವಾರ ವ್ರಣ, ಮಂಗಳವಾರ ಕ್ಲೇಶ, ಬುಧವಾರ ಬಹುವಸ್ತ್ರಲಾಭ, ಗುರುವಾರ ವಿದ್ಯಾ–ಧನಪ್ರಾಪ್ತಿ,ಶುಕ್ರವಾರ ನನಾವಿಧಭೋಗದಿಂದ ಆನಂದ, ದಿವ್ಯಾಂಗನಾ ಸಹವಾಸ, ಶನಿವಾರ ರೋಗ,ಶೋಕ, ಕಲಹಗಳುಂಟಾಗುತ್ತವೆ. ಮತ್ತು ಕೆಂಪುವಸ್ತ್ರವನ್ನು ಬ್ರಾಹ್ಮಣರಲ್ಲದ ಮಂಗಳವಾರ ಧರಿಸಲು ಶುಭವಾಗುವುದು.



## ದೇವತಾಪ್ರತಿಷ್ಠೆ

ಮೂಲಾದಿತಿದ್ವಿತಯಂ ಗ್ರಾಹ್ಯಂ ಶ್ರವಣಶ್ಚ ಮೃಗಃ ಕರಃ।
ಜಲವಾಪ್ಯರ್ಚನೇ ಹೇಯಾಃ ಶುಕ್ರಮಂದಾರ್ಕಭೂಮಿಜಾಃ॥೨೧॥
ಆರ್ದ್ರಾಶತಭಿಷಾಶ್ಲೇಷಾ ವಿಶಾಖಾ ಭರಣೀದ್ವಯಂ।
ತ್ಯಾಜ್ಯಾ ಚ ದ್ವಾದಶೀ ರಿಕ್ತಾ ಷಷ್ಟೀ ಚಂದ್ರಕ್ಷಯೋಷ್ಟಮೀ॥೨೨॥
ಪ್ರತಿಪಚ್ಚ ತಿಥಿರ್ವಾರೌ ತ್ಯಾಜ್ಯೌ ಶನಿಕುಜೌ ತಥಾ।
ಮೂರ್ತಿರ್ದೇವಪ್ರತಿಷ್ಠಾ ಸ್ಯಾತ್ ಸ್ಥಿರಲಗ್ನೋತ್ತರಾಯಣೇ॥೨೩॥

ಮೂಲಾ,ಪುನರ್ವಸು, ಪುಷ್ಯ,ಶ್ರವಣ,ಮೃಗಶಿರಾ,ಹಸ್ತ ನಕ್ಷತ್ರಗಳಲ್ಲಿಯೂ, ಶುಕ್ರ,ಶನಿ, ಭಾನು,ಮಂಗಳವಾರಗಳನ್ನು ಬಿಟ್ಟು ಉಳಿದವಾರಗಳಲ್ಲಿಯೂ ವಾಪೀಕೂಪ ತಟಾಕಾದಿಗಳ ಪೂಜೆಗೆ ಶುಭವು. ಆರ್ದ್ರಾ,ಶತಭಿಷಾ,ಆಶ್ಲೇಷಾ,ವಿಶಾಖಾ, ಭರಣೀ, ಕೃತ್ತಿಕಾ ಈ ನಕ್ಷತ್ರಗಳನ್ನು ಬಿಟ್ಟು, ಉಳಿದನಕ್ಷತ್ರಗಳು. ದ್ವಾದಶೀ,ರಿಕ್ತಾ(೪–೯–೧೪)ತಿಥಿ, ಷಷ್ಠೀ, ಅಮಾವಾಸ್ಯ,ಅಷ್ಟಮೀ,ಪ್ರತಿಪತ್ ತಿಥಿಗಳನ್ನು ಬಿಟ್ಟು, ಶನಿ–ಮಂಗಳವಾರ ಗಳನ್ನು ಬಿಟ್ಟು ಸ್ಥಿರಲಗ್ನದಲ್ಲಿ ಉತ್ತರಾಯಣದಲ್ಲಿ ದೇವತಾ ಮೂರ್ತಿಪ್ರತಿಷ್ಠೆಗೆ ಶುಭವಾಗಿರುತ್ತದೆ.

## ಸೂರ್ಯನಭೂಮಿಶಯನವಿಚಾರ

ಪ್ರದ್ಯೋತನಾತ್ ಪಂಚನಗಾಂಕಸೂರ್ಯ ನವೇಂದುಷಡ್ ವಿಂಶಮಿತಾನಿ ಭಾನಿ।
ಶೇತೇ ಮಹೀ ನೈವ ಗೃಹಂ ವಿಧೇಯಂ ತಡಾಗ ವಾಪೀ ಖನನಂ ನ ಶಸ್ತಮ್॥೨೪॥

ಸೂರ್ಯನಿರುವ ನಕ್ಷತ್ರದಿಂದ ೫–೭–೯–೧೨–೧೯–೨೬ ನಿತ್ಯವಾದರೆ ಭೂಮಿಶಯನ ವೆಂದು ತಿಳಿಯಬೇಕು. ಈ ನಕ್ಷತ್ರವಿರುವದಿನಗಳಲ್ಲಿ ಗೃಹಾರಂಭ,ಕೆರೆ–ಕಟ್ಟೆಕಟ್ಟುವುದು, ಭಾವಿತೊಡುವುದು ಪ್ರಶಸ್ತವಲ್ಲ.

## ವಾಸ್ತುಕರ್ಮಮುಹೂರ್ತ

ಪೂರ್ವಾಷಾಢಾದಿತಿದ್ವಂದ್ವೇ ವಿಧಿಯುಗ್ಮೇ ಹರಿತ್ರಯೇ।
ಉತ್ತರಾಫಲ್ಗುನೀ ಹಸ್ತತ್ರಯಂ ಮೂಲಂ ಚ ರೇವತೀ॥೨೫॥
ಮೈತ್ರಾಶ್ವಿನೀ ಚ ಲಗ್ನಾನಿ ಸಿಂಹಃ ಕನ್ಯಾ ಘಟೋ ವೃಷಃ।
ಮಿಥುನಂ ಮಕರೋ ಗ್ರಾಹ್ಯೋ ವಾಸ್ತುಕರ್ಮಣಿ ಕೋವಿದೈಃ॥೨೬॥
ಶ್ರಾವಣಶ್ಚಾಥ ವೈಶಾಖಃ ಕಾರ್ತಿಕಫಾಲ್ಗುಣಸ್ತಥಾ।
ಮಾಸೇಷು ಮಾರ್ಗಶೀರ್ಷಶ್ಚ ವಾಸ್ತುಕರ್ಮಣಿ ಶಸ್ಯತೇ॥೨೭॥
ವಜ್ರವ್ಯಾಘಾತಶೂಲಾಶ್ಚ ವ್ಯತೀಪಾತಶ್ಚ ಗಂಡಕಃ।
ವಿಷ್ಕಂಭಪರಿಘೌ ಹೇಯೌ ವಾರೌ ಭೂಮಿಜಭಾಸ್ಕರೌ॥೨೮॥

ಪೂರ್ವಾಷಾಢಾ,ಪುನರ್ವಸು,ಪುಷ್ಯ,ರೋಹಿಣಿ,ಮೃಗಶಿರ,ಶ್ರವಣ,ಧನಿಷ್ಠಾ,ಶತಭಿಷ, ಉತ್ತರಾ,ಹಸ್ತ,ಚಿತ್ರಾ,ಸ್ವಾತಿ,ಮೂಲ,ರೇವತೀ,ಅನೂರಾಧ,ಅಶ್ವಿನೀ ಈ ನಕ್ಷತ್ರಗಳಲ್ಲಿ, ಸಿಂಹ, ಕನ್ಯಾ,ಕುಂಭ, ವೃಷಭ,ಮಿಥುನ,ಮಕರಲಗ್ನಗಳು ಮತ್ತು ಶ್ರಾವಣ, ವೈಶಾಖ, ಕಾರ್ತಿಕ, ಫಾಲ್ಗುಣ, ಮಾರ್ಗಶಿರ ಮಾಸಗಳನ್ನು ವಾಸ್ತುಕರ್ಮದಲ್ಲಿ ಸ್ವೀಕರಿಸಬೇಕು. ವಜ್ರ,ವ್ಯಾಘಾತ, ಶೂಲಾ,ವ್ಯತೀಪಾತ, ಗಂಡ, ವಿಷ್ಕಂಭ,ಪರಿಘಾ ಯೋಗಗಳು ಬಿಟ್ಟು, ಮಂಗಳ ಭಾನುವಾರಗಳು ಬಿಟ್ಟುಬಿಡಬೇಕು.

## ಗೃಹಾರಂಭವರ್ಜ್ಯ

ತ್ರಿವೇದ ವೇದಾಗ್ನಿಯುಗಾಗ್ನಿವೇದತ್ರಿಕೇಷು ಭಾನೋಃ ಶಶಿಭಂ ಗೃಹೇಷು।
ದಾಹೇ ವಿನಾಶಃ ಸ್ಥಿರತಾ ಧನಂ ಶ್ರೀ ಶೂನ್ಯಂ ಚ ದಾರಿದ್ರ್ಯಮೃತಿಃ ಕ್ರಮೇಣ॥೨೮॥

ಸೂರ್ಯನಿರುವ ನಕ್ಷತ್ರದಿಂದ೩–೪–೪–೩–೪–೩–೪–೩ ಚಂದ್ರನಿರುವ ನಕ್ಷತ್ರವಿದ್ದರೆ ಕ್ರಮವಾಗಿ ದಾಹ, ವಿನಾಶ, ಸ್ಥಿರತಾ, ಧನಲಾಭ, ಶ್ರೀಲಾಭ, ಶೂನ್ಯ,ದಾರಿದ್ರ್ಯ, ಮೃತಿ ಎಂಬುದಾಗಿ ಫಲಗಳನ್ನು ತಿಳಿಯಬೇಕು.

## ದ್ವಾರಶಾಖಾವರೋಪಣಮೂಹೂರ್ತ

ಮೂಲೇ ಭೌಮೇ ತ್ರಿಋಕ್ಷಂ ಗೃಹಪತಿ ಮರಣಂ ಪಂಚಗರ್ಭೇ ಸುಖಂಸ್ಯಾತ್
ಮಧ್ಯೇ ದೇಯಾಷ್ಟ ಋಕ್ಷಂ ಘನಸುತಸುಖದಂ ಪುಚ್ಛದೇಶೇಷ್ಟ ಹಾನಿಃ।
ಪಶ್ಚದ್ದಾಯಂ ತ್ರಿಋಣಂ ಗೃಹಪತಿ ಸುಖದಂ ಭಾಗ್ಯಪುತ್ರಾರ್ಥದೇಯಂ
ಸೂರ್ಯರ್ಕ್ಷಚ್ಚಂದ್ರಋಕ್ಷಂ ಪ್ರತಿದಿನ ಗಣಯೇದ್ಭೌಮ ಚಕ್ರಂ ವಿಲೋಕ್ಯಮ್।೨೯।

ಸೂರ್ಯನಿರುವನಕ್ಷತ್ರದಿಂದ ನಿತ್ಯನಿಕ್ಷತ್ರವು ೩ನಕ್ಷತ್ರದೊಳಗೆ ಇದ್ದರೆ ಮನೆಯಜಮಾನನಿಗೆ ಮರಣ, ೫ನಕ್ಷತ್ರ ಶುಭ, ನಂತರ ೮ನಕ್ಷತ್ರ ಧನ,ಪುತ್ರಸುಖ, ನಂತರ ೮ ನಕ್ಷತ್ರ ಮಿತ್ರಹಾನಿ, ನಂತರ ೩ ಯಜಮಾನನಿಗೆ ಭಾರ್ಯ,ಪುತ್ರ, ಧನ ಸುಖವುಂಟಾಗುವುದು. ಈ ರೀತಿ ದ್ವಾರಚಕ್ರದ ಫಲವನ್ನುತಿಳಿಯಬೇಕುಯ.

## ದ್ವಾರಶಾಖಾಚಕ್ರ

ಅರ್ಕಾಚ್ಚತ್ವಾರಿ ಋಕ್ಷಣಿ ಊರ್ಧ್ವೇರ್ಲ ಚೈವ ಪ್ರದಾಪಯೇತ್।
ದ್ವೌದ್ವೌ ಕೋಣೇಷು ದದ್ಯಾದ್ವೈಲ ಶಾಖಾಯಾಂಚ ಚತುಶ್ಚತುಃ॥೩೦॥
ಅಧಶ್ಚ ತ್ರೀಣಿ ದೇಯಾನಿ ಮಧ್ಯೇ ಚತ್ವಾರಿ ದಾಪಯೇತ್।
ಊರ್ಧ್ವಂ ತು ಲಭತೇ ರಾಜ್ಯಮುದ್ವಾಸಂ ಕೋಣಕೇಷು ಚ॥೩೧॥
ಶಾಖಾಯಾಂ ಲಭತೇ ಲಕ್ಷ್ಮೀಂ ಮಧ್ಯೇ ರಾಜ್ಯಪ್ರದಂ ತಥಾ।
ಅಧಸ್ಥೇ ಮರಣಂ ಪ್ರೋಕ್ತಂ ದ್ವಾರಚಕ್ರಂ ಪ್ರಕೀರ್ತಿತಮ್॥೩೨॥

ಸೂರ್ಯನಿರುವನಕ್ಷತ್ರದಿಂದ ನಿತ್ಯನಿಕ್ಷತ್ರದವರೆಗೆ ಎಣಿಸಬೇಕು ಮೊದಲ ೪ ನಕ್ಷತ್ರ ದ್ವಾರದಮೇಲೆ



ನಂತರ, ೨–೨ ನಕ್ಷತ್ರಗಳನ್ನು ಕೋಣದಲ್ಲಿ, ನಂತರ ಎರಡು ಶಾಖೆಯ ಮೇಲೆ ೪–೪ ನಕ್ಷತ್ರಗಳನ್ನು ನಂತರ ಕೆಳಗೆ ಹೊಸ್ತಿಲಮೇಲೆ ೩ ನಕ್ಷತ್ರಗಳು ಕೊನೆಗೆ ಮಧ್ಯದಲ್ಲಿ ೪ನಕ್ಷತ್ರಗಳನ್ನು ಇಡಬೇಕು. ದ್ವಾರದಮೇಲೆ ರಾಜ್ಯಪ್ರಾಪ್ತಿ, ಕೋಣದಲ್ಲಿ ಉದ್ವಾಸನ, ಎರಡುಶಾಖೆಯ ಮೇಲೆ ಲಕ್ಷ್ಮೀಪ್ರಾಪ್ತಿ, ಹೊಸ್ತಿಲಮೇಲೆ ಮೃತ್ಯು,ಮಧ್ಯ ರಾಜ್ಯಪ್ರಾಪ್ತಿ ಈ ರೀತಿಫಲಗಳನ್ನು ತಿಳಿಯುವುದು.

## ಕಪಾಟಚಕ್ರ

ಕೃತಾಕರಾಬ್ಧಿಯುಗ್ಮರಾಮಮಂತಕಕ್ಷ ವಾರಿಧಿಃ।
ಕರೌ ಸಮುದ್ರಸೂರ್ಯ ಭಾದ್ದಿನರ್ಕ್ಷಕೇ ಫಲಂ ವದೇತ್॥೩೨॥
ಧನಾಗಮಂವಿನಾಶಸೌಭಾಗ್ಯಖ್ಯಂ ಬಂಧನಂ ಮೃತಿಃ ಕ್ಷತಿಃ।
ಶುಭಂಚ ರೋಗಸೌಖ್ಯದಂ ಶುಂ ಕಪಾಟಚಕ್ರಯೋಃ॥೩೩॥

ಸೂರ್ಯನಿರುವನಕ್ಷತ್ರದಿಂದ ನಿತ್ಯನಿಕ್ಷತ್ರ ೪ ಆದರೆ ಧನಾಗಮ,೨ ವಿನಾಶ,೪ ಸೌಖ್ಯ, ೨ಬಂಧನ,೩ ಮೃತಿ, ೨ ಕ್ಷಯ,೪ ಶುಭ,೨ ರೋಗ, ೪ ಸೌಖ್ಯ ಈ ರೀತಿ ಕಪಾಟಿನ ಮಹೂರ್ತತಿಳಿಯಬೇಕು.

ಚಿತ್ರಾನುರಾಧಾ ಮೃಗಪೌಷ್ಣಪುಷ್ಯಸ್ವಾತಿ ಶ್ರವಿಷ್ಠಾ ಶ್ರವಣಂ ಚ ಮೂಲಮ್।
ವಾರೇ ಷ್ವಸೂರ್ಯಕ್ಷಿತಿಜೇ ಷ್ವರಿಕ್ತಾ ತಿಥೌ ಪ್ರಶಸ್ತೋ ಭವನ ಪ್ರವೇಶಃ॥೩೪॥

ಚಿತ್ರಾ,ಅನುರಾಧಾ, ಮೃಗಶಿರ,ರೇವತಿ,ಪುಷ್ಯ,ಸ್ವಾತಿ,ಧನಿಷ್ಠಾ,ಶ್ರವಿಷ್ಠಾ, ಶ್ರವಣ, ಮೂಲನಕ್ಷತ್ರಗಳಲ್ಲಿಯೂ, ಭಾನು,ಮಂಗಳವಾರಗಳನ್ನು ಬಿಟ್ಟು, ರಿಕ್ತಾ(೪–೯–೧೪) ತಿಥಿಗಳನ್ನು ಬಿಟ್ಟು ಉಳಿದದಿನಗಳಲ್ಲಿ ಗೃಹ ಪ್ರವೇಶ ಶುಭವಾಗಿರುತ್ತದೆ.

## ಗೃಹಪ್ರವೇಶಕ್ಕೆ ಕಲಶಚಕ್ರ

ಪ್ರವೇಶಃ ಕಲಶೇರ್ಕರ್ಕ್ಷಾತ್ ಪಂಚನಾಗಾಷ್ಟಷಟ್ಕ್ರಮಾತ್।
ಅಶುಭಂ ಚ ಶುಭಂ ಜ್ಞೇಯಮಶುಭಂ ಚ ಶುಂ ತಥಾ॥೩೫॥

ಸೂರ್ಯನಿರುವನಕ್ಷತ್ರದಿಂದ ನಿತ್ಯನಿಕ್ಷತ್ರ ೫ ಅದರೆ ಅಶುಭ, ನಂತರ ೮ ಶುಭ, ನಂತರ೮ ಅಶುಭ. ನಂತರ ೬ ಅಶುಭ. ಇದುಕಲಶಚಕ್ರ.

## ನೇಗಿಲುಹೊಡೆಯಲು ಮುಹೂರ್ತ

ಅನೂರಾಧಾ ಚತುಷ್ಕಂಚ ಮಘಾದಿತಿಯುಗೇ ಕರೇ।
ಸ್ವಾತೀ ಶ್ರುತಿವಿಧಿದ್ವಂದ್ವೇರೇವತ್ಯಾಮುತ್ತರಾಸು ಚ॥೩೬॥
ಗೋಸ್ತ್ರೀಯುಗ್ಮೇ ಬಲಃ ಕಾರ್ಯೋ ಮೀನೇ ಹೇಯಃ ಶನಿಃ ಕುಜಃ।
ಷಷ್ಠೀ ರಿಕ್ತಾ ದ್ವಾದಶೀ ಚ ದ್ವಿತೀಯಾ ದ್ವಯಪರ್ವ ಚ॥೩೭॥

ಅನೂರಾಧಾ,ಜ್ಯೇಷ್ಠಾ,ಮೂಲಾ, ಪೂರ್ವಾಷಾಢ,ಮಘಾ,ಪುನರ್ವಸು, ಪುಷ್ಯ,ಹಸ್ತ,ಸ್ವಾತೀ,ಶ್ರವಣ, ರೋಹಿಣಿ,ಮೃಗಶಿರ,ರೇವತೀ,ಉತ್ತರಾ, ಉತ್ತರಾಷಾಢ,

ಉತ್ತರಾಭಾದ್ರ ನಕ್ಷತ್ರಗಳು ಮತ್ತು ವೃಷಭ,ಕನ್ಯಾ,ಮಿಥುನ, ಮೀನ ಈ ಲಗ್ನಗಳೂ ಶುಭ ಮತ್ತು ಮಂಗಳವಾರ,ಶನಿವಾರ, ರಿಕ್ತಾ(೪-೯-೧೪) ತಿಥಿಗಳಲ್ಲಿ ನೆಗಿಲು ಹೊಡೆಯಲು ಶುಭವಲ್ಲ.

**ಹಲಚಕ್ರ**

ತ್ರಿಭಿಸ್ತ್ರಿಭಿಸ್ತ್ರಿಭಿಃ ಪಂಚಸ್ತ್ರಿಭಿಃ ಪಂಚಸ್ತ್ರಿಭಿರ್ದ್ವಯಮ್।
ಸೂರ್ಯಭಾದ್ದಿನಭಂ ಯಾವದ್ಧಾನಿವೃದ್ಧೀ ಹಲೇ ಕ್ರಮಾತ್॥೩೮॥

ಸೂರ್ಯನಿರುವನಕ್ಷತ್ರದಿಂದ ನಿತ್ಯನಿಕ್ಷತ್ರ ೩-೩-೩-೫-೩-೫-೩-೨ ಹಾನಿ-ವೃದ್ಧಿಯಾಗಿ ಕ್ರಮವಾಗಿ ಹಲಚಕ್ರವನ್ನು ತಿಳಿಯಬೇಕು.

**ಬೀಜಬಿತ್ತಲು ಶುಭದಿನ ಮತ್ತು ಫಣಿಚಕ್ರ**

ಹಸ್ತ ತ್ರಯೇ ಮಘಾಪುಷ್ಯೇ ತ್ರ್ಯುತ್ತರೇ ರೋಹಿಣೀದ್ವಯೇ।
ಧನಿಷ್ಠಾರೇವತೀಯುಗ್ಮೇ ತಥಾ ಮೂಲಾನುರಾಧಯೋಃ॥೩೯॥
ಶುಭೇ ವಾರೇ ತಿಥೌ ಶ್ರೇಷ್ಠಾ ಬೀಜೋಪ್ತಿಸ್ತ್ವಥ ರಾಹುಭಾತ್।
ಅಷ್ಟಾಗ್ನೀಂದುತ್ರಯಂ ಚೌಕಂ ತ್ರಯೇಂದು ತ್ರಿಚತುಷ್ಟಯಮ್।
ಅ ಸಚ್ಛುಭಂ ಕ್ರಮಾಜ್ಞೇಯಂ ದಿನರ್ಕ್ಷಂ ಫಣಿಚಕ್ರಕಮ್॥೪೦॥

ಹಸ್ತ,ಚಿತ್ತಾ, ಸ್ವಾತಿ, ಮಘಾ, ಪುಷ್ಯ,ಉತ್ತರಾತ್ರಯ, ರೋಹಿಣೀ,ಮೃಗಶಿರಾ, ಧನಿಷ್ಠಾ, ರೇವತಿ,ಅಶ್ವಿನೀ,ಮೂಲಾ,ಅನೂರಾಧ ಗಳಲ್ಲೂ,ಶುಭವಾರ, ಶುಭತಿಥಿ ಗಳಲ್ಲೂ ಬೀಜಬಿತ್ತಬೇಕು.

ರಾಹು ಇರುವ ನಕ್ಷತ್ರದಿಂದ ೮ ಅಶುಭ, ೩ ಶುಭ, ೧ ಅಶುಭ,೩ ಶುಭ, ೧ ಅಶುಭ, ೩ ಶುಭ, ೧ ಅಶುಭ, ೩ ಶುಭ, ೪ ಅಶುಭ ಈ ರೀತಿ ನಿತ್ಯನಕ್ಷತ್ರಗಳನ್ನು ಎಣಿಸಿ ಫಣಿಚಕ್ರದ ಫಲವನ್ನು ತಿಳಿಯಬೇಕು.

ಧಾನ್ಯಛೇದನ ಮುಹೂರ್ತ

ಪೂರ್ವೋತ್ತರಾ ಮಘಾಶ್ಲೇಷಾ ಜ್ಯೇಷ್ಠಾರ್ದ್ರಾ ಶ್ರವಣಾದ್ವಯೇ।
ಭರಣೀದ್ವಿತಯೇ ಮೂಲೇ ಮೃಗೇ ಪುಷ್ಯೇ ಕರತ್ರಯೇ।
ಧಾನ್ಯಚ್ಛಿದಾ ಶುಭಾರಿಕ್ತಾ ಹಿತ್ವಾ ಭೌಮಶನೈಶ್ಚರೌ॥೪೧॥

ಪೂರ್ವಾತ್ರಯ,ಉತ್ತರಾತ್ರಯ, ಮಘಾ,ಆಶ್ಲೇಷಾ,ಜ್ಯೇಷ್ಠಾ,ಆರ್ದ್ರಾ, ಶ್ರವಣಾ, ಧನಿಷ್ಠಾ, ಭರಣೀ,ಕೃತ್ತಿಕಾ,ಮೂಲಾ,ಮೃಗಶಿರ,ಪುಷ್ಯ,ಹಸ್ತ,ಚಿತ್ರಾ, ಸ್ವಾತಿನಕ್ಷತ್ರಗಳಲ್ಲಿ ಮಂಗಳ-ಶನಿವಾರ ಮತ್ತು ರಿಕ್ತಾತಿಥಿಗಳನ್ನು ಬಿಟ್ಟು ಧಾನ್ಯಛೇದನದಿಂದ ಶುಭವಾಗುವುದು.

**ಧಾನ್ಯಕಣಕ್ಕೆ ಮುಹೂರ್ತ**

ಅನೂರಾಧಾ ಶ್ರವೇ ಮೂಲೇ ರೇವತ್ಯಾಂಚ ಮೃಗೇ ತ್ರಿಭೇ।
ಜ್ಯೇಷ್ಠಾಯಾಂ ಚೈವ ರೋಹಿಣ್ಯಾಂ ಶುಭಂ ಸ್ಯಾತ್ಕಣಮರ್ದನಮ್॥೪೪॥



ಅನೂರಾಧಾ,ಶ್ರವಣ,ಮೂಲಾ,ರೇವತ್ಯೀ,ಮೃಗಶಿರ,ಆರ್ದ್ರಾ,ಪುನರ್ವಸು,ಜ್ಯೇಷ್ಠಾ,ರೋಹಿಣೀ ನಕ್ಷತ್ರಗಳನ್ನು ಧಾನ್ಯಗಳನ್ನು ಕಣದಲ್ಲಿ ಮರ್ದನಮಾಡಬೇಕು.

**ಧಾನ್ಯರಕ್ಷಣೆ**

ಪುನರ್ಭೇ ಮೃಗಶೀರ್ಷೇಂತ್ಯೇನುರಾಧಾ ಶ್ರವಣತ್ರಯೇ।
ಹಸ್ತತ್ರಯೇಶ್ವಿನೀ ಪುಷ್ಯೇ ರೋಹಿಣ್ಯಾಮುತ್ತರಾತ್ರಯೇ।
ಗುರೌಶುಕ್ರೇ ರವೀಂದ್ವೋಃ ಸತ್ಕೋಶಾದೌ ಧಾನ್ಯ ರಕ್ಷಣೇ॥೪೫॥

ಪುನರ್ವಸು, ಮೃಗಶಿರ,ರೇವತೀ, ಅನೂರಾಧಾ,ಶ್ರವಣಾ, ಧನಿಷ್ಠಾ,ಶತಭಿಷ, ಹಸ್ತ, ಚಿತ್ರಾ,ಸ್ವಾತಿ,ಅಶ್ವಿನೀ,ಪುಷ್ಯ, ರೋಹಿಣೀ, ಉತ್ತರಾತ್ರಯನಕ್ಷತ್ರಗಳಲ್ಲಿ ಗುರುಶುಕ್ರ ಭಾನುಸೋಮವಾರಗಳಲ್ಲಿ ಧಾನ್ಯರಕ್ಷಣೆಗೆ ಶುಭವಾಗಿವೆ.

**ಬೀಜಸಂಗ್ರಹ**

ಹಸ್ತಾತ್ರಯೇ ಪುನರ್ವಸ್ವೋಃರೋಹಿಣ್ಯಾಂ ಶ್ರವಣದ್ವೇ।
ಸ್ಥಿರೇ ಲಗ್ನೇ ಶುಭೇ ವಾರೇ ವಿಚಂದ್ರೇ ಬೀಜಸಂಗ್ರಹಃ॥೪೬॥

ಹಸ್ತಾ,ಚಿತ್ತಾ,ಸ್ವಾತಿ,ಪುನರ್ವಸು,ರೋಹಿಣೀ,ಶ್ರವಣ,ಧನಿಷ್ಠಾ ನಕ್ಷತ್ರಗಳಲ್ಲಿ, ಸ್ಥಿರೇ ಲಗ್ನದಲ್ಲಿ, ಶುಭವಾರದಲ್ಲಿಯೂ ಸೋಮವಾರಬಿಟ್ಟು ಬೀಜಸಂಗ್ರಹವು ಶುಭವಾಗಿದೆ.

**ನವಾನ್ನಭೋಜನ**

ಹಸ್ತಾಚಿತ್ರಾನುರಾಧಾಂತ್ಯೇ ರೋಹಿಣೀ ಶ್ರವಣಾದ್ವಯೇ।
ಮೃಗಾಶ್ವಿನ್ಯುತ್ತರಾಸ್ವರ್ಕೇ ಶುಭೇ ವಾರೇ ತಿಥಾವಪಿ॥೪೭॥
ನವಾನ್ನಸ್ಯ ವಿಧಾನಂ ಚ ಪ್ರಾಶನಂ ಫಲಮೂಲಯೋಃ।
ವಿನಾ ನಂದಾಂ ವಿಷಘಟೀಂ ಮಧುಪೌಷಾರ್ಕಿಭೂಮಿಜಾನ್॥೪೮॥

ಹಸ್ತಾ,ಚಿತ್ರಾ,ಅನುರಾಧಾ,ರೇವತಿ,ರೋಹಿಣೀ,ಶ್ರವಣಾ,ಧನಿಷ್ಠಾ,ಮೃಗಾಶಿರ,ಅಶ್ವಿನೀ, ಉತ್ತರಾತ್ರಯಗಳಲ್ಲಿ,ಭಾನುವಾರ,ಸೋಮವಾರ,ಬುಧವಾರ, ಗುರುವಾರ, ಶುಕ್ರವಾರ ಗಳಲ್ಲಿ,ನಂದ(೧-೬-೧೧)ತಿಥಿಗಳನ್ನು ಬಿಟ್ಟು ಶುಭತಿಥಿಗಳಲ್ಲಿ, ವಿಷಘಟಿಗಳನ್ನು ಬಿಟ್ಟು, ಚೈತ್ರ, ಪುಷ್ಯಮಾಸಗಳನ್ನು ಬಿಟ್ಟು ಉಳಿದಮಾಸಗಳಲ್ಲಿ, ಮಂಗಳ-ಶನಿವಾರಗಳನ್ನು ಬಿಟ್ಟು ನವಾನ್ನ ಭೋಜನಕ್ಕೆ ಶುಭವಾಗಿದೆ.

ಬುಧರ್ಕ್ಷಾತ್ಪುತ್ರಪುತ್ರೇಷುಪುತ್ರವೇದಯುಂದುಕಮ್।
ಸಚ್ಛುಭಂ ಶುಭಮರ್ಥಘ್ನಂ ಶುಭಂ ವ್ಯರ್ಥ ಶುಭಂ ಕ್ರಮಾಮ್॥೪೯॥

ಬುಧನಿರುವ ನಕ್ಷತ್ರದಿಂದ ನಿತ್ಯನಕ್ಷತ್ರದ ವರೆಗೆ ಎಣಿಸಿದಾಗ ಮೊದಲ ಐದುನಕ್ಷತ್ರದಲ್ಲಿ ಬಂದರೆ ಶುಭ, ನಂತರ ೫ ಶುಭ,ನಂತರ ೫ ಶುಭ, ನಂತರ ೫ ಅರ್ಥಹಾನಿ, ನಂತರ ೪ ಶುಭ,

ನಂತರ ೨ ವ್ಯರ್ಥ,ನಂತರ ೧ ಶುಭ ಈರೀತಿ ಫಲಗಳನ್ನು ತಿಳಿಯಬೇಕು.

## ಹೊಸ ಒಲೆ ಪ್ರಾರಂಭಿಸಲು

ಸೂರ್ಯಭಾದಂಗವೇದಾ ಷ್ಟರಾಮಶತ್ರುಶುಭಾಶುಭಮ್।
ಚುಲ್ಲೀಚಕ್ರೇ ಕ್ರಮಾತ್ ಜ್ಞೇಯಂ ಶುಭಾಶುಭವಿಚಕ್ಷಣಮ್॥೫೦॥

ರವಿ ಇರುವ ನಕ್ಷತ್ರದಿಂದ ನಿತ್ಯನಕ್ಷತ್ರದ ವರೆಗೆ ಎಣಿಸಿದಾಗ ಮೊದಲ ೬ ಶುಭ, ೪ಅಶುಭ,೮ಶುಭ,೩ ಅಶುಭ,೬ಶುಭ ಫಲಗಳನ್ನು ತಿಳಿಯಬೇಕು.

ಹರಿಃ ಸೂರ್ಯಚಿತ್ರಾದಿತಿರ್ಮೈತ್ರಪುಷ್ಯೇ ಮೃಗೇ ರೋಹಿದಸ್ರೇ ವಿರಿಕ್ತೇ ಚ ಭೌಮೇ।
ತ್ಯಜೇತ್ಕುಂಭಮೀನ್ಯಲೌ ಲಗ್ನಗೇಹೇ ಪವಿತ್ರಂ ತು ಕೃತ್ಯೇ ರವೇರ್ಯಾಮಲಾನಿ॥೫೧॥
ಸೂರ್ಯಭಾದ್ರಾಮರಾಮಂಗರಾಗತಾರ್ಕಾಂಗಮೇಷು ಚ।
ಅಸಚ್ಛುಭಂ ಕರ್ಮಾತ್ ಜ್ಞೇಯಂ ಮಾರ್ಜನೀಸಂಜ್ಞಕೇ ಶುಭೇ॥೫೨॥

ಶ್ರವಣ,ಹಸ್ತ,ಚಿತ್ರಾ,ಪುನರ್ವಸು,ಅನೂರಾಧ,ಪುಷ್ಯ,ಮೃಗಶಿರ,ರೋಹಿಣಿ,ಅಶ್ವಿನಿ ಈ ನಕ್ಷತ್ರಗಳಲ್ಲೂ, ಕುಂಭ,ಮೀನ,ವೃಶ್ಚಿಕ ಲಗ್ನಗಳಲ್ಲಿ ರಿಕ್ತಾತಿಥಿ(೪–೯–೧೪)ಗಳನ್ನು, ಮಂಗಳವಾರಗಳನ್ನು ಬಿಟ್ಟು ಪವಿತ್ರಕರ್ಮ (ಪೊರಕೆ ಇತ್ಯಾದಿ) ಗಳನ್ನು ಮಾಡಬೇಕು. ರವಿ ಇರುವ ನಕ್ಷತ್ರದಿಂದ ನಿತ್ಯನಕ್ಷತ್ರಗಳನ್ನು ಎಣಿಸಿದಾಗ ೩ಅಶುಭ,೩ಶುಭ,೬ ಅಶುಭ, ೩ ಶುಭ, ೬ಅಶುಭ,೬ಶುಭ ವೆಂದು ಮಾರ್ಜನೀಚಕ್ರದ ಫಲಗಳನ್ನು ತಿಳಿಯುವುದು.

ಪುಷ್ಯಂ ಭಾದ್ರಪದಾಯುಗ್ಮಂ ಸ್ವಾತೀ ಚ ಶ್ರವಣಾಶ್ವಿನೀ।
ಹಸ್ತೋತ್ತರಾ ಮೃಗೋ ಚೈತ್ರಂ ತಥಾ ಶ್ಲೇಷಾ ಚ ರೇವತೀ॥೫೩॥
ಗ್ರಾಹ್ಯಾನಿ ಭಾನಿ ಚೈತಾನಿ ಕ್ರಯವಿಕ್ರಯಣೇ ಬುಧೈಃ।
ಚಂದ್ರಭಾರ್ಗವಜೀವಾಶ್ಚ ವಾರಾಃ ಶಕುನ ಉತ್ತಮಃ॥೫೪॥

ಪುಷ್ಯ,ಪೂರ್ವಾಭಾದ್ರ,ಉತ್ತರಾಭಾದ್ರ,ಸ್ವಾತಿ,ಶ್ರವಣ,ಅಶ್ವಿನೀ,ಹಸ್ತ, ಉತ್ತರಾ, ಮೃಗಶಿರಾ, ಅನುರಾಧ, ಆಶ್ಲೇಷಾ,ರೇವತೀ ನಕ್ಷತ್ರಗಳಲ್ಲಿ,ಸೋಮ, ಗುರು,ಶುಕ್ರ ವಾರಗಳಲ್ಲಿ ಕೊಡು–ಕೊಳ್ಳುವ ವ್ಯವಹಾರದಲ್ಲಿ ಶಕುನವೂ ಶುಭವಿದ್ದಾಗ ಮಾಡಬಹುದು.

ಚರಮೃದುಲಘುಭೇ ಸಲ್ಲಗ್ನಕೇ ಚೈತ್ರಪೌಷೇ।
ಕ್ಷಿತಿಜರವಿಚನಂದಾಪೇಯನಾಡೀಂ ವಿಹಾಯ।
ಪ್ರತಿಸಮನವ ಜಾತೋ ನ್ನಸ್ಯ ಶತ್ಯಾಶನ ಸತ್।
ಧ್ರುವರಣಸಹಿತೈಸ್ತಃ ಕಾಂಸ್ಯಪಾತ್ರಾದಿಭೋಜ್ಯಮ್॥೫೬॥
ಮುಖೇ ತ್ರೀಣಿ ಶೋಕಂ ರಸೇ ಕಂಠೇ ಪುಷ್ಟಿಃ ತ್ರಯೋ
ರೋಗಕುಕ್ಷೌ ಧನಂ ರಾಮ ವಾಮೇ।



ತ್ರಯೇ ಪೃಷ್ಠ ವ್ಯಾಧಿಃ ಸುಖಂ ರಾಮ ಮಧ್ಯೇ
ರಸೇ ಹಾನಿಭಾರ್ಕಾದಧೋ ಭುಂಜಿಪಾತ್ರಮ್॥೫೭॥

ಚರ(ಸ್ವಾತಿ,ಪುನರ್ವಸು,ಶ್ರವಣ,ದನಿಷ್ಠಾ, ಶತಭಿಷಾ) ಮೃದು (ಮೃಗಶಿರಾ, ರೇವತೀ, ಚಿತ್ರಾ,ಅನೂರಾಧಾ) ಲಘು(ಹಸ್ತ,ಅಶ್ವಿನೀ,ಪುಷ್ಯ, ಅಭಿಜಿತ್) ಧ್ರುವ(ಉತ್ತರಾತ್ರಯ,ರೋಹಿಣಿ) ಈ ನಕ್ಷತ್ರಗಳಲ್ಲಿ, ಶುಭಲಗ್ನದಲ್ಲಿ ಚೈತ್ರ, ಪೌಷ ಮಾಸ ಮತ್ತು ಮಂಗಳ,ಶನಿವಾರಗಳನ್ನು ನಂದಾತಿಥಿ (೧–೬–೧೧), ವಿಷಘಟಿಗಳನ್ನು ಬಿಟ್ಟು ಕಂಚು ಮೊದಲಾದ ಹೊಸ ಪಾತ್ರೆಗಳಲ್ಲಿ ಭೋಜನಪ್ರಾರಂಭಿಸ ಬೇಕು. ಸೂರ್ಯನಕ್ಷತ್ರದಿಂದ ನಿತ್ಯನಕ್ಷತ್ರವು ೩ ಮುಖ (ಶೋಕ)ನಂತರ ೬ ಕಂಠ (ಪುಷ್ಟಿ) ನಂತರ ೩ ಕುಕ್ಷಿ(ರೋಗ) ನಂತರ ೩ವಾಮಕುಕ್ಷಿ (ಧನ) ನಂತರ ಪೃಷ್ಠ (ವ್ಯಾಧಿ) ನಂತರ ೩ ಮಧ್ಯ (ಸುಖ) ನಂತರ ೬ ಕೆಳಭಾಗ (ಹಾನಿ) ಈ ರೀತಿ ಹೊಸ ಭೋಜನಪಾತ್ರೆಯ ಫಲವನ್ನು ತಿಳಿಯಬೇಕು.

## ಭೈಷಜ್ಯಕರ್ಮ

ಪೌಷ್ಣದ್ವಯೇ ಚಾದಿತಿಭದ್ವಯೇ ಚ ಹಸ್ತತ್ರಯೇಚ ಶ್ರವಣತ್ರಯೇಚ ।
ಮೈತ್ರೇ ಚ ಮೂಲೇತ ಮೃಗೇಚ ಶಸ್ತಂ ಭೈಷಜ್ಯಕರ್ಮ ಪ್ರವದಂತಿ ಸಂತಃ॥೫೮॥

ರೇವತೀ,ಅಶ್ವಿನೀ,ಪುನರ್ವಸು,ಪುಷ್ಯ,ಹಸ್ತ,ಚಿತ್ರಾ,ಸ್ವಾತಿ,ಶ್ರವಣ, ಧನಿಷ್ಠಾ, ಶತಭಿಷಾ, ಅನೂರಾಧ,ಮೂಲಾ,ಮೃಗಶಿರಾ ಈ ನಕ್ಷತ್ರಗಳಲ್ಲಿ ಶುಭವಾರ, ಶುಭತಿಥಿ ಗಳಲ್ಲಿ ಔಷಧಸೇವನೆಗೆ ಶುಭವೆಂದು ಜ್ಞಾನಿಗಳು ಹೇಳುತ್ತಾರೆ.

## ರೋಗೋತ್ಪತ್ತಿಗೆ ಅಶುಭ

ಸ್ವಾತ್ಯಾಶ್ಲೇಷರೌದ್ರಪೂರ್ವತ್ರಯೇಷುಶಾಕ್ರೇ ಭೌಮೇ ಸೂರ್ಯಜೇ ಸೂರ್ಯವಾರೇ।
ನಂದಾರಿಕ್ತಾಸ್ವೇವ ರೋಗಸ್ಯ ಚಾಪ್ತಿರ್ಮೃತ್ಯುರ್ಜ್ಞೇಯಃ ಶಂಕರೋ ರಕ್ಷಿತಾ ಅಪಿ॥೫೯॥

ಸ್ವಾತೀ, ಆಶ್ಲೇಷಾ,ಆರ್ದ್ರಾ,ಪೂರ್ವಾತ್ರಯ,ಜ್ಯೇಷ್ಠಾ ಈನಕ್ಷತ್ರಗಳಲ್ಲಿ ಮಂಗಳ,ಶನಿ,ರವಿವಾರಗಳಲ್ಲಿ, ನಂದಾ(೧–೬–೧೧),ರಿಕ್ತಾ(೪–೯–೧೪) ತಿಥಿಗಳಲ್ಲಿ ರೋಗೋತ್ಪತ್ತಿಯಾದರೆ ಶಿವನು ರಕ್ಷಿಸಿದರೂ ಜೀವಿಯು ಮೃತ್ಯುವಶನಾಗುವನು.

## ರೋಗಮುಕ್ತಸ್ನಾನ

ಇಂದೋರ್ವಾರೇ ಭಾರ್ಗವೇ ಚ ಧ್ರುವೇಷು ಸರ್ಪಾದಿತ್ಯಸ್ವಾತಿಯುಕ್ತೇಷು ಭೇಷು।
ಪಿತ್ರ್ಯೇ ಚಾಂತ್ಯೇ ಚೈವ ಕುರ್ಯಾತ್ಕದಾಚಿನ್ನೈವ ಸ್ನಾನಂ ರೋಗಮುಕ್ತಸ್ಯ ಜಂತೋಃ॥೬೦॥
ಲಗ್ನೇ ಚರೇ ಸೂರ್ಯಕುಜೇಜ್ಯವಾರೇ ರಿಕ್ತಾತಿಥೌ ಚಂದ್ರಬಲೇ ಚ ಹೀನೇ।
ಕೇಂದ್ರತ್ರಿಕೋಣಾರ್ಥಗತೇ ಚ ಪಾಪೇ ಸ್ನಾನಂ ಹಿತಂ ರೋಗವಿಮುಕ್ತಾನಾಮ್॥೬೧॥

ಸೋಮ,ಶುಕ್ರವಾರಗಳಲ್ಲಿ, (ಧ್ರುವ) ರೋಹಿಣೀ, ಉತ್ತರಾತ್ರಯ,ಆಶ್ಲೇಷಾ,

ಪುನರ್ವಸು,ಸ್ವಾತಿ,ಮಘಾ, ರೇವತೀ ನಕ್ಷತ್ರಗಳಲ್ಲಿ ರೋಗಮುಕ್ತನಿಗೆ ಸ್ನಾನವು ಒಳ್ಳೆಯದಲ್ಲ. ಚರಲಗ್ನದಲ್ಲಿ,ರವಿ, ಮಂಗಳ,ಗುರುವಾರಗಳಲ್ಲಿ, ರಿಕ್ತಾತಿಥಿಗಳಲ್ಲಿ(೪–೯–೧೪),ಚಂದ್ರನಿರ್ಬಲನಾಗಿರಲು, ಕೇಂದ್ರ ತ್ರಿಕೋಣ ಗಳಲ್ಲಿ(೧–೪–೭–೧೦. ೫–೯) ಪಾಪಗ್ರಹರು ಇರುತ್ತಿರಲು ರೋಗಮುಕ್ತ ನಾದವನು ಸ್ನಾನಮಾಡುವದು ಒಳ್ಳೆಯದು.

## ವ್ಯಾಪಾರಪ್ರಾರಂಭಿಸಲು

ಅನುರಾಧೋತ್ತರಾಪುಷ್ಯೇ ರೇವತೀರೋಹಿಣೀ ಮೃಗೇ।
ಹಸ್ತಚಿತ್ರಾಶ್ವಿಭೇ ಕುರ್ಯಾದ್ವಾಣಿಜ್ಯಂ ದಿವಸೇ ಶುಭೇ॥೬೨॥

ಅನೂರಾಧ,ಉತ್ತರಾತ್ರಯ,ಪುಷ್ಯ,ರೇವತೀ, ರೋಹಿಣೀ, ಮೃಗಶಿರ,ಹಸ್ತ, ಚಿತ್ರಾ, ಅಶ್ವಿನೀ ಈ ನಕ್ಷತ್ರಗಳಲ್ಲಿ ಶುಭವಾರ, ತಿಥಿಗಳಲ್ಲಿ ವ್ಯಾಪಾರವನ್ನು ಪ್ರಾರಂಭಿಸುವುದು ಒಳ್ಳೆಯದು.

## ಭಾವಿಕೆರೆಕಟ್ಟೆಬೋರುತೆಗೆಸಲು

ಅನುರಾಧಾಮಘಾಹಸ್ತೇ ರೇವತೀಷೂತ್ತರಾತ್ರಯೇ।
ರೋಹಿಣೀಯುಗಲೇ ಪುಷ್ಯೇ ಧನಿಷ್ಠಾದ್ವಿತಯೇ ತಥಾ॥೬೩॥
ಪೂರ್ವಾಷಾಢಾಭಿದೇ ಭೇಚ ಶುಭೇ ಮಾಸಿ ಶುಭೇ ದಿನೇ।
ವಾಪೀಕೂಪತಡಾಗಾನಾಮಾರಂಭಃ ಕಥಿತೋ ಬುಧೈಃ॥೬೪॥

ಅನುರಾಧಾ,ಮಘಾ,ಹಸ್ತ, ರೇವತೀ,ಉತ್ತರಾತ್ರಯ, ರೋಹಿಣೀ,ಮೃಗಶಿರ, ಪುಷ್ಯ,ಧನಿಷ್ಠಾ,ಶತಭಿಷ,ಪೂರ್ವಾಷಾಢಾ ನಕ್ಷತ್ರಗಳಲ್ಲಿ, ಶುಭಮಾಸ ಶುಭ ದಿವಸಗಳಲ್ಲಿ ಭಾವಿಕೆರೆಕಟ್ಟೆಬೋರುತೆಗೆಸಲು ಶುಭವೆಂದು ಜ್ಞಾನಿಗಳನು ಹೇಳುತ್ತಾರೆ.

## ಜಲಾಶಯಗಳಲ್ಲಿ ವಾರಫಲ

ರವಿವಾರೇ ಜಲಂನಾಸ್ತಿ ಸೋಮೇ ಪೂರ್ಣಜಲಂ ಭವೇತ್।
ವಾಲುಕಾ ಭೌಮವಾರೇತು ಬುಧೇ ಬಹುಜಲಂ ಭವೇತ್॥೬೫॥
ಗುರೌ ಚ ಮಧುರಂ ತೋಯಂ ಶುಕ್ರೇ ಕ್ಷಾರ ಪ್ರಜಾಯತೇ।
ಶನೈಶ್ಚರೇ ಜಲಂ ನಾಸ್ತಿ ಕೀರ್ತಿತಂ ವಾರಜಂ ಫಲಮ್॥೬೬॥

ಭಾನುವಾರ ಜಲವಿಲ್ಲ, ಸೋಮವಾರ ಪೂರ್ಣಜಲ, ಮಂಗಳವಾರ ಉಸುಕು, ಬುಧವಾರ ಬಹುಜಲ, ಗುರುವಾರ ಸಿಹಿನೀರು, ಶುಕ್ರವಾರ ಕ್ಷಾರಜಲ, ಶನಿವಾರ ಜಲವಿಲ್ಲ( ಆದರೆ ಮಂಗಳವಾರ ಬರೀಕಲ್ಲು, ಬುಧವಾರ ಬರೀ ಮಣ್ಣು,ಶುಕ್ರವಾರ ಶುದ್ಧವಾದ ಸಿಹಿನೀರು ಬೀಳುವದೆಂದು ಕೆಲವರ ಮತ ) ಭಾವಿಕೆರೆಕಟ್ಟೆಬೋರುತೆಗೆಸಲು ಜಲಫಲವನ್ನು ತಿಳಿಯಬೇಕು.

## ಜಲಚಕ್ರ

ಸಜಲಖಂಡಜಲೇ ಸಜಲಾಜಲೇ ಶುಭಜಲಂ ಲವಣಂ ಚ ಶಿಲಾಜಲಮ್।



ಲವಣಮುಷ್ಣಕರಾದ್ದಿನಭಾವಧಿ ನವ ಫಲಾನಿ ವಿದುಸ್ತ್ರಿತಯೋಡುಭಿಃ॥೬೭॥

ಸೂರ್ಯನಕ್ಷತ್ರದಿಂದ ನಿತ್ಯನಕ್ಷತ್ರವು ೩ ಆದರೆ ಸಜಲ, ನಂತರ ೩ ಖಂಡಜಲ, ನಂತರ ೩ ಸಜಲ, ನಂತರ ೩ ನಿರ್ಜಲ, ನಂತರ ೩ ಉತ್ತಮಜಲ, ನಂತರ ೩ ಕ್ಷಾರಜಲ, ನಂತರ ೩ ಕಹಿಜಲ, ನಂತರ ೩ ಉತ್ತಮಜಲ, ನಂತರ ೩ ಕ್ಷಾರಜಲವೆಂದು ತಿಳಿಯುವುದು.

ಅಶ್ವಿನ್ಯಾಂಚ ಧನಿಷ್ಠಾಯಾಂ ರೇವತ್ಯಾಂ ಕರಪಂಚಕೇ।
ಸುವರ್ಣರತ್ನದಂತಾದಿವಸ್ತ್ರಾಣಾಂ ಧಾರಣ ಸ್ತ್ರಿಯಃ॥೬೮॥

ಅಶ್ವಿನ್ಯೀ,ಧನಿಷ್ಠಾ,ರೇವತ್ಯೀ,ಹಸ್ತ,ಚಿತ್ರಾ,ಸ್ವಾತಿ,ವಿಶಾಖಾ,ಅನೂರಾಧಾ ಈ ನಕ್ಷತ್ರಗಳಲ್ಲಿ ಬಂಗಾರ,ರತ್ನ,ದಂತಾದಿ ಭೂಷಣಗಳನ್ನು ಮತ್ತು ನೂತನ ಉತ್ತಮ ವಸ್ತ್ರಾದಿ ಧಾರಣವನ್ನು ಮಾಡಲು ಸ್ತ್ರೀಯರಿಗೆ ಶುಭವಾಗುವುದು.

ಯಾವದ್ಭಾಸ್ಕರಭುಕ್ತಭಾನಿ ದಿವಸೇ ಧಿಷ್ಣ್ಯಾನಿ ಸಂಖ್ಯಾ ತಥಾ
ವಹ್ನಿರ್ಭೂತಗುಣಾಬ್ಧಿಸಪ್ತನಯನಂಪೃಥ್ವೀಕರೇಂದುಕ್ರಮಾತ್।
ಸೂರ್ಯಾರೌ ಕವಿಸೌಮ್ಯರಾಹುರವಿಜಾ ಜೀವಃಶಶೀ ಕೇತವಃ
ಕ್ರೂರೇಸಚ್ಛಶುಭೇಶುಭೇ ಚ ಕಥಿತಂ ಚಕ್ರೇ ಕರೇ ಭೂಷಣೇ ॥ ೬೯॥

ಸೂರ್ಯಲನಿರುವ ನಕ್ಷತ್ರದಿಂದ ೩,೫,೩,೪,೭,೨,೧,೨,೧ ಕ್ರಮವಾಗಿ ನಿತ್ಯನಿಕ್ಷತ್ರವಿದ್ದು ಅಲ್ಲಿ ಸೂರ್ಯ,ಕುಜ,ಶುಕ್ರ,ಬುಧ, ರಾಹು, ಶನಿ,ಗುರು, ಚಂದ್ರ, ಕೇತು ಈ ಗ್ರಹರ ಪೈಕಿ ಶುಭರು ಆ ದಿನನಕ್ಷತ್ರದಲ್ಲಿದ್ದರೆ ಶುಭ ಇದಕ್ಕೆ ಪ್ರತಿಯಾಗಿ ಪಾಪಗ್ರಹರಿದ್ದರೆ ಅಶುಭವೆಂದು ಜ್ಞಾನಿಗಳು ಚೂಡೀ ಚಕ್ರವೆಂದು ಹೇಳಿದ್ದಾರೆ.

ಚಿತ್ರಾಮೃಗಾಶ್ವಿ ವಿಧಿಕರ್ಣಸಮೈತ್ರಭೇಷು
ತಿಷ್ಯಾದಿತಿರ್ದಿನಕರೋರ್ಮವಿಶ್ವಭಂಸ್ಯಾತ್।
ಭೌಮಾರ್ಕಜೀವಭೃಗುವಾಸರಮಿಂದುಶುದ್ಧೇ
ಮಿಷ್ಟಾನ್ನಕರ್ಮ ಪ್ರವದಂತಿ ಮುನೀಂದ್ರಮುಖ್ಯಾಃ ॥೭೦॥
ತಥಾ– ಮೃಗಾದಿತೀಜ್ಯಕಾರ್ಯಭೇ ಕರಾಶ್ವಿನಮೈತ್ರತ್ವಾಷ್ಟ್ರೇ
ಬುಧೇಂದುಶೌರಿವರ್ಜಿತೇ ವಿಧೌ ಬಲಂ ಹಿ ಶಾಕುನೇ।
ರವಿರ್ಭತೋ ಗಸಾಯಕಾಗಜಾಶ್ವಿಬಾಣಭೇಂದುಭಂ
ಶುಭಾಶುಭಂ ಫಲಪ್ರದಂ ರಸೋದ್ಭವದಿಕಕ್ರಿಯೇ॥೭೧॥

ಚಿತ್ರಾ,ಮೃಗಶಿರಾ,ಅಶ್ವಿನಿ,ರೋಹಿಣಿ,ಶ್ರವಣ,ಅನೂರಾಧಾ,ಪುಷ್ಯಾ,ಪುನರ್ವಸು,ಹಸ್ತ, ಉತ್ತರಾತ್ರಯ ಈ ನಕ್ಷತ್ರಗಳಲ್ಲಿ ಮಂಗಳ,ರವಿ,ಗುರು,ಶುಕ್ರವಾರ ಚಂದ್ರನು ಶುದ್ಧನಾಗಿರಲು ಮೃಷ್ಟಾನ್ನಕರ್ಮ ಶುಭವೆಂದು ಮುನಿಗಳು ಹೇಳುತ್ತಾರೆ. ಅಥವಾ ಮೃಗಶಿರಾ,ಪುನರ್ವಸು,ಪುಷ್ಯಾ,

ರೋಹಿಣಿ,ಉತ್ತರಾ, ಹಸ್ತ, ಅಶ್ವಿನೀ, ಅನೂರಾಧಾ,ಚಿತ್ರಾ ಈ ನಕ್ಷತ್ರಗಳಲ್ಲಿ ಮತ್ತು ಬುಧ,ಚಂದ್ರ,ಶನಿವಾರಗಳನ್ನು ಬಿಟ್ಟು ಚಂದ್ರಬಲಿಷ್ಠನಾಗಿರಲು ಮೃಷ್ಟಾನ್ನಕ್ಕೆ ಶುಭವಾಗಿದೆ. ಸೂರ್ಯನಿರುವ ನಕ್ಷತ್ರದಿಂದ ೭ಶುಭ, ೫ಅಶುಭ, ೮ಶುಭ, ೨ಅಶುಭ, ೫ಶುಭ ನಿತ್ಯನಕ್ಷತ್ರವಿರಲು ಶುಭವೆಂದು ಮೃಷ್ಟಾನ್ನಚಕ್ರವನ್ನು ತಿಳಿಯಬೇಕು.

ಪ್ರಾಗೂರ್ಧ್ವಾ ದಶ ಪೂರ್ವತೋ ಷಡವನಿಸ್ತದ್ವತ್ಪುರಾಃ ಪೂರ್ವತ
ಸ್ತ್ರಿಂಶತ್ಷೋಡಶ ಪೂರ್ವತೋ ಚ ಪರತಃ ಪೂರ್ವಾಃ ಪರಾಃ ಸ್ಯುರ್ದಶ।
ಪೂರ್ವಾಃ ಷೋಡಶ ಚೋತ್ತರಾ ಋತು ಭವಃ ಪಶ್ಚಾತ್ತ್ವವೇದಾಸ್ತಥಾ
ಪೂರ್ವಾಃ ಷೋಡಶಚೋತ್ತರಾಃ ಪುನರಥೋ ಪುಷ್ಯಾಸ್ತು ಮೇಷಾದಿತಃ॥೭೨॥

ಮೇಷ ಸಂಕ್ರಾಂತಿಯಲ್ಲಿ ಪೂರ್ವದಲ್ಲಿ ೧೦ ಘಳಿಗೆ, ವೃಷಭ ದಲ್ಲಿ ಮೊದಲು ೧೬ಘಳಿಗೆ,ಮಿಥುನದ ನಂತರದ ೧೬ಘಳಿಗೆ, ಕರ್ಕದ ಮೊದಲ ೩೦ಘಳಿಗೆ, ಸಿಂಹದ ಮೊದಲ ೧೬ಘಳಿಗೆ, ಕನ್ಯಾದ ನಂತರದ ೧೬ಘಳಿಗೆ, ತುಲಾ ಎರಡೂ ಕಡೆಯ ಹತ್ತು–ಹತ್ತು ಘಳಿಗೆ,ವೃಶ್ಚಿಕದ ಮೊದಲ ೧೬ಘಳಿಗೆ, ಧನುವಿನ ನಂತರದ ೧೬ಘಳಿಗೆ, ಮಕರದ ನಂತರದ ೪೦ಘಳಿಗೆ, ಕುಂಭದ ಮೊದಲ ೧೬ಘಳಿಗೆ, ಮೀನದ ನಂತರದ ೧೬ಘಳಿಗೆ ಸಂಕ್ರಾಂತಿಯ ಪರ್ವಪುಣ್ಯಕಾಲವೆಂದು ತಿಳಿಯಬೇಕು.

ಸೂರ್ಯಾಸ್ತಮನವೇಲಾಯಾಂ ಮಕರಂ ಯಾತಿ ಭಾಸ್ಕರಃ।
ಪ್ರದೋಷೇ ಚಾರ್ಧರಾತ್ರೇವಾ ತದಾ ಪುಣ್ಯಂ ಪರೇಹನಿ॥ ೭೩॥
ಪುಣ್ಯಾ ಷೋಡಶ ನಾಡ್ಯಸ್ತು ಪರಾಃ ಪೂರ್ವಾಸ್ತು ಸಂಕ್ರಮಾತ್।
ತ್ರಿಂಶತ್ಕರ್ಕಟಗೇ ಪೂರ್ವಾಶ್ಚತ್ವಾರಿಂಶ ತ್ಪರಾ ಮೃಗೇ॥೭೪॥

ರವಿ ಅಸ್ತ ಸಮಯ, ಪ್ರದೋಷ ಮತ್ತು ಅರ್ಧರಾತ್ರಿಯ ನಂತರ ಸಂಕ್ರಾಂತಿಯ ಪ್ರವೇಶವಾದರೆ ಮರುದಿನ ಪರ್ವಕಾಲವಾಗುವುದು. ಈರೀತಿ ಪೂರ್ವಾಪರದಿನಗಳನ್ನು ನಿರ್ಣಯಿಸಿ ಅಚರಿಸಬೇಕು. ಆದರೆ ಕರ್ಕಸಂಕ್ರಾಂತಿಯ ಪೂರ್ವ ೩೦ ಘಳಿಗೆಗಳು,ಮಕರಸಂಕ್ರಾಂತಿಯ ನಂತರದ ೪೦ಘಳಗೆಗಳು ಪುಣ್ಯಕಾಲವೆಂದು ತಿಳಿಯಬೇಕು.

## ಯಾತ್ರೆಗೆ

ಹಸ್ತೇಂದುಮೈತ್ರಶ್ರವಣಾಶ್ವಿತಿಷ್ಯಪೌಷ್ಣಶ್ರವಿಷ್ಠಾಶ್ಚ ಪುನರ್ವಸುಶ್ಚ।
ಪ್ರೋಕ್ತಾನಿ ಧಿಷ್ಣ್ಯಾನಿ ನವಪ್ರಯಾಣೇ ತ್ಯಕ್ತ್ವಾ ತ್ರಿಪಂಚಾದಿಮಸಚ್ಚ ತಾರಾ॥೭೪॥

ಹಸ್ತಾ,ಮೃಗಶಿರ,ಅನೂರಾಧಾ,ಶ್ರವಣಾ,ಅಶ್ವಿನೀ,ಪುಷ್ಯ,ರೇವತೀ,ಧನಿಷ್ಠಾ,ಪುನರ್ವಸು ನಕ್ಷತ್ರಗಳು ಯಾತ್ರೆಗೆ ಶುಭವಾಗಿವೆ, ಆದರೆ ೧,೩,೫, ತಾರೆಗಳು ಅಶುಭ ವಾದ್ದರಿಂದ ಬಿಡಬೇಕು.

ನ ಷಷ್ಠೀ ಚ ದ್ವಾದಶೀ ನಾಷ್ಟಮೀ ನೋ ಸಿತಾದ್ಯಾ ತಿಥಿಃ ಪೂರ್ಣಿಮಾಮಾ ನರಿಕ್ತಾ।
ಹಯಾದಿತ್ಯಮತ್ರೇಂದುಜೋವೇನ್ತ್ಯಹಸ್ತಶ್ರವೋವಾಸವೈರೇವ ಯಾತ್ರಾ ಪ್ರಶಸ್ತಾ॥೭೫॥



ಷಷ್ಠೀ, ದ್ವಾದಶೀ,ಅಷ್ಟಮೀ,ಶುಕ್ಲಪಾಡ್ಯ,ಪೂರ್ಣಿಮಾ,ಅಮಾ ವಾಸ್ಯ, ರಿಕ್ತಾ (೪–೯–೧೪)ತಿಥಿಗಳು ಶುಭವಲ್ಲ ಹಸ್ತಾ,ಮೃಗಶಿರ,ಅನೂ ರಾಧಾ, ಶ್ರವಣಾ, ಅಶ್ವಿನೀ,ಪುಷ್ಯ,ರೇವತೀ,ಧನಿಷ್ಠಾ, ಪುನರ್ವಸು ನಕ್ಷತ್ರಗಳು ಯಾತ್ರೆಗೆ ಶುಭವಾಗಿವೆ.

ರೋಹಿಣೀ ಉತ್ತರಾ ಚಿತ್ರಾ ಮೂಲಮಾರ್ದ್ರಾ ತಥೈವ ಚ।
ಷಾಡೋತ್ತರಾಭಾದ್ರವಿಶ್ವೇ ಪ್ರಯಾಣೇ ಮಧ್ಯಮಾ ಸ್ಮೃತಾಃ॥೭೬॥

ರೋಹಿಣೀ,ಉತ್ತರಾ,ಚಿತ್ರಾ,ಮೂಲಾ,ಆರ್ದ್ರಾ,ಪೂರ್ವಾಷಾಡಾ, ಉತ್ತರಾ ಭಾದ್ರ, ಉತ್ತರಾಷಾಢಾ ನಕ್ಷತ್ರಗಳು ಪ್ರಯಾಣದಲ್ಲಿ ಮಧ್ಯಮ ಎಂದು ಹೇಳಲ್ಪಟ್ಟಿವೆ.

ಪೂರ್ವಾಸು ಷೋಡಶೈವಾದ್ಯಾಃ ಕೃತ್ತಿಕಾಸ್ವೇಕವಿಂಶತಿಃ।
ಮಘಾಸ್ವೇಕಾದಶ ತ್ಯಾಜ್ಯಾ ಭರಣ್ಯಾಃ ಸಪ್ತ ನಾಡಿಕಾಃ॥೭೭॥
ಸ್ವಾತ್ಯಾಶ್ಲೇಷಾವಿಶಾಖಾಸು ಜ್ಯೇಷ್ಠಾಯಾಶ್ಚ ಚತುರ್ದಶ।
ಯಾಯಾಸ್ಸಲಗ್ನಬಲೇ ಶೇಷನಾಡೀಷ್ವಾವಶ್ಯಕೇ ಸತಿ॥೭೮॥

ಅತ್ಯವಶ್ಯವಾಗಿ ಮುಂದಿನ ನಕ್ಷತ್ರಗಳಲ್ಲಿ ಪ್ರಯಾಣಮಾಡಬೇಕಾದ ಪ್ರಸಂಗಬಂದಾಗ ಪುಬ್ಬ ನಕ್ಷತ್ರದ ಮೊದಲ ೧೬ ಘಳಿಗೆ,ಕೃತ್ತಿಕಾದಲ್ಲಿ ೨೧ಘಳಿಗೆ, ಮಘಾದಲ್ಲಿ ೧೧ಘಳಿಗೆ,ಭರಣಿಯಲ್ಲಿ ೭ಘಳಿಗೆ,ಸ್ವಾತಿ,ವಿಶಾಖ, ಜ್ಯೇಷ್ಠಗಳಲ್ಲಿ ೧೪ಘಳಿಗೆ ಬಿಟ್ಟು ಉಳಿದಘಳಿಗೆಗಳಲ್ಲಿ ಪ್ರಯಾಣವು ಶುಭಕರ ಆದರೆ ಲಗ್ನಬಲಿಷ್ಠ ವಾಗಿರಬೇಕು.

## ದಿಕ್ಶೂಲ

ದಿಕ್ಶೂಲಂ ಪೂರ್ವದಿಗ್ಭಾಗೇ ಜ್ಯೇಷ್ಠಾಯಾಂ ಶನಿಸೋಮಯೋಃ।
ಪೂರ್ವಭಾದ್ರಪದೇ ಯಾಮ್ಯಾಂ ತಥೈವ ಗುರುವಾಸರೇ॥೭೯॥
ರವೌಶುಕ್ರೇ ಚ ರೋಹಿಣ್ಯಾಂ ಪಶ್ಚಿಮಾಯಾಂ ತ್ಯಜೇದ್ಬುಧಃ।
ಉದೀಚ್ಯಾಮುತ್ತರಾಫಾಲ್ಗುನ್ಯಭಿಧೇ ಮಂಗಲೇ ಬುಧೇ॥೮೦॥

ಜ್ಯೇಷ್ಠಾನಕ್ಷತ್ರ ಮತ್ತು ಶನಿ–ಸೋಮವಾರಗಳಲ್ಲಿ ಪೂರ್ವದಿಕ್ಕಿಗೂ, ಪೂರ್ವಾಭಾದ್ರನಕ್ಷತ್ರ ಮತ್ತು ಗುರುವಾರ ದಕ್ಷಿಣ ದಿಕ್ಕಿಗೂ, ರೋಹಿಣೀ ನಕ್ಷತ್ರ ಮತ್ತು ಭಾನು–ಶುಕ್ರವಾರಗಳಲ್ಲಿ ಪಶ್ಚಿಮದಿಕ್ಕಿಗೂ, ಉತ್ತರಾನಕ್ಷತ್ರ ಮತ್ತು ಮಂಗಳ–ಬುಧವಾರಗಳಲ್ಲಿ ಉತ್ತರದಿಕ್ಕಿಗೂ ಪ್ರಯಾಣ ಹೊರಡಬಾರದು.

## ವಿದಿಕ್ಶೂಲ

ಆಗ್ನೇಯ್ಯಾಂ ಚ ಗುರೌ ಚಂದ್ರೇ ನೈಋತ್ಯಾಂ ರವಿಶುಕ್ರಯೋಃ।
ಈಶ್ಯಾನ್ಯಾಂ ಚಂದ್ರಜೇ ವಾಯೌ ಮಂಗಲೇ ಗಮನಂ ತ್ಯಜೇತ್॥೮೧॥

ಗುರು–ಸೋಮವಾರಗಳಲ್ಲಿ ಆಗ್ನೇಯ ದಿಕ್ಕಿಗೂ,ಭಾನುಶುಕ್ರವಾರಗಳಲ್ಲಿ

ನೈಋತ್ಯದಿಕ್ಕಿಗೂ,ಬುಧವಾರ ಈಶಾನ್ಯದಿಕ್ಕಿಗೂ,ಮಂಗಳವಾರ ವಾಯುವ್ಯ ದಿಕ್ಕಿಗೂ ಪ್ರಯಾಣಹೊರಡಬಾರದು.

**ಕಾಲವಾಸ**

ಅರ್ಕೋತ್ತರೇ ವಾಯುದಿಶಾ ಚ ಸೋಮೇ ಭೌಮೇ ಪ್ರತೀಚ್ಯಾಂ ಬುಧನೈರ್‍ಋತೇ ಚ।

ಯಾಮ್ಯೇ ಗುರೋ ವಹ್ನಿದಿಶಾ ಚ ಶುಕ್ರೇ ಮಂದೇ ಚ ಪೂರ್ವೇ ಪ್ರವದಂತಿ ಕಾಲಮ್॥೮೨॥

ಭಾನು ಉತ್ತರ,ಸೋಮ ವಾಯುವ್ಯ, ಮಂಗಳ ಪಶ್ಚಿಮ, ಬುಧ ನೈರ್‍ಋತ್ಯ, ಗುರು ದಕ್ಷಿಣ,ಶುಕ್ರ ಆಗ್ನೇಯ, ಶನಿ ಪೂರ್ವ ಈ ರೀತಿ ಕಾಲವಾಸವನ್ನು ತಿಳಿಯ ಬೇಕು,ಪೂರ್ವಾಚಾರ್ಯರು ಈ ಕಾಲವಾಸದ ದಿಕ್ಕನ್ನು ಪ್ರಯಾಣಕ್ಕೆ ನಿಷೇಧಮಾಡಿದ್ದಾರೆ.

**ನಕ್ಷತ್ರವಾರಾದ್ಯನುಸಾರದಿಕ್ಶೂಲ**

ಮೂಲಶ್ರವಣಶಾಕ್ರೇಷು ಪ್ರತಿಪನ್ನವಮೀಷು ಚ ।

ಶನೌಸೋಮೇಬುಧೇ ಚೈವ ಪೂರ್ವಸ್ಯಾಂ ಗಮನಂ ತ್ಯಜೇತ್॥ ೮೩॥

ಮೂಲ,ಶ್ರವಣ,ಜ್ಯೇಷ್ಠ ನಕ್ಷತ್ರ ಪಾಡ್ಯ, ನವಮೀ ತಿಥಿ. ಶನಿ–ಸೋಮ ಮತ್ತು ಬುಧವಾರ ಪೂರ್ವದಿಕ್ಕಿನ ಪ್ರಯಾಣ ಬಿಡಬೇಕು.

ಪೂರ್ವಾಭಾದ್ರಪದಾಶ್ವಿನ್ಯೌ ಪಂಚಮೀ ಚ ತ್ರಯೋದಶೀಮ್।

ಗುರು ಧನಿಷ್ಠಾರ್ದ್ರಾ ಚೈವ ಯಾಮ್ಯೇ ಸಪ್ತವಿವರ್ಜಯೇತ್॥೮೪॥

ಪೂರ್ವಾಭಾದ್ರ,ಅಶ್ವಿನೀ,ಧನಿಷ್ಠಾ, ಆರ್ದ್ರಾ, ಪಂಚಮೀ, ತ್ರಯೋದಶೀ, ಗುರುವಾರ ಈ ೭ ರಲ್ಲಿ ದಕ್ಷಿಣದಿಕ್ಕಿನ ಪ್ರಯಾಣ ಬಿಡಬೇಕು.

ರೋಹಿಣ್ಯಾಂ ಚ ತಥಾ ಪುಷ್ಯೇ ಷಷ್ಠೀ ಚೈವ ಚತುರ್ದಶೀ।

ಭೌಮಾರ್ಕಗುರುವಾರೇಷು ನ ಗಚ್ಛೇತ್ಪಶ್ಚಿಮಾಂ ದಿಶಮ್॥೮೫॥

ರೋಹಿಣೀ,ಪುಷ್ಯೇ, ಷಷ್ಠೀ,ಚತುರ್ದಶೀ,ಮಂಗಳ,ಭಾನು,ಗುರುವಾರಗಳಲ್ಲಿ ಪಶ್ಚಿಮದಿಕ್ಕಿನ ಪ್ರಯಾಣ ಬಿಡಬೇಕು.

ಕರೇ ಚೋತ್ತರಫಲ್ಗುನ್ಯಾಂ ದ್ವಿತೀಯಾ ದಶಮೀ ತಥಾ।

ಬುಧೇ ರವೌ ಭೌಮವಾರೇ ನ ಗಚ್ಛೇದುತ್ತರಾಂ ದಿಶಮ್॥೮೬॥

ಹಸ್ತ,ಉತ್ತರಾ, ದ್ವಿತೀಯಾ,ದಶಮೀ,ಬುಧ,ಭಾನು,ಮಂಗಳವಾರಗಳಲ್ಲಿ ಉತ್ತರದಿಕ್ಕಿನ ಪ್ರಯಾಣ ಬಿಡಬೇಕು.

**ಶೂಲದೋಷನಿವಾರಣೋಪಾಯ**

ಸೂರ್ಯವಾರೇ ಘೃತಂ ಪೀತ್ವಾ ಗಚ್ಛೇತ್ಸೋಮೇ ಪಯಸ್ತಥಾ।

ಗುಡಮಂಗಾರಕೇ ಚೈವ ಬುಧವಾರೇ ತಿಲಾನಪಿ॥೮೭॥



ಗುರುವಾರೇ ದಧಿ ಜ್ಞೇಯಂ ಶುಕ್ರವಾರೇ ಯವಾನಪಿ।

ಮಾಷಾನ್ ಭುಕ್ತ್ವಾ ಶನೇರ್ವಾರೇ ಶೂಲದೋಷೋಪಶಾಂತಯೇ॥೮೮॥

ಭಾನುವಾರ ತುಪ್ಪ ಕುಡಿದು,ಸೋಮವಾರ ಹಾಲು,ಮಂಗಳವಾರ ಬೆಲ್ಲ, ಬುಧವಾರ ಎಳ್ಳು, ಗುರುವಾರ ಮೊಸರು,ಶುಕ್ರವಾರ ಯವ(ಬಾರ್ಲಿ) ,ಶನಿವಾರ ಉದ್ದನ್ನು ತಿಂದು ಪ್ರಯಾಣ ಹೊರಟರೆ ಶೂಲದೋಷ ಪರಿಹಾರವಾಗುವುದು.

**ಕಾಲರಾಹುವಿಚಾರ**

ರವಿದಿನಗುರುಪೂರ್ವೇ ಸೋಮಶುಕ್ರೇ ಚ ಯಾಮ್ಯೇ

ವರುಣದಿಶಿ ತು ಭೌಮೇ ಚೋತ್ತರೇ ಸೌರಿಸಂಸ್ಥೇ।

ಪ್ರತಿದಿನ ಮಿತಿ ಮತ್ವಾ ಕಾಲರಾಹುರ್ದಿಶಾನಾಂ

ಸಕಲಗಮನಕಾರ್ಯೇ ವಾಮಪೃಷ್ಠೇ ಚ ಸಿದ್ಧಿಃ॥೮೯॥

ಭಾನು,ಗುರು–ಪೂರ್ವ.ಸೋಮ–ಶುಕ್ರ ದಕ್ಷಿಣ, ಮಂಗಳವಾರ ಪಶ್ಚಿಮ, ಶನಿವಾರ ಉತ್ತರ ಈ ರೀತಿ ದಿಕ್ಕುಗಳಲ್ಲಿ ವಾಮಪೃಷ್ಠಗಳಲ್ಲಿಕಾಲ ರಾಹು ಇರುತ್ತಾನೆ ಯಾತ್ರೆ ಮಾಡುವದರಿಂದ ಕಾರ್ಯಸಿದ್ಧಿಯಾಗುತ್ತದೆ.

**ಕ್ಷುಧಿತರಾಹು**

ಇಂದ್ರೇ ವಾಯೌ ಯಮೇ ರುದ್ರೇ ತೋಯೇಗ್ನೌ ಶಶಿರಾಕ್ಷಸೋಃ।

ಯಾಮಾರ್ಧಕ್ಷುಧಿತೋ ರಾಹುರ್ಭ್ರಮಯತ್ಯೇವ ದಿಗಷ್ಟಕೇ॥೯೦॥

ನ ತಿಥಿರ್ನಚ ನಕ್ಷತ್ರಂ ನ ಯೋಗೋ ನ ಚ ಚಂದ್ರಮಾಃ।

ಸಿದ್ಧ್ಯಂತಿ ಸರ್ವಕಾರ್ಯಾಣಿ ಯಾತ್ರಾಯಾಂ ದಕ್ಷಿಣೇ ರವೌ॥೯೧॥

ಮೊದಲ ಯಾಮಾರ್ಧದಲ್ಲಿ ಪೂರ್ವ, ದ್ವಿತೀಯಯಾಮಾರ್ಧ ವಾಯುವ್ಯ, ತೃತೀಯ ಯಾಮಾರ್ಧ ದಕ್ಷಿಣ,ನಾಲ್ಕನೇ ಯಾಮಾರ್ಧ ಈಶಾನ್ಯ, ಐದನೇ ಯಾಮಾರ್ಧ ಪಶ್ಚಿಮ, ಆರನೇ ಯಾಮಾರ್ಧ ಆಗ್ನೇಯ, ಏಳನೇ ಯಾಮಾರ್ಧ ಉತ್ತರ, ಎಂಟನೇ ಯಾಮಾರ್ಧ ನೈರ್‍ಋತ್ಯ, ದಿಕ್ಕುಗಳಲ್ಲಿ ಕ್ಷುಧಿತರಾಹು ಸಂಚರಿಸುತ್ತಾ ಇರುವನು. ತಿಥಿಬೇಡ,ನಕ್ಷತ್ರಬೇಡ,ಯೋಗಬೇಡ, ಚಂದ್ರವಿಚಾರ ಬೇಡ ರವಿಯನ್ನು ದಕ್ಷಿಣಕ್ಕೆ ಮಾಡಿಕೊಂಡು ಹೊರಟರೆ ಸಕಲವೂ ಸಿದ್ಧಿಸುತ್ತವೆ.

**ನಾಡಿಶಕುನ**

ಗುರೌ ಶನೌ ರವೌ ಭೌಮೇ ಶುಭೋ ವೈ ದಕ್ಷಿಣಃ ಸ್ವರಃ।

ನಿರ್ಗಮೇ ವಾಮತಃ ಶ್ರೇಷ್ಠಃ ಪ್ರವೇಶೇ ದಕ್ಷಿಣಃ ಶುಭಃ।

ಯಃ ಸ್ವರಃ ಸ ಚ ನಾಸಾಗ್ರೇ ಯೋಗಿನಾಂ ಮತಮೀದೃಶಮ್॥೯೨॥

ಗುರು,ಶನಿ,ಭಾನು,ಮಂಗಳವಾರಗಳಲ್ಲಿ ಬಲನಾಡಿಯು ಶುಭವಾಗಿದೆ, ಉಳಿದವಾರಗಳಲ್ಲಿ

ಎಡನಾಡಿಯು ಶುಭವಾಗಿದೆ. ಪ್ರಯಾಣಿಸುವಾಗ ಎಡನಾಡಿ ಪ್ರವೇಶದಲ್ಲಿ ಬಲನಾಡಿ ಶುಭವಾಗಿದೆ. ಆದರೆ ಪ್ರಯಾಣಮಾಡುವಾಗ ಬಲಮೂಗಿನಿಂದ ವಾಯುವು ಶುಭಕೊಡುತ್ತದೆಂದು ನಮ್ಮ ಅನುಭವ.

**ಕಾಲಬಲ**

ಪೂರ್ವಾಹ್ನೇ ಚೋತ್ತರಾಂ ಗಚ್ಛೇತ್ಪ್ರಾಚ್ಯಾಂ ಮಧ್ಯಾಹ್ನಕೇ ತಥಾ।
ದಕ್ಷಿಣೇ ಚಾಪರಾಹ್ನೇ ತು ಪಶ್ಚಿಮೇತ್ವರ್ಧರಾತ್ರಕೇ॥೯೪॥

ಪೂರ್ವಾಹ್ನದಲ್ಲಿ ಉತ್ತರದಿಕ್ಕಿಗೂ,ಮಧ್ಯಾಹ್ನದಲ್ಲಿ ಪೂರ್ವದಿಕ್ಕಿಗೂ, ಅಪರಾಹ್ನದಲ್ಲಿ ದಕ್ಷಿಣಕ್ಕೂ, ಅರ್ಧರಾತ್ರಿಯಲ್ಲಿ ಪಶ್ಚಿಮಕ್ಕೂ ಪ್ರವಾಸ ಹೊರಡುವುದು ಶುಭ.

**ಚಂದ್ರವಾಸದಿಕ್ಕು**

ಮೇಷೇ ಚ ಸಿಂಹೇ ಧನುಪೂರ್ವಭಾಗೇ ವೃಷೇಚ ಕನ್ಯಾ ಮಕರೇ ಚ ಯಾಮ್ಯೇ।
ತುಲಾಸು ಕುಂಭೇ ಮಿಥುನೇ ಪ್ರತೀಚ್ಯಾಂ ಕರ್ಕಾಲಿಮೀನೇ ದಿಶಿ ಚೋತ್ತರಸ್ಯಾಮ್॥೯೫॥

ಮೇಷ–ಸಿಂಹ–ಧನುಸ್ಸು ಪೂರ್ವಭಾಗ. ವೃಷಭ–ಕನ್ಯಾ–ಮಕರ ದಕ್ಷಿಣ. ತುಲಾ–ಕುಂಭ–ಮಿಥುನ ಪಶ್ಚಿಮ. ಕರ್ಕ–ವೃಶ್ಚಿಕ–ಮೀನ ಉತ್ತರ ಈ ರೀತಿ ಚಂದ್ರನ ವಾಸವನ್ನು ತಿಳಿಯಬೇಕು.

ಸಮ್ಮುಖಶ್ಚಾರ್ಥಲಾಭಾಯ ದಕ್ಷಿಣೇ ಸುಖಸಂಪದಃ।
ಪೃಷ್ಠೇ ಚ ಪ್ರಾಣನಾಶಾಯ ವಾಮೇಚಂದ್ರೇ ಧನಕ್ಷಯಃ ॥೯೬॥

ದಿಕ್ಕಿಗೆ ಅನುಗುಣವಾಗಿ ಸಮ್ಮುಖಚಂದ್ರನಲ್ಲಿ ಪ್ರವಾಸಹೊರಟರೆ ಅರ್ಥಲಾಭ, ಬಲಭಾಗದಲ್ಲಿ ಬಂದರೆ ಸುಖ ಮತ್ತು ಸಂಪತ್ತು ಹೆಚ್ಚುವುದು, ಹಿಂದೆ ಆದರೆ ಪ್ರಾಣನಷ್ಟ, ಎಡಗಡೆ ಬಂದರೆ ಧನಕ್ಷಯವಾಗುವುದು.

ಕರಣಭಗಣದೋಷಂ ವಾರಸಂಕ್ರಾಂತಿದೋಷಂ
ಕುತಿಥಿಕುಲಿಕದೋಷಂ ವಾಮಯಾಮಾರ್ಧದೋಷಮ್।
ಕುಜಶನಿರವಿದೋಷಂ ರಾಹುಕೇತ್ವಾದಿದೋಷಂ
ಹರತಿ ಸಕಲದೋಷಂ ಚಂದ್ರಮಾಃ ಸಮ್ಮುಖಸ್ಥಃ॥೯೭॥

ಕರಣ,ನಕ್ಷತ್ರ,ವಾರ, ಸಂಕ್ರಾಂತಿ,ತಿಥಿ,ಕುಲಿಕ,ವಾಸಯಾಮಾರ್ಧ ಕುಜ,ಶನಿ, ರವಿ, ರಾಹು ಕೇತು ಆದಿ ಎಲ್ಲ ದೋಷಗಳನ್ನು ಸಮ್ಮುಖಚಂದ್ರನು ನಾಶ ಮಾಡುವನು.

ಪ್ರತಿಪನ್ನವಮೀ ಪೂರ್ವೇ ದ್ವಿತೀಯಾದಶ ಚೋತ್ತರೇ।
ತೃತೀಯೈಕಾದಶೀ ವಹ್ನೌ ಚತುರ್ದ್ವಾದಶಿ ನೈಋತೇ॥೯೮॥
ಪಂಚತ್ರಯೋದಶೀ ಯಾಮ್ಯೇ ಷಷ್ಠೀ ಭೂತೇ ಚ ಪಶ್ಚಿಮೇ।
ಸಪ್ತಪೂರ್ಣಾಸು ವಾಯವ್ಯೇ ಅಮಾವಾಸ್ಯಾಷ್ಟಮೀ ಶಿವೇ॥೯೯॥

ಪ್ರತಿಪತ್–ನವಮೀ ಪೂರ್ವ, ದ್ವಿತೀಯಾ–ದಶಮೀ ಉತ್ತರಾ, ತೃತೀಯಾ–ಏಕಾದಶೀ ಆಗ್ನೇಯ,



ಚತುರ್ಥೀ–ದ್ವಾದಶಿ ನೈರ್ಋತ್ಯ, ಪಂಚಮೀ–ತ್ರಯೋ ದಶೀ ದಕ್ಷಿಣ, ಷಷ್ಠೀ–ಚತುರ್ದಶೀ ಪಶ್ಚಿಮ, ಸಪ್ತಮೀ–ಪೂರ್ಣಿಮಾ ವಾಯ ವ್ಯ, ಅಮಾವಾಸ್ಯಾ–ಅಷ್ಟಮೀ ಈಶಾನ್ಯದಲ್ಲಿ ಯೋಗಿನಿಯ ವಾಸವಿರುವುದು.

ಪೃಷ್ಠೇ ಚ ಶಿವದಾ ಪ್ರೋಕ್ತಾ ವಾಮೇ ಚೈವ ವಿಶೇಷತಃ।
ಯೋಗಿನೀ ಸಾ ಭವೇನ್ನಿತ್ಯಂ ಪ್ರಯಾಣೇ ಶುಭದಾ ಭವೇತ್॥೧೦೦॥

ಹಿಂದಿರುವ ಯೋಗಿನಿಯು ಶುಭವೆಂದು ತಿಳಿಯಬೇಕು. ಅಂದರೆ ಬೆನ್ನ ಹಿಂದಿರುವ ಮತ್ತು ಎಡಗಡೆ ಇರುವ ಯೋಗಿನಿಯು ಶುಭಫಲ ವನ್ನುಂಟು ಮಾಡುತ್ತದೆ.

ಚರಲಗ್ನೇ ಪ್ರಯಾತವ್ಯಂ ದ್ವಿಸ್ವಭಾವೇ ತಥಾ ನರೈಃ।
ಲಗ್ನೇ ಸ್ಥಿರೇ ನ ಗಂತವ್ಯಂ ಯಾತ್ರಾಯಾಂ ಕ್ಷೇಮಮೀಪ್ಸುಭಿಃ॥೧೦೧॥

ಚರಗಳಾದ ಮೇಷ–ಕರ್ಕ–ತುಲಾ–ಮಕರಲಗ್ನಗಳು ಮತ್ತು ದ್ವಿಸ್ವಭಾವಗಳಾದ ಮಿಥುನ–ಕನ್ಯಾ–ಧನು–ಮೀನಲಗ್ನಗಳು ಕ್ಷೇಮವನ್ನು ಇಚ್ಛಿಸುವವನು ಪ್ರಯಾಣಾರಂಭಮಾಡುವುದು ಒಳ್ಳೆಯದು. ಸ್ಥಿರಗಳಾದ ವೃಷಭ–ಸಿಂಹ–ವೃಶ್ಚಿಕ–ಕುಂಭಲಗ್ನಗಳಲ್ಲಿ ಎಂದೂಪ್ರಯಾಣಮಾಡುವುದು ಒಳ್ಳೆಯದಲ್ಲ.

ತ್ರ್ಯಹಂ ಕ್ಷೀರಂ ಚ ಪಂಚಾಹಂ ಕ್ಷೌರಂ ಸಪ್ತದಿನಂ ರತಮ್।
ವರ್ಜ್ಯಂ ಯಾತ್ರಾದಿನಾತ್ಪೂರ್ವಮಶಕ್ತೌ ತದ್ದಿನೇ ರತಮ್॥೧೦೨॥
ಯಜ್ಞೋಪವೀತಕಂ ಶಸ್ತ್ರಂ ಮಧು ಚ ಸ್ಥಾಪಯೇತ್ಫಲಮ್।
ವಿಪ್ರಾದಿಕ್ರಮತಃ ಸರ್ವಂ ಸ್ವರ್ಣಧಾನ್ಯಾಂಬರಾದಿಕಮ್॥೧೦೩॥
ರಾಜಾ ದಶಾಹಂ ಪಂಚಾಹಮನ್ಯೋ ನ ಪ್ರಸ್ಥಿತೋ ವಸೇತ್।
ಅಂಗಪ್ರಸ್ಥಾನ ಸಂಪೂರ್ಣಂ ವಸ್ತುಪ್ರಸ್ಥಾನಕೇರ್ಧಕಮ್॥೧೦೨॥

ಯಾತ್ರೆಗೆ ಹೊರಡುವ ಮೂರುದಿನಮುಂಚಿನಿಂದ ಪ್ರಯಾಣಿಸುವವನು ಹಾಲುಕುಡಿಯ ಬಾರದು. ಏಳುದಿನ ಮುಂಚಿನಿಂದ ಸ್ತ್ರೀಸಂಗ ಮಾಡಬಾರದು. ಇದು ಕಷ್ಟವಾದರೆ ಹಿಂದಿನದಿನದಲ್ಲಾದರೂ ಸ್ತ್ರೀಸಂಗಬಿಡಬೇಕು. ಬ್ರಾಹ್ಮಣ ಯಜ್ಞೋಪವೀತ, ಕ್ಷತ್ರಿಯ ಶಸ್ತ್ರ, ವೈಶ್ಯ ಜೇನುತುಪ್ಪ, ಶೂದ್ರ ಫಲದ ಪ್ರಸ್ಥಾನ ಇಡಬೇಕು ಮತ್ತು ಸುವರ್ಣ,ಅನ್ನ, ವಸ್ತ್ರಾದಿಗಳು ಪ್ರಸ್ಥಾನಕ್ಕೆ ಎಲ್ಲರಿಗೂ ಹಿತಕಾರಿ ಯಾಗಿವೆ. ರಾಜನು ಹತ್ತುದಿನ ಮುಂಚೆ ಪ್ರಸ್ಥಾನ ಇಡಬಹುದು. ಇತರೆಯವರು ಐದುದಿನ ಮುಂಚಿನಿಂದ ಪ್ರಸ್ಥಾನ ಇಡಬಹುದು. ಇಲ್ಲಿ ತಾನೇ ಅಂದರೆ ಅಂಗಪ್ರಸ್ಥಾನವು ಪೂರ್ಣಫಲಕಾರಿ ಯಾಗಿದೆ, ಆದರೆ ವಸ್ತು ಪ್ರಸ್ಥಾನವು ಅರ್ಧಫಲಕಾರಿಎಂದು ತಿಳಿಯಬೇಕು.

ಇತಿ ಶ್ರೀಕೃಷ್ಣಾರ್ಯಪುತ್ರೇಣ ಜ್ಯೋತಿರ್ವಿದುಷಾವಿಜಯವಿಠಲಾಚಾರ್ಯೇಣ ವಿಲಿಖಿತೇ
ಸಮಗ್ರಜ್ಯೋತಿಷ್ಯ ಪಾರಿಜಾತೇತೃತೀಯಾಧ್ಯಾಯಃ ಸಂಪೂರ್ಣಮ್॥

# ಚತುರ್ಥಾಧ್ಯಾಯ

## ಷೋಡಶಕರ್ಮ ಸಂಗ್ರಹ

## ಪ್ರಥಮರಜಸ್ವಲೆಯ ಸ್ನಾನವಿಚಾರ

ಪುನರ್ವಸುಸ್ತಥಾ ಚಿತ್ರಾಜ್ಯೇಷ್ಠಾಪುಷ್ಯಾಭಿಧೇಷು ಚ।
ಸ್ನಾಯಾದೃತುಮತೀ ನಾರೀ ಶುಭೇ ವಾರೇ ಶುಭೇ ತಿಥೌ॥೧॥
ರೋಹಿಣೀದ್ವಿತಯೇ ಸ್ವಾತೌ ಹಸ್ತೇ ವೈ ರೇವತೀದ್ವಯೇ।
ಸ್ನಾನಾತ್ತು ಯುವತ ಗರ್ಭೇ ವಿಧತ್ತೇ ಶೀಘ್ರಮೇವ ಹಿ॥೨॥

ಪುನರ್ವಸು,ಚಿತ್ರಾ,ಜ್ಯೇಷ್ಠಾ,ಪುಷ್ಯಾನಕ್ಷತ್ರಗಳಲ್ಲಿ,ಶುಭವಾರ,ಶುಭತಿಥಿಗಳಲ್ಲಿ ಪ್ರಥಮರಜಸ್ವಲೆಯು ಸ್ನಾನಮಾಡಬೇಕು. ಮತ್ತು ರೋಹಿಣೀ,ಮೃಗಶಿರ, ಸ್ವಾತೀ,ಹಸ್ತಾ, ರೇವತೀ,ಅಶ್ವಿನಿ ಪ್ರಥಮರಜಸ್ವಲೆಯು ಸ್ನಾನಮಾಡಿದರೆ ಶೀಘ್ರವೇ ಗರ್ಭಧರಿಸುವಳು.

ಸ್ವಾತೌ ಹಸ್ತೇನುರಾಧಾಯಾಂ ರೋಹಿಣ್ಯಾಂ ಶ್ರವಣಾ ತ್ರಯೇ।
ತ್ರ್ಯುತ್ತರೇ ಮೃಗಶೀರ್ಷೇಚ ಶುಭಾಹೇ ಶುಭರಾಶಿಷು॥
ಗರ್ಭಾದಾನಂ ಪ್ರಶಸ್ತಂ ಸ್ಯಾ ಚ್ಚಂದ್ರೇ ಶಸ್ತೇ ಪುಮಾಂಸಕೇ॥೩॥

ಸ್ವಾತೀ,ಹಸ್ತಾ,ಅನುರಾಧಾ,ರೋಹಿಣ್ಯೇ,ಶ್ರವಣಾ,ಧನಿಷ್ಠಾ,ಶತಭಿಷ,ಮೃಗಶಿರ, ಉತ್ತರಾತ್ರಯಗಳಲ್ಲಿ,ಶುಭದಿನ,ಶುಭಲಗ್ನಗಳಲ್ಲಿ ಗರ್ಭದಾನವು ಪ್ರಶಸ್ತ ವಾಗಿದೆ, ಇಲ್ಲಿ ಪುಂನವಾಂಶದಲ್ಲಿ ಚಂದ್ರನಿರುವುದು ಶ್ರೇಷ್ಠಕರವೆಂದು ತಿಳಿಯಬೇಕು.

ದ್ವಿತೀಯೇವಾ ತೃತೀಯೇ ವಾ ಮಾಸಿ ಪುಂಸವನಂ ಸ್ಮೃತಮ್।
ಮಾಸಿ ಷಷ್ಠೇಷ್ಟಮೇವಾಪಿ ಗರ್ಭಸೀಮಂತಕಂ ವಿದುಃ॥೪॥
ಪುನರ್ವಸುದ್ವಯೇ ಮೂಲೇ ಶ್ರವಣೇ ಮೃಗಹಸ್ತಯೋಃ।
ಗುರುಭೌಮಾರ್ಕವಾರೇಷು ಪ್ರೋಕ್ತಂ ಪುಂಸವನಾದಿಕಮ್॥
ರೇವತ್ಯಾಂತ್ರ್ಯುತ್ತರೇಪ್ಯೇಕೇ ಶುಕ್ರೇ ಚಂದ್ರೇ ಬುಧೇ ಜಗುಃ॥೫॥

ಸ್ತ್ರೀಯು ಗರ್ಭಧರಿಸಿದ ಎರಡು ಅಥವಾ ಮೂರನೇತಿಂಗಳಲ್ಲಿ ಪುಂಸವನ ಮತ್ತು ಆರು ಅಥವಾ ಎಂಟನೇ ತಿಂಗಳಲ್ಲಿ ಸೀಮಂತಮಾಡಬೇಕು. ಪುನರ್ವಸು, ಪುಷ್ಯ,ಮೂಲಾ, ಶ್ರವಣಾ, ಮೃಗಶಿರ, ಹಸ್ತಗಳಲ್ಲಿ ಗುರು, ಮಂಗಳ,ಭಾನುವಾರಗಳಲ್ಲಿ ಪುಂಸವನಾದಿಕಗಳನ್ನು ಮಾಡಬೇಕು॥ ಕೆಲವರು ರೇವತೀ, ಉತ್ತರಾತ್ರಯಗಳಲ್ಲೂ, ಶುಕ್ರ– ಸೋಮ–ಬುಧವಾರಗಳಲ್ಲಿಯೂ ಶುಭವೆಂದು ಹೇಳುತ್ತಾರೆ.

ವಿವಾಹೇ ಗರ್ಭಸಂಸ್ಕಾರೇ ಚಂದ್ರಶುದ್ಧಿಃ ಸ್ತ್ರಿಯಾ ಅಪಿ।



ಭೂಷಾಂಬರಾದಿ ಕಾರ್ಯೇಷು ಭರ್ತುರವ್ಯೆಂದವಂ ಬಲಮ್॥೬॥

ವಿವಾಹ,ಗರ್ಭಸಂಸ್ಕಾರ(ಪುಂಸವನ–ಸೀಮಂತಾದಿಗಳು)ಗಳಲ್ಲಿ ಸ್ತ್ರೀಯರಿಗೆ, ಆಭೂಷಣ–ವಸ್ತ್ರಾದಿಧಾರಣಗಳಲ್ಲಿ ಪುರುಷರಿಗೆ ಚಂದ್ರಬಲವನ್ನು ನೋಡಬೇಕು.

ಗರ್ಭದಾನಾದಿಸಂಸ್ಕಾರೇ ತಥಾನ್ನಪ್ರಾಶನೇ ಶಿಶೋಃ।
ನ ತತ್ರ ಗುರುಶುಕ್ರಾಸ್ತಮನ್ನಗ್ರಾಸಾದಿ ದೂಷಣಮ್॥೭॥

ಗರ್ಭದಾನಾದಿಸಂಸ್ಕಾರಗಳಲ್ಲಿ ಮತ್ತು ಶಿಶುವಿಗೆ ಅನ್ನಪ್ರಾಶನ ಮಾಡವಾಗಲೂ ಮತ್ತು ನವಾನ್ನ ಭಕ್ಷಣಾದಿಗಳಲ್ಲೂ ಗುರುಶುಕ್ರಾಸ್ತಾದಿಗಳು ದೋಷಕಾರಿಗಳಲ್ಲ.

## ಮೂಲಾದಿಗಂಡಾಂತವಿಚಾರ

ಅಶ್ವಿನೀಮಘಮೂಲಾದೌ ತ್ರಿವೇದನವನಾಡಿಕಾಃ।
ರೇವತೀ ಸರ್ಪಶಕ್ರಾಂತೇ ಮಾಸರುದ್ರರಸಸ್ತಥಾ॥೮॥
ಆದ್ಯೇ ಪಾದೇ ಪಿತುರ್ಹಂತಿ ದ್ವಿತೀಯೇ ಜನನೀ ತಥಾ।
ತೃತೀಯೇ ಚ ಧನಂ ಹಂತಿ ಚತುರ್ಥೇ ಶುಭಮೇವ ಹಿ ॥೯॥

ಅಶ್ವಿನೀ ಆದಿಯ ಮೂರುಘಳಗೆ,ಮಘಾ ಆದಿಯ ನಾಲ್ಕುಘಳಿಗೆ,ಮೂಲಾ ಆದಿಯ ಒಂಬತ್ತುಘಳಿಗೆ, ರೇವತೀ ಕೊನೆಯ ಹನ್ನೆರಡು ಘಳಿಗೆ ಆಶ್ಲೇಷಾದ ಕೊನೆಯ ಹನ್ನೊಂದು ಘಳಿಗೆ ಜ್ಯೇಷ್ಠಾದ ಕೊನೆಯ ಆರು ಘಳಿಗೆ ಗಂಡಾಂತವೆಂದು ಹೇಳಲ್ಪಟ್ಟಿದೆ. ಈ ಗಂಡಾಂತಸಮಯಗಳಲ್ಲಿ ಹುಟ್ಟಿದ ಶಿಶುವಿನ ಮುಖವನ್ನು ತಂದೆಯಾದವನು ಶಾಂತಿ ಆಗುವವರೆಗೆ ನೋಡಬಾರದು. ಒಂದುವೇಳೆ ನೋಡಿದ್ದೇ ಆದರೆ ಮೇಲೆ ಹೇಳಿದಂತೆ ಅರಿಷ್ಟ ಉಂಟಾಗುವುದು. ಮೂಲಾದ ಮೊದಲಪಾದದಲ್ಲಿ ಶಿಶುಜನಿಸಿದರೆ ತಂದೆಗೆ ಅರಿಷ್ಟ, ದ್ವಿತೀಯದಲ್ಲಿ ತಾಯಿಗೆ, ತೃತೀಯದಲ್ಲಿ ಧನನಾಶ, ಚತುರ್ಥ ಪಾದದಲ್ಲಿ ಜನಿಸಿದರೆ ಶುಭವಾಗುವುದು. ಮೂಲನಕ್ಷತ್ರ ವಿಪರೀತವಾಗ ಅಶ್ಲೇಷಾ ನಕ್ಷತ್ರಕ್ಕೆ ಫಲಗಳನ್ನು ತಿಳಿಯಬೇಕು.

## ಪ್ರಸವವಾದಸ್ತ್ರೀಯಸ್ನಾನಕ್ಕೆ

ಪುನರ್ವಸು ದ್ವಯಂ ಚಿತ್ರಾ ವಿಶಾಖಾ ಭರಣೀದ್ವಯಮ್।
ಮೂಲಮಾರ್ದ್ರಾ ಮಘಾ ಹೇಯಾ ಶ್ರವಣೋ ದಶಮಸ್ತಥಾ॥೧೦॥
ಸೋಮಶುಕ್ರಬುಧಾ ನಾರಿ ಪ್ರಸೂತಿಸ್ನಾನ ಕರ್ಮಣಿ।
ಹೇಯಾ ಚ ಪ್ರತಿಪತ್ಷಷ್ಠೀ ನವಮೀ ಚ ತಿಥಿಕ್ಷಯಃ॥೧೧॥

ಪುನರ್ವಸು,ಪುಷ್ಯ,ಚಿತ್ರಾ,ವಿಶಾಖಾ,ಭರಣೀ,ಕೃತ್ತಿಕಾ,ಮೂಲ,ಆರ್ದ್ರಾ,ಮಘಾ, ಶ್ರವಣಾ ಈ ನಕ್ಷತ್ರಗಳನ್ನು ಮತ್ತು ಪಾಡ್ಯ,ಷಷ್ಠೀ,ನವಮೀ, ತಿಥಿಗಳನ್ನು ತಿಥಿಕ್ಷಯಗಳನ್ನು ಬಿಟ್ಟು, ಸೋಮ–ಶುಕ್ರ– ಬುಧವಾರ ಗಳಲ್ಲಿ ಪ್ರಸವಿಸಿದ ಸ್ತ್ರೀಗೆ ಸ್ನಾನ ಶುಭಕರವೆಂದು ತಿಳಿಯಬೇಕು.

## ನಾಮಕರಣ

ಮಿತ್ರಾದಿತ್ಯಮಘೋತ್ತರಾಶತಭಿಷಕ್ಸ್ವಾತಿ ಧನಿಷ್ಠಾಚ್ಯುತ
ಪ್ರಾಜೇಶಾಶ್ವಿಶಶಾಂಕ ಪೌಷ್ಣದಿನಕೃತ್ಪುಷ್ಯೇ ತು ರಾಶೌ ಸ್ಥಿರೇ।
ಛಿದ್ರಾಂ ಪಂಚದಶೀಂ ವಿಹಾಯ ನವಮೀಂಶುದ್ಧೇಷ್ಟಮೇ ಭಾರ್ಗವ
ಜ್ಞಾಚಾರ್ಯಾಮೃತಪಾದಭಾಗದಿವಸೇ ನಾಮಾನಿ ಕುರ್ಯುಃ ಶಿಶೋಃ॥೧೨॥
ಅಮಾಸಂಕ್ರಾಂತಿ ವಿಷ್ಟ್ಯಾಂತು ಪ್ರಾಪ್ತಕಾಲೇಪಿ ನಾಚರೇತ್।
ಶರ್ಮಾಂತಂ ಬ್ರಾಹ್ಮಣಸ್ಯ ಸ್ಯಾದ್ವರ್ಮಾಂತಂ ಕ್ಷತ್ರಿಯಸ್ಯ ಚ।
ವೈಶ್ಯಸ್ಯ ಧನಸಂಯುಕ್ತಂ ಶೂದ್ರಸ್ಯಪ್ರೇಷ್ಯಸಂಯುತಮ್॥೧೩॥

ಅನೂರಾಧ,ಪುನರ್ವಸು,ಮಘಾ,ಉತ್ತರಾತ್ರಯ,ಶತಭಿಷ,ಸ್ವಾತಿ, ಧನಿಷ್ಠಾ, ಶ್ರವಣ, ರೋಹಿಣೀ,ಅಶ್ವಿನೀ,ಮೃಗಶಿರ,ರೇವತೀ,ಹಸ್ತ,ಪುಷ್ಯ ನಕ್ಷತ್ರಗಳಲ್ಲಿ ಸ್ಥಿರಲಗ್ನ ಗಳಲ್ಲಿ, ಪಕ್ಷಛಿದ್ರ ಮತ್ತು ಪೂರ್ಣಿಮಾ, ನವಮೀ, ಅಮಾವಾಸ್ಯ,ಸಂಕ್ರಾಂತಿ, ಭದ್ರಾ ಇರುವ ತಿಥಿಗಳನ್ನು ಬಿಟ್ಟು, ಅಷ್ಟಮಶುದ್ಧಿ ಇದ್ದಾಗ, ಶುಕ್ರ,ಬುಧ,ಗುರುವಾರಗಳಲ್ಲಿ, ಪೂರ್ವಾಹ್ನದಲ್ಲಿ ಮಗುವಿಗೆ ನಾಮಕರಣಮಾಡಬೇಕು. ಬ್ರಾಹ್ಮಣನು ಶರ್ಮಾಂತ ವಾಗಿಯೂ, ಕ್ಷತ್ರಿಯನು ವರ್ಮಾಂತವಾಗಿಯೂ, ವೈಶ್ಯನು ಧನಯುತ ಗುಪ್ತಾಂತವಾಗಿ ಯೂ, ಶೂದ್ರನೂ ದಾಸಾಂತವಾಗಿಯೂ, ಹೋಡಾಚಕ್ರಾ ನುಸಾರವಾಗಿ ನಕ್ಷತ್ರದ ಪಾದಾಕ್ಷರಕ್ಕನು ಗುಣವಾಗಿ ನಾಮವನ್ನಿಡಬೇಕು.

ತುಲಾಲಿ ಕುಂಭೋಜಕುಲೀರಲಗ್ನೇ ವೇದ್ಯಂ ಪ್ರಸೂತಾಗೃಹಪೂರ್ವದ್ವಾರೇ।
ಕನ್ಯಾಧನುರ್ಮೀನನೃಯುಗ್ಮಲಗ್ನೇ ಸ್ಯಾದುತ್ತರದ್ವಾರಃ ಪ್ರತೀಚಿಗೋಸ್ಥಃ॥೧೪॥
ಮೃಗಾಲಿಲಗ್ನೇ ಮಕರೇ ತಥಾಪಿ ಭವೇತ್ ಪ್ರಸೂತಾಗೃಹದಕ್ಷಿಣಸ್ಯಾಮ್।
ಏವಂ ಹಿ ಲಗ್ನಾತ್ ಪರಿಚಿಂತನೀಯಂ ಸೂತೀಗೃಹದ್ವಾರಮಿದಂ ಪ್ರದಿಷ್ಟಮ್॥೧೫॥

ಜನ್ಮಸಮಯದಲ್ಲಿ ತುಲಾ,ವೃಶ್ಚಿಕ,ಕುಂಭ,ಮೇಷ, ಕರ್ಕ ಲಗ್ನವಾಗಿದ್ದರೆ ಪ್ರಸೂತಿಗೃಹದ ದ್ವಾರವು ಪೂರ್ವಮುಖವಾಗಿರುವದೆಂದು ತಿಳಿಯಬೇಕು, ಕನ್ಯಾ-ಧನುಸ್ಸು,ಮೀನ, ಮಿಥುನಲಗ್ನವಾಗಿದ್ದರೆ ಉತ್ತರ, ವೃಷಭಲಗ್ನ ವಾಗಿದ್ದರೆ ಪಶ್ಚಿಮ, ಸಿಂಹ ಮತ್ತು ಮಕರ ಲಗ್ನವಾಗಿದ್ದರೆ ದಕ್ಷಿಣ, ಈ ರೀತಿ ಪ್ರಸೂತಿಗೃಹದ ದ್ವಾರನಿರ್ಣಯ ಮಾಡಿ ತಿಳಿಯಬೇಕು.

ಮೀನೇ ಮೇಷೇ ಚ ದ್ವೇ ಭಾರ್ಯೇ ಚತ್ವಾರಿ ವೃಷಕುಂಭಯೋಃ ।
ಮಕರೇ ಮಿಥುನೇ ಪಂಚ ಬಾಣಾಶ್ಚ ಧನುಕರ್ಕಯೋಃ॥
ಅನ್ಯಲಗ್ನೇ ಭವೇತ್ತ್ರೀಣಿ ಪ್ರವದಂತಿ ಮನೀಷಿಣಃ॥೧೬॥

ಮೀನ-ಮೇಷ ಲಗ್ನವಾದರೆ ಇಬ್ಬರು ಸ್ತ್ರೀಯರು, ವೃಷಭ-ಕುಂಭವಾದರೆ ನಾಲಕ್ಕುಜನ ಸ್ತ್ರೀಯರು,ಮಕರ-ಮಿಥುನವಾದರೆ ಐದುಜನಸ್ತ್ರೀಯರು, ಧನು-ಕರ್ಕವಾದರೆ ಐದುಜನಸ್ತ್ರೀಯರು,



ಉಳಿದಲಗ್ನಗಳಾದರೆ ಮೂರು ಜನಸ್ತ್ರೀಯರು ಪ್ರಸೂತಿಗೃಹದಲ್ಲಿ ಇರುವರೆಂದು ಪಂಡಿತರು ಹೇಳುವರು.

ಲಗ್ನಚಂದ್ರಾಂತರ್ಗತಸ್ಥೈರ್ಗ್ರಹೈಸ್ತತ್ರ ಪ್ರಸೂತಿಕಾಃ।
ಬಹಿರಂತಶ್ಚ ಚಕ್ರಾರ್ಧೇ ದೃಶ್ಯಾದೃಶ್ಯೇನ್ಯಥಾ ಪರೇ।
ಅಂಗೇ ಚಂದ್ರೇ ಗ್ರಹಮಾತ್ರಾದೃಷ್ಟೇ ನಿರ್ಜನೇ ಪ್ರಸವಃ॥೧೭॥

ಲಗ್ನ ಮತ್ತು ಚಂದ್ರರ ನಡುವೆ ಎಷ್ಟು ಗ್ರಹರಿರುವರೋ ಅಷ್ಟುಸ್ತ್ರೀಯರು ಅಥವಾ ಲಗ್ನದಿಂದ ಏಳುಸ್ಥಾನದವರೆಗೂ ಎಷ್ಟುಗ್ರಹರಿರುವರೋ ಅಷ್ಟುಜನಸ್ತ್ರೀಯರು ಪ್ರಸೂತಿ ಗೃಹದ ಒಳಗೂ ಅಷ್ಟಮಸ್ಥಾನದಿಂದ ದ್ವಾದಶಸ್ಥಾನದವರೆಗೂ ಎಷ್ಟುಗ್ರಹರಿರುವರೋ ಅಷ್ಟುಜನ ಪ್ರಸೂತಿ ಗೃಹದ ಹೊರಗೂ ಇರುವರೆಂದು ತಿಳಿಯಬೇಕು. ಒಂದು ವೇಳೆ ಲಗ್ನ ಮತ್ತು ಚಂದ್ರರಿಗೆ ಯಾವಗ್ರಹದ ದೃಷ್ಟಿಯೂ ಇಲ್ಲದೆ ಹೊದರೆ ಪ್ರಸೂತಿಗೃಹದಲ್ಲಿ ಯಾರೂ ಇರುವುದಿಲ್ಲವೆಂದು ತಿಳಿಯಬೇಕು.

ಪಾಪೈಶ್ಚ ವಿಧವಾ ನಾರೀ ಕ್ರೂರೈರಪಿ ಕುಮಾರಿಕಾ।
ಸೌನ್ಯಮಗ್ರಹೈಶ್ಚ ಸುಭಗಾ ಸೂತಿಕಾಯಾಂ ವಿಧೀಯತೇ॥೧೮॥

ಪಾಪಗ್ರಹರಿದ್ದರೆ ವಿಧವೆಯೂ, ಕ್ರೂರಗ್ರಹದ್ದರೆ ಕುಮಾರಿಯೂ, ಶುಭಗ್ರಹರಿದ್ದರೆ ಸೌಭಾಗ್ಯವತಿಯೂ ಪ್ರಸೂತಿಗೃಹದಲ್ಲಿರುವರೆಂದು ತಿಳಿಯಬೇಕು.

ಮೇಷತ್ರಿಪಂಚಾನನತೌಲಿಲಗ್ನೇ ವಿಸ್ಮೃತ್ವ ಸರ್ವ ಬಹು ರೋದಿತಿಸ್ಮ।
ಸ್ವಲ್ಪಂ ಘಟೇ ಸ್ತ್ರೀಶಿಶುರನ್ಯಲಗ್ನೇ ರುದ್ಧ್ಯದ್ಧಿನೋ ಜ್ಞಾನಬಲಸ್ಯ ಸತ್ವಾತ್॥೧೯॥

ಮೇಷ,ಮಿಥುನ,ಸಿಂಹ,ತುಲಾ ಲಗ್ನವಿದ್ದರೆ ಪ್ರಪಂಚವನ್ನೆ ಮರೆತು ಜೋರಾಗಿ ಶಿಶುವು ಬಹಳ ಅಳುವುದು, ಕುಂಭ,ಕನ್ಯಾಲಗ್ನಗಳಲ್ಲಿ ಹುಟ್ಟಿದಶಿಶುವು ಸ್ವಲ್ಪ ಅಳುವುದು, ಉಳಿದ ಲಗ್ನಗಳಲ್ಲಿ ಹುಟ್ಟಿದ ಶಿಶುವು ಜ್ಞಾನಬಲದಿಂದ ಹೆಚ್ಚು ಅಳುವುದಿಲ್ಲ.

ಮೇಷಸಿಂಹೇ ಧನುಃ ಕರ್ಕೇ ಕನ್ಯಾಮೀನೇ ತಥಾ ತುಲೇ।
ಅಂತರಿಕ್ಷಂ ಭವೇಜನ್ಮ ಶೇಷೇ ಭೂಮಿರ್ನಿಗದ್ಯತೇ॥೨೦॥

ಮೇಷ,ಸಿಂಹ,ಧನುಃ,ಕರ್ಕ,ಕನ್ಯಾ,ಮೀನ,ತುಲಾಲಗ್ನಗಳಾದರೆ ಅಂತರಿಕ್ಷದಲ್ಲಿ ಜನನ ವಾಗುವುದು, ಮಿಕ್ಕ ರಾಶಿಗಳು ಲಗ್ನವಾದರೆ ಭೂಮಿಯಲ್ಲಿ ಜನನ.

ಛಾಗಸಿಂಹೇ ವೃಷೇ ಲಗ್ನೇ ವೃಶ್ಚಿಕೇ ನಾಲವೇಷ್ಟಿತಃ।
ನೃಲಗ್ನೇ ದಕ್ಷಿಣೇ ಪಾರ್ಶ್ವೇ ವಾಮೇ ಸ್ತ್ರೀಲಗ್ನಕೇ ತಥಾ॥೨೧॥

ಮೇಷ,ಸಿಂಹ, ವೃಷಭ,ವೃಶ್ಚಿಕ ಲಗ್ನಗಳಲ್ಲಿ ಶಿಶುಜನಿಸಿದರೆ ನಾಳವೇಷ್ಟನದಿಂದಲೂ ಪುರುಷಲಗ್ನವಾದರೆ ಎಡಮಗ್ಗುಲಾಗಿಯೂ, ಸ್ತ್ರೀಲಗ್ನವಾದರೆ ಬಲಮಗ್ಗುಲಾಗಿಯೂ ಜನಿಸುವುದು.

ಛಾಗಸಿಂಹೇ ವೃಷೇ ಲಗ್ನೇ ತತ್ಸ್ಥೇ ಮಂದೇಥವಾ ಕುಜೇ।

ರಾಶ್ಯಂಶಸದೃಶೇ ಗಾತ್ರೇ ಜಾಯತೇ ನಾಲವೇಷ್ಟಿತಃ॥೨೩॥

ಮೇಷ,ಸಿಂಹ,ವೃಷಭ ಲಗ್ನಗಳಾಗಿ ಅಲ್ಲಿ ಶನಿ ಅಥವಾ ಕುಜನು ಇರಲು ಆ ರಾಶ್ಯಂಶಗಳ ಅಂಗಗಳಲ್ಲಿ ನಾಳವೇಷ್ಟಿತಾವಾಗಿ ಶಿಶುವು ಹುಟ್ಟುವುದು.

ಯತ್ರ ರಾಹುಸ್ತತ್ರ ಶಿರೋ ಮಂಗಲೇ ಭೂಮಿಖಂಡನಮ್।

ರವಿಸ್ಥಾನೇ ಭವೇದ್ದೀಪಃ ಶನೌ ಲೋಹಂ ನಿಗದ್ಯತೇ॥೨೩॥

ರಾಹು ಇರುವದಿಕ್ಕಿನಲ್ಲಿ ಶಿಶುವಿನ ತಲೆ ಇರುವುದು, ಕುಜನಿರುವಕಡೆ ಭೂಮಿ ಬಿರಿದಿರುವುದು, ಸೂರ್ಯನಿರುವಲ್ಲಿ ದೀಪ ಇರುವುದು, ಶನಿ ಇರುವಲ್ಲಿ ಲೋಹ ವಿರುವುದೆಂದು ತಿಳಿಯಬೇಕು. ಇಲ್ಲಿ ಲಗ್ನವು ಪೂರ್ವ, ಚತುರ್ಥ ಉತ್ತರ, ಸಪ್ತಮ ಪಶ್ಚಿಮ, ದಶಮ ದಕ್ಷಿಣದಿಕ್ಕಾಗಿದೆ. ಇದಕ್ಕನುಗುಣವಾಗಿ ವಿದಿಕ್ಕನ್ನು ತಿಳಿಯಬೇಕು.

ಚರಲಗ್ನೇ ಚರೋ ದೀಪಃ ಸ್ಥಿರೇ ಸ್ವಸ್ಥಾನಸಂಸ್ಥಿತಃ।

ದ್ವಿದೇಹೇ ಕರಸ್ಥಃಸ್ಯಾದಿತಿಕೇಚಿದ್ಬುಧಾ ಜಗುಃ॥೨೪॥

ಚರಲಗ್ನವಾದರೆ ಚರದೀಪ, ಸ್ಥಿರಲಗ್ನವಾದರೆ ಸ್ಥಿರದೀಪ, ದ್ವಿಸ್ವಭಾವ ಲಗ್ನವಾದರೆ ಕರದೀಪವೆಂದು ಕೆಲವು ಪಂಡಿತರು ಹೇಳುವರು.

ಪಿತರ್ಜಾತಃ ಪರೋಕ್ಷಸ್ಯ ಲಗ್ನಮಿಂದಾವಪಶ್ಯತಿ।

ವಿದೇಶಸ್ಥಸ್ಯ ಚರಭೇ ಮಧ್ಯಾದ್ ಭ್ರಷ್ಟೇ ದಿವಾಕರೇ॥೨೫॥

ಲಗ್ನವನ್ನು ಚಂದ್ರನು ನೋಡದಿದ್ದರೆ ಪಿತನು ಎದುರಿಲ್ಲದಾಗ ಶಿಶುಜನನವು. ಅಷ್ಟಮ, ನವಮ,ದಶಮ, ಏಕಾದಶ, ದ್ವಾದಶಸ್ಥಾನಗಳಲ್ಲಿ ಸೂರ್ಯನಿರಲು ಶಿಶುಜನನಸಮಯದಲ್ಲಿ ತಂದೆಯು ವಿದೇಶದಲ್ಲಿರುವನು.

ಗಂಗಾಪೂಜಾ

ಪುನರ್ವಸುದ್ವೇ ಹಸ್ತೇ ಮೃಗೇ ಮೂಲನುರಾಧಾಯೋಃ

ಶ್ರವೇ ಗುರೌ ಬುಧೇ ಚಂದ್ರೇ ಸತ್ತಿಥೌ ಜಲಪೂಜನಮ್॥೨೬॥

ಪುನರ್ವಸು,ಪುಷ್ಯ,ಹಸ್ತಾ,ಮೃಗಶಿರ,ಮೂಲಾ,ಅನುರಾಧಾ,ಶ್ರವಣನಕ್ಷತ್ರಗಳಲ್ಲೂ, ಗುರು,ಬುಧ,ಸೋಮವಾರಗಳಲ್ಲೂ,ಶುಭತಿಥಿಯಲ್ಲೂ ಗಂಗಾಪೂಜೆಯನ್ನು ಮಾಡಬೇಕು.

## ಮಂಚ ಮತ್ತು ತೊಟ್ಟಿಲಲ್ಲಿ ಮಲಗಿಸುವುದು

ಖಟ್ವಾರೋಹಸ್ತು ಕರ್ತವ್ಯೋ ದಶಮೇ ದ್ವಾದಶೇ ಪಿ ವಾ।

ಷೋಡಶೇ ದಿವಸೇ ವಾಪಿ ದ್ವಾವಿಂಶದಿವಸೇಪಿ ವಾ।

ಸ್ತನಪಾನೋಕ್ತ ನಕ್ಷತ್ರೇ ಕುರ್ಯಾದ್ದೋಲಧಿರೋಹಣಮ್॥ ೨೭॥

ಹತ್ತು ಅಥವಾ ಹನ್ನೆರಡನೆಯ ದಿವಸ ಮಂಚದಮೇಲೆ ಶಿಶುವನ್ನು ಮಲಗಿಸಬೇಕು, ೧೬



ಅಥವಾ ೨೨ ನೇದಿನ ಶಿಶುವನ್ನು ಸ್ತನ್ಯಪಾನಕ್ಕೆ ಹೇಳಿದ ನಕ್ಷತ್ರಗಳಲ್ಲಿ ತೊಟ್ಟಿಲಲ್ಲಿ ಮಲಗಿಸಬೇಕು. ಸ್ತನ್ಯಪಾನಕ್ಕೆ ಹೇಳಿದ ನಕ್ಷತ್ರಗಳು ಮುಂದೆ ಅನ್ನ ಪ್ರಾಶನಕ್ಕೆ ಹೇಳುವ ನಕ್ಷತ್ರಗಳೇ ಎಂದು ತಿಳಿಯಬೇಕು.

## ಅನ್ನ ಪ್ರಾಶನ

ಯುಗ್ಮೇಷು ಮಾಸೇಷು ಚ ಷಷ್ಠಮಾಸಾತ್ಸಂವತ್ಸರೇ ವಾ ನಿಯತಂ ಶಿಶೂನಾಮ್।

ಅಯುಗ್ಮೇಷು ಚ ಕನ್ಯಕಾನಾಂ ನವಾನ್ನಸಂಪ್ರಾಶನಮಿಷ್ಟಮೇತತ್॥೨೮॥

ವರ್ಷದಲ್ಲಿ ಸಮಮಾಸಗಳಲ್ಲಿ(೪-೬-೮-೧೦) ಗಂಡುಮಗುವಿಗೂ, ವಿಷಮ ಮಾಸಗಳಲ್ಲಿ(೩-೫-೭-೯) ಹೆಣ್ಣುಶಿಶುವಿಗೂ ಅನ್ನಪ್ರಾಶನಮಾಡಿಸಬೇಕು.

ರೇವತೀದ್ವಿತಯೇ ಪುಷ್ಯೇ ಪುನರ್ವಸ್ವನುರಾಧಯೋಃ।

ಶ್ರವಣಾದಿತ್ರಯೇ ಹಸ್ತತ್ರತಯೇ ರೋಹಿಣೀ ಮೃಗೇ।

ಕರ್ಣವೇಧಂ ತಥಾ ಪಾನಂಕ್ಷುರಕರ್ಮಾನ್ನಭೋಜನಮ್॥೨೯॥

ರೇವತೀ,ಅಶ್ವಿನಿ,ಪುಷ್ಯ,ಪುನರ್ವಸು,ಅನುರಾಧಾ,ಶ್ರವಣಾ,ಧನಿಷ್ಠಾ,ಶತಭಿಷ,ಹಸ್ತ, ಚಿತ್ತಾ,ಸ್ವಾತಿ,ರೋಹಿಣೀ,ಮೃಗಶಿರನಕ್ಷತ್ರಗಳಲ್ಲಿ ಕರ್ಣವೇಧ, ದುಗ್ಧಪಾನ, ಕ್ಷೌರಕರ್ಮ,ನವಾನ್ನಭೋಜನ ಶುಭವಾಗಿದೆ

ಪಟ್ಟಬಂಧನಚೌಲಾನ್ನಪ್ರಾಶನೇ ಚೋಪಾನಾಯನೇ।

ಶುಭದಂ ಜನ್ಮನಕ್ಷತ್ರಮಶುಭಂ ತ್ವನ್ಯಕರ್ಮಣಿ॥೩೦॥

ಜನ್ಮನಕ್ಷತ್ರವು ಪಟ್ಟಾಭಿಷೇಕ,ಚೌಲ,ಅನ್ನಪ್ರಾಶನ,ಉಪನಯನಗಳಲ್ಲಿ ಶುಭವೆಂದು ತಿಳಿಯಬೇಕು, ಈ ಕರ್ಮಗಳನ್ನು ಬಿಟ್ಟು ಬೇರೇ ಕರ್ಮಗಳಲ್ಲಿ ಜನ್ಮನಕ್ಷತ್ರ ಶುಭವಲ್ಲ.

ಹಿತ್ವಾ ರಿಕ್ತಾಂ ತಥಾ ಮಂದಾಮಷ್ಟಮೀಂ ದ್ವಾದಶೀಂ ತಥಾ।

ತಿಥೇಃ ಕ್ಷಯಮಮಾಂ ವಾರಾನ್ ಶನಿಭೌಮಾರ್ಕಸಂಜ್ಞಕಾನ್॥೩೧॥

ರಿಕ್ತಾ((೪-೯-೧೪),ನಂದಾ(೧-೬-೧೧), ಅಷ್ಟಮೀ,ದ್ವಾದಶೀ, ತಿಥಿಕ್ಷಯಗಳು, ಅಮಾವಾಸ್ಯ ಈ ತಿಥಿಗಳನ್ನು ಬಿಡುವುದು ಒಳ್ಳೆಯದು. ಮಂಗಳ,ಶನಿ ಮತ್ತು ಭಾನುವಾರಗಳನ್ನು ಬಿಡಬೇಕು.

ಜ್ಯೇಷ್ಠಾದಿತ್ಯಸಮೀರಣಾರ್ಕಶತಭೇ ಪುಷ್ಯೇ ಶ್ರವಿಷ್ಠಾಶ್ವಿನೀ

ಚಿತ್ರಾವೈಷ್ಣವಮಿತ್ರಪೌಷ್ಣಮೃಗೇ ವಾರೇ ಬುಧಾದಿತ್ರಯೇ।

ತ್ರ್ಯಾಯಾರಿಃ ಸ್ವಗತೇ ಖಲೇ ಚ ಶುಭದೇ ಕೇಂದ್ರತ್ರಿಕೋಣೇ ಸ್ಥಿತೇ

ವರ್ಷೇ ವಾಯುಜಿ ಕರ್ಣವೇಧನವಿಧಿಃ ಪಕ್ಷೇ ಸಿತೇ ಶೋಭನೇ॥೩೨॥

ಜನ್ಮರ್ಕ್ಷೇ ಜನ್ಮಮಾಸೇಚ ರಿಕ್ತಾಪರ್ವಾವಮೇಷು ಚ।

ಭದ್ರಾಯಾಮಶುಭೇ ಚಂದ್ರೇ ನ ಕುರ್ಯಾತ್ಕರ್ಣವೇಧನಮ್॥೩೩॥

ಜ್ಯೇಷ್ಠಾ,ಪುನರ್ವಸು,ಸ್ವಾತಿ,ಹಸ್ತ,ಶತಭಿಷ,ಪುಷ್ಯೇ,ಧನಿಷ್ಠಾ,ಅಶ್ವಿನೀ, ಚಿತ್ರಾ, ಶ್ರವಣ, ಅನೂರಾಧಾ, ರೇವತೀ, ಮೃಗಶಿರ ನಕ್ಷತ್ರಗಳಲ್ಲಿ ಬುಧ,ಗುರು, ಶುಕ್ರವಾರಗಳಲ್ಲಿ,೩-೬-೧೧ ಸ್ವಕ್ಷೇತ್ರಗಳಲ್ಲಿ ಪಾಪ ಗ್ರಹರಿದ್ದಾಗ, ಶುಭರು ಕೇಂದ್ರತ್ರಿಕೋಣದಲ್ಲಿದ್ದಾಗ (೧,೪,೭,೧೦-೫,೯), ೧,೩,೫ ಈ ರೀತಿ ವಿಷಮ ವರ್ಷಗಳಲ್ಲಿ ಶುಕ್ಲಪಕ್ಷದಲ್ಲಿ ಕರ್ಣವೇಧನವು ಶುಭವಾಗಿದೆ. ಜನ್ಮನಕ್ಷತ್ರ,ಜನ್ಮಮಾಸದಲ್ಲಿ ರಿಕ್ತಾ(೪-೯-೧೪)ಪರ್ವ,ತಿಥಿಕ್ಷಯದಿನಗಳಲ್ಲಿ, ಭದ್ರಾಕರಣವಿದ್ದಾಗ,ಅಶುಭ ಚಂದ್ರನಿದ್ದಾಗ ಕರ್ಣವೇಧನಮಾಡಬಾರದು.

## ಕ್ಷೌರಕರ್ಮ

ಶ್ರವಣತ್ರಿತಯೇ ಹಸ್ತತ್ರಿತಯೇ ರೇವತೀದ್ವಯೇ।
ಜ್ಯೇಷ್ಠಾಯಾಂ ಮೃಗಶೀರ್ಷೇ ಚ ಪುನರ್ವಸುದ್ವಯೇ ತಥಾ॥೩೪॥
ಕ್ಷುರಕರ್ಮ ಬುಧೈಃ ಪ್ರೋಕ್ತಂ ತ್ಯಕ್ತ್ವಾ ಭೌಮಶನಿಂ ರವಿಮ್।
ಅನೂರಾಧಾಮುಘಾಂ ಚೈವ ಕೃತ್ತಿಕಾಂ ರೋಹಿಣೀಂ ಮಘಾಮ್॥೩೫॥

ಶ್ರವಣ,ಧನಿಷ್ಠಾ,ಶತಭಿಷ,ಹಸ್ತ,ಚಿತ್ರಾ,ಸ್ವಾತಿ,ರೇವತೀ,ಅಶ್ವಿನೀ,ಜ್ಯೇಷ್ಠಾ, ಮೃಗಶಿರ, ಪುನರ್ವಸು,ಪುಷ್ಯ, ಕ್ಷೌರಕರ್ಮ ಪಂಡಿತರಿಂದ ಹೇಳಲ್ಪಟ್ಟಿದೆ. ಮಂಗಳ,ಶನಿ,ಭಾನುವಾರ ಅನೂರಾಧಾ ಉತ್ತರಾ, ಕೃತ್ತಿಕಾ,ರೋಹಿಣೀ, ಮಘಾ ನಕ್ಷತ್ರಗಳನ್ನು ಬಿಡಬೇಕು.

ನ ಜನ್ಮಮಾಸೇ ನಚ ಜನ್ಮಭೇ ತಿಥೌ ವಿಧೌ ವಿರುದ್ಧೇ ಶುಭತಾರಕಾಸು।
ಯುಗ್ಮಾಬ್ದಮಾಸೇ ನಚ ಕೃಷ್ಣಪಕ್ಷೇ ಚೂಡಾ ನ ಕಾರ್ಯಾ ಖಲು ಚೈತ್ರಪೌಷೇ॥೩೬॥

ಜನ್ಮಮಾಸ,ಜನ್ಮನಕ್ಷತ್ರ,ಜನ್ಮತಿಥಿ,ಚಂದ್ರನು ನಿರ್ಬಲನಾದಾಗ, ಅಶುಭ ನಕ್ಷತ್ರವಿರುವಾಗ,ಸಮಮಾಸಗಳಲ್ಲಿ, ಕೃಷ್ಣಪಕ್ಷಗಳಲ್ಲಿ, ಚೈತ್ರ, ಪುಷ್ಯಮಾಸಗಳಲ್ಲಿ ಚೂಡಾಕರ್ಮ ಮಾಡಬಾರದು

ಷಷ್ಠ್ಯಷ್ಟಮೀ ದ್ವಾದಶೀ ಚ ರಿಕ್ತಾಪರ್ವಾವಮೇಷು ಚ।
ಗಲಗ್ರಹೇ ಚ ಭದ್ರಾಯಾಂ ಕ್ಷುರಕರ್ಮ ನಕಾರಯೇತ್॥೩೭॥

ಷಷ್ಠೀ,ಅಷ್ಟಮೀ,ದ್ವಾದಶೀ,ರಿಕ್ತಾ(೪-೯-೧೪)ಪರ್ವ,ತಿಥಿಕ್ಷಯಗಳಲ್ಲಿ ಗಲಗ್ರಹ ವಿದ್ದಾಗ, ಭದ್ರಾಕರಣದಲ್ಲೂ ಕ್ಷೌರಕರ್ಮ ಮಾಡಬಾರದು.

## ಅಕ್ಷರಾರಂಭ

ಸೌಮ್ಯಾಯನೇ ಶುಭೇ ಮಾಸಿ ಸ್ವಾಧ್ಯಾಯದಿವಸೇ ಶುಭೇ।
ರವೌ ಜೀವೇ ಬುಧೇ ಶುಕ್ರೇ ಲಗ್ನೇ ಖೇಟಬಲಾನ್ವಿತೇ॥೩೮॥
ರೇವತೀದ್ವಿತಯೇ ಪುಷ್ಯೇ ಪುನರ್ವಸ್ವನುರಾಧಯೋಃ।
ಆರ್ದ್ರಾಖ್ಯೇ ಶ್ರವಣೇ ಹಸ್ತೇ ಸ್ವಾತೌ ಚಿತ್ರಾಭಿಧೇ ತಥಾ॥೩೯॥



ಹೇರಂಬಾಂಬೇ ಚ ವಾಗ್ದೇವೀ ತಥಾಭ್ಯಾರ್ಚ್ಯೇಷ್ಟದೇವತಾಃ।
ಪಂಚಮಾಬ್ದೇ ನರಃ ಕುರ್ಯಾಲ್ಲಿಪ್ಯಾರಂಭೋ ಬುಧಃ ಸದಾ॥೪೦॥

ಉತ್ತರಾಯಣದಲ್ಲಿ ಶುಭಮಾಸದಲ್ಲಿ ಸ್ವಾಧ್ಯಾಯದಿವಸದಲ್ಲಿ ರವಿ, ಗುರು,ಬುಧ,ಶುಕ್ರವಾರಗಳಲ್ಲಿ, ಲಗ್ನದಲ್ಲಿ ಗ್ರಹರುಬಲಿಷ್ಠರಿದ್ದಾಗ, ರೇವತೀ,ಅಶ್ವಿನೀ, ಪುಷ್ಯ,ಪುನರ್ವಸು,ಅನುರಾಧ,ಆರ್ದ್ರಾ,ಶ್ರವಣ,ಹಸ್ತಾ, ಸ್ವಾತಿ,ಚಿತ್ರಾನಕ್ಷತ್ರಗಳಲ್ಲಿ ಗಣಪತಿ, ಪಾರ್ವತಿ, ಸರಸ್ವತೀ ದೇವತೆಗಳನ್ನು ಪೂಜಿಸಿ ೫ನೇ ವರ್ಷದಲ್ಲಿ ಪಂಚಮಾಬ್ದೇ ತಿಳಿವಳಿಕೆ ಇರುವವನು ಅಕ್ಷರಾ ಭ್ಯಾಸಾರಂಭವನ್ನು ಮಾಡಿಸಬೇಕು.

## ಉಪನಯನ

ಆಷೋಡಶಾದ್ ಬ್ರಾಹ್ಮಣಸ್ಯ ಸಾವಿತ್ರೀ ನಾತಿವರ್ತತೇ।
ಆದ್ವಾವಿಂಶಾದ್ ಬ್ರಹ್ಮಬಂಧೋರಾಚತುರ್ವಿಂಶತೇರ್ವಿಶಃ॥೪೧॥

೧೬ ವರ್ಷದವರೆಗೆ ಬ್ರಾಹ್ಮಣನಿಗೆ,೨೨ವರ್ಷದವರೆಗೆ ಕ್ಷತ್ರಿಯನಿಗೆ, ೨೪ವರ್ಷ ದವರೆಗೆ ವೈಶ್ಯನಿಗೆ ಗಾಯಿತ್ರಿಯ ಪ್ರಭಾವವು ಇರುತ್ತದೆ.

ಬಟುಕನ್ಯಾಜನ್ಮರಾಶೇಸ್ತ್ರಿಕೋಣಾಯದ್ವಿಸಪ್ತಗಃ।
ಶ್ರೇಷ್ಠೋ ಗುರುಃ ಖಷಟ್ತ್ರ್ಯಾದ್ಯೇ ಪ್ರಪೂಜ್ಯೋನ್ಯತ್ರ ನಿಂದಿತಃ॥೪೨॥

ವಟು,ಕನ್ಯೆಯರ ಜನ್ಮರಾಶಿಯಿಂದ ತ್ರಿಕೋಣ(೧-೫-೯),೧೧,೨,೭ ರಾಶಿ ಗಳಲ್ಲಿ ಗುರುವಿದ್ದರೆ ಶ್ರೇಷ್ಠವಾದ ಗುರುಬಲವಿದೆ ಎಂದು ತಿಳಿಯಬೇಕು. ೧೦-೬-೩ ಸ್ಥಾನಗಳಗುರುವು ಒಂದುಸಾರಿ ಪೂಜೆಮಾಡಿದರೆ ಶುಭನಾಗುವನು, ೪-೮-೧೨ ರಲ್ಲಿರುವ ಗುರುವು ನಿಂದಿತನೆಂದಿದ್ದಾರೆ ಆದರೆ ಮೂರುಸಾರಿಪೂಜಿಮಾಡುವದರಿಂದ ಆಗುರುವು ಕೂಡ ಶುಭಫಲಕೊಡುತ್ತಾನೆಂದು ಪಂಡಿತರು ಹೇಳುತ್ತಾರೆ.

ಸಾಧಾರಣಂ ಚ ಮಾಸೇಷು ಮಘಾದಿಷು ಚ ಪಂಚಸು।
ವಿನರ್ತುನಾ ವಸಂತೇನ ಕೃಷ್ಣಪಕ್ಷೇ ಗಲಗ್ರಹೇ॥೪೫॥

ಮಾಘಾದಿಪಂಚಮಾಸಗಳಲ್ಲಿ, ವಸಂತುಋತು,ಕೃಷ್ಣಪಕ್ಷ, ಗಲಗ್ರಹವಿದ್ದಾಗ ಉಪನಯನ ಶುಭವಲ್ಲ.

ಕೃಷ್ಣಪಕ್ಷೇ ಚತುರ್ಥೀ ಚ ಸಪ್ತಮ್ಯಾದಿ ದಿನತ್ರಯಮ್।
ತ್ರಯೋದಸ್ಯಾಶ್ಚತುಷ್ಕಂ ಚ ಅಷ್ಟಾವೇತೇ ಗಲಗ್ರಹಾಃ॥೪೫॥

ಗಲಗ್ರಹವೆಂದರೆ ಕೃಷ್ಣಪಕ್ಷದ ೪-೭-೮-೯-೧೩-೧೪-೩೦ ಶುಕ್ಲಪಕ್ಷದ ಪ್ರತಿಪತ್ ಈ ಎಂಟು ತಿಥಿಗಳನ್ನು ಗಲಗ್ರಹವೆನ್ನುವರು.

ದ್ವಿತ್ರ್ಯೈಲಕಾದಶದಿಕ್ಪಂಚದ್ವಾದಶಪ್ರಮಿತೇ ತಿಥೌ।
ಅಶ್ವಿನೀಮೃಗಾಚಿತ್ರಾಸು ಹಸ್ತೇ ಸ್ವಾತ್ಯಾಂ ಚ ಶಕ್ರಭೇ॥೪೬॥

ಪುಷ್ಯೇ ಚ ಪೂರ್ವಾಫಾಲ್ಗುನ್ಯಾಂ ಶ್ರವಣೇ ಪೌಷ್ಣಭಂ ತಥಾ।

ವಾಸವೇ ಶತಾತಾರಾಸು ವ್ರತಬಂಧಃ ಪ್ರಶಸ್ಯತೇ॥೪೭॥

೨-೩-೧೦-೫-ತಿಥಿಗಳಲ್ಲಿ ಅಶ್ವಿನೀ,ಮೃಗಾಶಿರ,ಚಿತ್ರಾ,ಹಸ್ತಾ, ಸ್ವಾತಿ, ಜ್ಯೇಷ್ಠಾ,ಪುಷ್ಯ,ಪೂರ್ವಾ ಫಲ್ಗುಣೀ,ಶ್ರವಣ,ರೇವತೀ,ದನಿಷ್ಠಾ, ಶತಾತಾರಾ ನಕ್ಷತ್ರಗಳಲ್ಲಿ ಉಪನಯನವು ಶುಭವಾಗಿದೆ.

ಚೈತ್ರೇಮಾಸೇ ಭಾಸ್ಕರೇ ಮೀನಸಂಸ್ಥೇ ಕೂರ್ಯಾನ್ಮೌಜೀಬಂಧನಂ ಬ್ರಾಹ್ಮಣಾನಾಮ್।

ಶುಕ್ರಸ್ಯಾಸ್ತಂ ವಾಕ್ಪತೇರ್ನಾವಲೋಕ್ಯಂ ನೈವ ಗ್ರಾಹ್ಯಾ ಚಂದ್ರಗುರ್ವೋರ್ಚ್ಚಶುದ್ಧಿಃ॥೪೮॥

ಮೀನಸ್ಥಿತೇರ್ಕೇ ದ್ವಿಜಪುಂಗವಾನಾಂ ವ್ರತಸ್ಯ ಬಂಧಂ ಖಲು ಮಾಸಿ ಚೈತ್ರೇ।

ನ ಜೀವದೋಷೋಬ್ದವಿರುದ್ಧದೋಷೋ ಗಲಗ್ರಹಾನಧ್ಯಯನಾದಿ ದೋಷಃ॥೪೯॥

ಚೈತ್ರೇಮಾಸದಲ್ಲಿ ಸೂರ್ಯನು ಮೀನದಲ್ಲಿದ್ದಾಗ ಬ್ರಾಹ್ಮಣರು ಉಪನಯನಮಾಡಬೇಕು, ಗುರು- ಶುಕ್ರರ ಅಸ್ತವನ್ನು ನೋಡಬೇಕಾಗಿಲ್ಲ ಚಂದ್ರ-ಗುರುಗಳ ಶುದ್ಧಿಯನ್ನು ನೋಡಬೇಕಾಗಿಲ್ಲ ಮೀನಸ್ಥಿತ ರವಿಯು ಬ್ರಾಹ್ಮಣರಿಗೆ ಉಪನಯನಕ್ಕೆ ಚೈತ್ರದಲ್ಲೂ ಮಾಡಬಹುದು. ಗುರು ದೋಷವಿಲ್ಲ, ವರ್ಷವಿರುದ್ಧ ದೋಷವೂಇಲ್ಲ, ಗಲಗ್ರಹಾದಿ ದೋಷವೂ ಕೂಡ ಇರುವುದಿಲ್ಲ. ಅಂದರೆ ಮೀನಸ್ಥಿತರವಿಯು ಬಹಳಶ್ರೇಷ್ಠನೆಂದು ಅರ್ಥ.

## **ವಿವಾಹ**

ಗುರುಶುದ್ಧವಶೇನ ಕನ್ಯಕಾನಾಂ ಸಮವರ್ಷೇಷು ಷಡಬ್ದಕೋಪರಿಷ್ಟಾತ್।

ರವಿಶುದ್ಧಿವಶಾಚ್ಛುಭೋ ವರಾಣಾಮುಭಯೋಶ್ಚಂದ್ರವಿಶುದ್ಧತೋ ವಿವಾಹಃ॥೫೦॥

ಗುರುಬಲಕ್ಕೆ ಅನುಸಾರವಾಗಿ ಕನ್ಯೆಗೆ ೬ನೇ ವರ್ಷದಿಂದ ಸಮವರ್ಷಗಳಲ್ಲಿ ಮಾಡಬೇಕು, ಸೂರ್ಯನ ಬಲಿಷ್ಟನಾಗಿರಲು ಪುರುಷನಿಗೆ ಅಸಮವರ್ಷಗಳಲ್ಲಿ ವಿವಾಹವು ಪ್ರಶಸ್ತವಾಗಿದೆ. ವಧೂ-ವರರಿಬ್ಬರಿಗೂ ಚಂದ್ರಬಲಮಾತ್ರ ಅವಶ್ಯವಾಗಿ ನೋಡಬೇಕು.

ರೇವತ್ಯುತ್ತರ ರೋಹಿಣೀ ಮೃಗಮಘಾಮೂಲಾನುರಾಧಾಕರ

ಸ್ವಾತೀಷು ಪ್ರಮದಾತುಲಾಮಿಥುನಗೋ ಲಗ್ನೇ ವಿವಾಹಃ ಶುಭಃ।

ಮಾಸಾಃ ಫಾಲ್ಗುನಮಾಘಮಾರ್ಗಶುಚಯೋ ಜ್ಯೇಷ್ಠಸ್ಥಥಾ ಮಾಧವಃ

ಶಸ್ತಾಃ ಸೌಮ್ಯದಿನೇ ತಥೈವ ತಿಥಯೋ ರಿಕ್ತಾ ಕುಹೂವರ್ಜಿತಾಃ॥೫೧॥

ರೇವತೀ,ಉತ್ತರಾತ್ರಯ,ರೋಹಿಣೀ,ಮೃಗಶಿರ,ಮಘಾ,ಮೂಲಾ,ಅನುರಾಧಾ ಹಸ್ತ, ಸ್ವಾತೀನಕ್ಷತ್ರಗಳಲ್ಲಿ ಕನ್ಯಾ,ತುಲಾ,ಮಿಥುನ,ವೃಷಭ ಲಗ್ನಗಳಲ್ಲಿ ವಿವಾಹ ಶುಭ, ಮಾಸಾಃ ಫಾಲ್ಗುನ,ಮಾಘ, ಮಾರ್ಗಶಿರ, ಆಷಾಢ,ಜ್ಯೇಷ್ಠ,ವೈಶಾಖಮಾಸಗಳು ಶುಭದಿನದಲ್ಲಿ ರಿಕ್ತಾ(೪-೯-೧೪) ಕುಹೂತಿಥಿಗಳನ್ನು ಬಿಟ್ಟು ಶುಭತಿಥಿಗಳಲ್ಲಿ ವಿವಾಹಕ್ಕೆ ಶುಭವಾಗಿವೆ.



ಜನ್ಮಮಾಸಿ ನಚ ಜನ್ಮಭೇತಿಥೌ ನೈವ ಜನ್ಮದಿವಸೇ ಪಿ ಕಾರಯೇತ್।

ಆದ್ಯಗರ್ಭದುಹಿತುಃ ಸುತಸ್ಯ ವಾ ಜ್ಯೇಷ್ಠಮಾಸಿ ನ ಚ ಜಾತು ಮಂಗಲಮ್॥೫೨॥

ಜನ್ಮಮಾಸ,ಜನ್ಮನಕ್ಷತ್ರ,ಜನ್ಮತಿಥಿ,ಜನ್ಮವಾರ ವಿವಾಹಮಾಡಬಾರದು, ಜ್ಯೇಷ್ಠಪುತ್ರಿ-ಜ್ಯೇಷ್ಠಪುತ್ರರಿಗೆ ಜ್ಯೇಷ್ಠಮಾಸದಲ್ಲಿ ತ್ರಿಜ್ಯೇಷ್ಠವಾಗುವದರಿಂದ ವಿವಾಹವುಪ್ರಶಸ್ತವಲ್ಲ.

ದ್ವೌ ಜ್ಯೇಷ್ಠೌ ಮಧ್ಯಮೌಪ್ರೋಕ್ತೌ ಏಕಜ್ಯೇಷ್ಠಃ ಶುಭಪ್ರದಃ।

ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹಃ ಸರ್ವಸಮ್ಮತಃ॥೫೩॥

ಎರಡು ಜ್ಯೇಷ್ಠಗಳು ಮಧ್ಯಮ, ಏಕಜ್ಯೇಷ್ಠವು ಶುಭಪ್ರದ, ತ್ರಿಜ್ಯೇಷ್ಠಮಾತ್ರ ಕೂಡದು ಎಂದು ವಿವಾಹವಿಷಯದಲ್ಲಿ ಎಲ್ಲರೂ ಒಪ್ಪುವರು.

ಅಜ್ಯೇಷ್ಠಾ ಕನ್ಯಕಾ ಯತ್ರ ಜ್ಯೇಷ್ಠಪುತ್ರೋ ವರೋ ಯದಿ।

ವ್ಯತ್ಯಯೋ ವಾ ತಯೋಸ್ತತ್ರ ಜ್ಯೇಷ್ಠಮಾಸೋ ಶುಭಪ್ರದಃ॥೫೪॥

ಕನ್ಯೆಯು ಜ್ಯೇಷ್ಠಳಾಗದೆ ವರನು ಜ್ಯೇಷ್ಠನಾಗಿದ್ದು ಅಥವಾ ಇದಕ್ಕೆ ವಿಪರೀತವಾಗಿ ವರನು ಜ್ಯೇಷ್ಠನಾಗದೆ ಕನ್ಯೆಯು ಜ್ಯೇಷ್ಠಳಾಗಿದ್ದು ಜ್ಯೇಷ್ಠಮಾಸದಲ್ಲಿ ವಿವಾಹ ಶುಭವೆಂದು ತಿಳಿಯಬೇಕು.

## **ತಿಳಿಯಬೇಕಾದವಿಷಯ**

ದಶವರ್ಷವ್ಯತಿಕ್ರಾಂತಾ ಕನ್ಯಾ ಶುದ್ಧಿವಿವರ್ಜಿತಾ।

ತಸ್ಯಾಸ್ತಾರೇಂದುಲಗ್ನಾನಾಂ ಶುದ್ಧೇ ಪಾಣಿಗ್ರಹೋ ಮತಃ॥೫೫॥

ದ್ವಾದಶಾಬ್ದಪರೇ ಕನ್ಯಾ ಷೋಡಶಾಬ್ದಪರೇ ವರೇ।

ವ್ಯಯವೇದಾಷ್ಟಮೇ ಸೂರ್ಯೇ ಜೀವೇ ಚೈವ ನ ದೋಷಭಾಕ್॥೫೬॥

ಹತ್ತುವರ್ಷಕಳೆದ ಕನ್ಯೆ ಶುದ್ಧಿರಹಿತಳೆಂದು ತಿಳಿಯಬೇಕು. ಅಂತಹಕನ್ಯೆಗೆ ತಾರಾಬಲಚಂದ್ರಬಲ ಲಗ್ನಶುದ್ಧಿಇರಲು ವಿವಾಹ ಮಾಡಬೇಕು. ೧೨ವರ್ಷಕಳೆದ ಕನ್ಯೆ ಮತ್ತು ೧೬ ವರ್ಷಕಳೆದ ವರನಿಗೆ ೮ ಸೂರ್ಯದೋಷ, ೮-೧೨ಗುರುದೋಷ ನೋಡಬೇಕಾಗಿಲ್ಲ

## **ಕುಜದೋಷವಿಚಾರ**

ಲಗ್ನೇವ್ಯಯೋಚ ಪಾತಾಲೇ ಜಾಮಿತ್ರೇ ಚಾಷ್ಟಮೇ ಕುಜೇ।

ಪತ್ನೀ ಹಂತಿ ಸ್ವಭರ್ತಾರಂ ಭರ್ತಾ ಭಾರ್ಯಾಂ ವಿನಾಶಯೇತ್॥೫೭॥

ಲಗ್ನ-೧೨-೪-೭-೮ ಸ್ಥಾನಗಳಲ್ಲಿ ಕುಜನಿದ್ದರೆ ಹಂಡತಿಯು ಗಂಡನನ್ನು-ಗಂಡನು ಹೆಂಡತಿಯನ್ನು ನಾಶಮಾಡುತ್ತಾರೆ

## **ಕುಜದೋಷಾಪವಾದ**

ಜಾಮಿತ್ರೇ ಚ ಯದಾ ಸೌರಿರ್ಲಗ್ನೇ ವಾ ಹಿಬುಕೇಥವಾ।

ನವಮೇ ದ್ವಾದಶೇ ಚೈವ ಭೌಮದೋಷೋ ನವಿದ್ಯತೇ॥೫೮॥

ಕುಜಜೀವಸಮಾಯುಕ್ತೋ ಯುಕ್ತೋವಾ ಕುಜಚಂದ್ರಮಾಃ।

ಚಂದ್ರಃ ಕೇಂದ್ರಗತೋ ವಾಪಿ ತಸ್ಯ ದೋಷೋ ನ ಮಂಗಲೀ॥೯॥

ನಮಂಗಲೀ ಚಂದ್ರಭೃಗೌ ದ್ವಿತೀಯೇ ನಮಂಗಳೀ ಪಶ್ಯತಿ ಜೀವಯಸ್ಯ।

ನಮಂಗಲೀ ಚಂದ್ರಗತಶ್ಚ ಕೇಂದ್ರೇ ನಮಂಗಲೀ ಮಂಗಲರಾಹುಯೋಗೇ॥೧೦॥

ಲಗ್ನ-೭-೪-೮-೧೨ ಈ ಸ್ಥಾನಗಳಲ್ಲಿ ಶನಿ ಇದ್ದರೆ ಕುಜವಿಲ್ಲವೆಂದು ತಿಳಿಯಬೇಕು. ಗುರು-ಕುಜರು ಸೇರಿದ್ದರೆ ಕುಜದೋಷವಿಲ್ಲ. ಚಂದ್ರ-ಕುಜಸೇರಿದ್ದರೂ ಕುಜದೋಷ ವಿಲ್ಲ. ಚಂದ್ರಕೇಂದ್ರದಲ್ಲಿದ್ದರೂ ಕುಜದೋಷವಿಲ್ಲ. ಚಂದ್ರ-ಶುಕ್ರರದ್ವಿತೀಯದಲ್ಲಿ ಕುಜನಿದ್ದರೆ ದೋಷವಿಲ್ಲ. ಕುಜನಿಗೆ ಗುರುದೃಷ್ಟಿ ಇದ್ದರೂ ಕುಜದೋಷವಿಲ್ಲ. ಕುಜ-ರಾಹು ಯೋಗವಿದ್ದರೂ ಕುಜದೋಷವಿಲ್ಲ.

## ವಧೂ-ವರರಪ್ರೀತಿವಿಷಯಗಳು

ವರ್ಣೋವಶ್ಯಂ ತಥಾ ತಾರಾ ಯೋನಿಶ್ಚ ಗ್ರಹಮೈತ್ರಕಮ್।

ಗಣಮೈತ್ರೀ ಭಕೂಟಂ ಚ ನಾಡೀ ಚೈತೇ ಗುಣಾಧಿಕಾಃ॥೧೧॥

೧.ವರ್ಣ.೨.ವಶ್ಯ.೩.ತಾರಾ.೪.ಯೋನಿ.೫.ಗ್ರಹಮೈತ್ರ.೬.ಗಣ.೭.ರಾಶಿಕೂಟ.೮.ನಾಡೀ ಇವು ವಧೂ-ವರರ ನಕ್ಷತ್ರ-ರಾಶಿಗಳನ್ನು ಪರಸ್ಪರಗಣನೆ ಮಾಡಿ ನೋಡಿದಾಗ ಕ್ರಮವಾಗಿ ಗುಣಾಧಿಕಗಳೆಂದು ತಿಳಿಯಬೇಕು.

## ವರ್ಣಕೂಟ

ಮೀನಾಲಿಕರ್ಕಟಾ ವಿಪ್ರಾ ನೃಪಾಃ ಸಿಂಹಾಜಧನ್ವಿನಃ ।

ಕನ್ಯಾನಕ್ರವೃಷಾ ವೈಶ್ಯಾ ಶೂದ್ರ ಯಗ್ಮತುಲಾಘಟಾಃ॥೧೨॥

ಮೀನ-ವೃಶ್ಚಿಕ-ಕರ್ಕಾಟಕಗಳು ಬ್ರಾಹ್ಮಣವರ್ಣ. ಸಿಂಹ,ಮೇಷ, ಧನುಸ್ಸು ಗಳು ಕ್ಷತ್ರಿಯವರ್ಣ. ಕನ್ಯಾ-ಮಕರ-ವೃಷಭಗಳು ವೈಶ್ಯವರ್ಣ. ಮಿಥುನ-ತುಲಾ-ಕುಂಭಗಳು ಶೂದ್ರವರ್ಣಗಳಾಗಿವೆ.

## ವಶ್ಯಕೂಟ

ದ್ವಂದ್ವಚಾಪ ಘಟಕನ್ಯಕಾ ತುಲಾ ಮಾನವಾ ಅಜವೃಷೌ ಚತುಷ್ಪದೌ।

ಕರ್ಕ ಮೀನ ಮಕರಾ ಜಲೋದ್ಭವಾಃ ಕೇಸರೀ ವನಚರಾಲಿ ಕೀಟಕಾಃ॥೧೩॥

ಮಿಥುನ,ಧನುಸ್ಸು,ಕುಂಭ, ಕನ್ಯಾ,ತುಲಾರಾಶಿಗಳು ಮಾನವರಾಶಿಗಳು. ಮೇಷ, ವೃಷಭಗಳು ಚತುಷ್ಪಾದರಾಶಿಗಳು. ಕರ್ಕ,ಮೀನ,ಮಕರರಾಶಿಗಳು ಜಲರಾಶಿಗಳು. ಸಿಂಹವು ವನಚರರಾಶಿ ವೃಶ್ಚಿಕರಾಶಿ ಕೀಟಕರಾಶಿಯಾಗಿದೆ

ಹಿತ್ವಾ ಮೃಗೇಂದ್ರಂ ನರರಾಶಿವಶ್ಯಾಃ ಸರ್ವೇ ತಥೈಷಾಂ ಜಲಜಾಶ್ಚ ಭಕ್ಷ್ಯಾಃ।

ಸರ್ವೇಪಿ ಸಿಂಹಸ್ಯ ವಶೇ ವಿನಾಲಿಂ ಜ್ಞೇಯಂ ನರಾಣಾಂ ವ್ಯವಹಾರತೋನ್ಯತ್ ॥೧೪॥

ಸಿಂಹರಾಶಿಯನ್ನು ಬಿಟ್ಟು ಮಾನವರಾಶಿಗಳಿಗೆ ಎಲ್ಲರಾಶಿಗಳೂ ವಶಗಳಾಗಿವೆ ಮತ್ತು



ಜಲಚರಗಳು ಭಕ್ಷ್ಯಗಳಾಗಿವೆ. ಸಿಂಹರಾಶಿಗೆ ವೃಶ್ಚಿಕರಾಶಿಯೊಂದನ್ನು ಬಿಟ್ಟು ಎಲ್ಲವೂ ವಶಗಳಾಗಿವೆ. ಇನ್ನುಳಿದಂತೆ ಲೋಕವ್ಯವಹಾರದಿಂದ ವಶ-ಭಕ್ಷ್ಯಗಳಾಗಿ ತಿಳಿಯಬೇಕು.

ವೈರಭಕ್ಷ್ಯೇ ಗುಣಾಭಾವೋ ದ್ವಯೋಃ ಸಾಮ್ಯೇ ಗುಣದ್ವಯಮ್।

ವಶ್ಯವೈರೇ ಗುಣಶ್ಚೈಕೋ ವಶ್ಯಭಕ್ಷೇ ಗುಣಾರ್ಧಕಮ್॥೧೫॥

ವೈರಭಕ್ಷ್ಯವಾಗಿದ್ದರೆ ಗುಣವಿಲ್ಲ. ಎರಡೂ ಸಮವಾಗಿದ್ದರೆ ಎರಡುಗುಣ. ವಶ್ಯ-ವೈರವಾದರೆ ಒಂದುಗುಣ. ವಶ-ಭಕ್ಷಗಳಾದರೆ ಅರ್ಧಗುಣವೆಂದು ತಿಳಿಯಬೇಕು.

## ತಾರಾಕೂಟ

ಕನ್ಯಾರ್ಕ್ಷಂ ವರಭಂ ಯಾವತ್ ಕನ್ಯಾಭಂ ವರಭಾದಪಿ।

ಗಣಯೇನ್ನವಭಿಃ ಶೇಷೇ ತ್ರಿಷ್ವದ್ರಿಭಮಸತ್ ಸ್ಮೃತಮ್॥೧೬॥

ಕನ್ಯಾನಕ್ಷತ್ರದಿಂದ ವರನನಕ್ಷತ್ರವರೆಗೂ ಮತ್ತು ವರನ ನಕ್ಷತ್ರದಿಂದ ಕನ್ಯಾನಕ್ಷತ್ರದವರೆಗೂ ಎಣಿಸಿ ಒಂಬತ್ತರಿಂದ ಭಾಗಿಸಲು ಶೇಷವು (೩-೫-೭) ಬಂದರೆ ಶುಭವಲ್ಲ

ಏಕತೋ ಲಭ್ಯತೇ ತಾರಾ ಶುಭಾ ಚೈವಾಶುಭಾನ್ಯತಃ।

ತದಾ ಸಾರ್ಧೋ ಗುಣಶ್ಚೈಕಸ್ತಾರಾಶುದ್ಧೌ ಮಿಥಸ್ತ್ರಯಃ।

ಉಭಯೋರ್ನ ಶುಭಾ ತಾರಾ ತದಾ ಶೂನ್ಯಂ ಸಮಾದಿಶೇತ್॥೧೭॥

ಒಬ್ಬರದು ಶುಭವಾಗಿ ಇನೊಬ್ಬರದು ಅಶುಭವಾದರೆ ಒಂದೂವರೆ ಗುಣ. ಎರಡೂ ಶುಭವಾದರೆ ಮೂರುಗುಣ. ಎರಡೂ ಅಶುಭವಾದರೆ ಗುಣವಿಲ್ಲ ತಿಳಿಯಬೇಕು.

## ಯೋನಿಕೂಟ

ಅಶ್ವಿನೀಶತತಾರಾಶ್ವೌ ಭರಣೀ ರೇವತೀ ಗಜೌ।

ಕೃತ್ತಿಕಾ ಪುಷ್ಯಭಂ ಛಾಗೌ ರೋಹಿಣೀಂದೌ ಭುಜಂಗಮೌ॥೧೮॥

ಮೂಲಾರ್ದ್ರೇತು ತಥಾ ಶ್ವಾನೌ ಮಖಾಪೂರ್ವಾ ಚ ಮೂಷಿಕೌ।

ಸಾರ್ಪಾದಿತ್ಯೇ ಚ ಮಾರ್ಜಾರೌ ಸ್ವಾತೀಹಸ್ತಾಚ ಮಾಹಿಷೌ॥೧೯॥

ವಿಶಾಖಾಚಿತ್ತಭೇ ವ್ಯಾಘ್ರೌ ಮೃಗೌ ಜ್ಯೇಷ್ಠಾನುರಾಧಕೌ।

ಅಭಿಜಿಚ್ಛ್ರೋತ್ತರಾಷಾಢೌ ನಕುಲೌ ಪರಿಕೀರ್ತಿತೌ॥೨೦॥

ಉತ್ತರೋತ್ತರಾಭಾದ್ರೌತು ಗೌವಾಚ ಪರಿಕೀರ್ತಿತೌ।

ಪೂರ್ವಾಭಾದ್ರ ವಸೂಸಿಂಹೌ ಪೂರ್ವಾಷಾಢ ಹರಿಃಕಪಿಃ॥೨೧॥

ಯೋನಯಃ ಕಥಿತಾ ಭಾನಾಂ ವೈರಮೈತ್ರೀ ವಿಚಾರಯೇತ್॥

ಅಶ್ವಿನೀ-ಶತತಾಭಿಷ ಅಶ್ವ ಭರಣೀ-ರೇವತೀ ಗಜ. ಕೃತ್ತಿಕಾ-ಪುಷ್ಯ ಮೇಕೆ. ರೋಹಿಣೀ-ಮೃಗಶಿರ ಸರ್ಪ. ಮೂಲಾ-ಆದ್ರ್ರಾ ಶ್ವಾನ. ಮಖಾ-ಪೂರ್ವಾ ಮೂಷಿಕ. ಆಶ್ಲೇಷ-

ಪುನರ್ವಸು ಮಾರ್ಜಾರ. ಸ್ವಾತೀ–ಹಸ್ತಾ ಮಹಿಷ. ವಿಶಾಖಾ–ಚಿತ್ತ ವ್ಯಾಘ್ರ. ಜ್ಯೇಷ್ಠ–ಅನುರಾಧ ಜಿಂಕೇ. ಅಭಿಜಿತ್–ಉತ್ತರಾಷಾಢ ಮುಂಗುಸಿ. ಉತ್ತರಾ–ಉತ್ತರಾಭಾದ್ರ ಗೋ. ಪೂರ್ವಾಭಾದ್ರ–ಧನಿಷ್ಟ ಸಿಂಹ. ಪೂರ್ವಾಷಾಢ–ಶ್ರವಣ ಕಪಿ ಈ ರೀತಿ ನಕ್ಷತ್ರಗಳು ಯೋನಿಗಳನ್ನು ತಿಳಿಯಬೇಕು.

ಗೋವ್ಯಾಘ್ರಂ ಗಜಸಿಂಹಮಶ್ವಮಹಿಷಂ ಶ್ವೈಣಂ ಚ ಬಭ್ರೂರಗಂ
ವೈರಂ ವಾನರಮೇಷಯೋಶ್ಚ ಸುಮಹತ್ತದ್ವದ್ವಿಡಾಲೋದ್ದುರಮ್।
ಲೋಕಾನಾಂ ವ್ಯವಹಾರತೋಽನ್ಯದಪಿ ಚ ಜ್ಞಾತ್ವಾ ಪ್ರಯತ್ನಾದಿದಂ
ದಂಪತ್ಯೋರ್ನೃಪಭೃತ್ಯಯೋರಪಿಸದಾ ವರ್ಜ್ಯ ಶುಭಸ್ಯಾರ್ಥಿಭಿಃ ॥೭೨॥

ಗೋ–ವ್ಯಾಘ್ರ, ಗಜ–ಸಿಂಹ,ಅಶ್ವ–ಮಹಿಷ, ಶ್ವಾನ–ಜಿಂಕೆ, ಹಾವು–ಮುಂಗುಸಿ, ಕಪಿ–ಮೇಕೆ, ಮಾರ್ಜಾರ–ಮೂಷಿಕ ಇವು ಪರಸ್ಪರ ವೈರಯೋನಿಗಳಾಗಿವೆ. ಲೋಕವ್ಯವಹಾರದಿಂದ ಇತರೆ ವೈರವಿಷಯಗಳನ್ನು ತಿಳಿದು ಪ್ರಯತ್ನಪೂರ್ವಕವಾಗಿ ದಂಪತಿಗಳಿಗೂ,ಸ್ವಾಮಿ–ಸೇವಕರಿಗೂ ಶುಭಫಲವನ್ನು ಹೊಂದಲು ಇಚ್ಛಿಸುವವನು ವೈರಯೋನಿಯನ್ನು ತ್ಯಜಿಸಬೇಕು.

ಮಹಾವೈರೇ ಚ ವೈರೇ ಚ ಸ್ವಸ್ವಭಾವೇ ಯಥಾಕ್ರಮಾತ್।
ಮೈತ್ರೇ ಚೈವಾತಿಮೈತ್ರ್ಯೇ ಚ ಖೇನ್ದುದ್ವಿತ್ರಿಚತುರ್ಗುಣಾ ॥೭೩॥

ವಧೂವರರ ನಕ್ಷತ್ರಗಳು ಪರಸ್ಪರಮಹಾವೈರವಾದರೆ ಗುಣವಿಲ್ಲ, ವೈರವಾದರೆ ಒಂದುಗುಣ, ಒಂದೇಸ್ವಭಾವವಾದರೆ ಎರಡುಗುಣ, ಎರಡೂ ಮಿತ್ರವಾದರೆ ಮೂರುಗುಣ. ಅತಿಮಿತ್ರ್ಯವಾದರೆ ೪ಗುಣಗಳೆಂದು ತಿಳಿಯಬೇಕು.

## ಗ್ರಹಮೈತ್ರಕೂಟ

ಮೇಷವೃಶ್ಚಿಕಯೋರ್ಭೌಮಃ ಶುಕ್ರೋ ವೃಷತುಲಾದಿಪಃ ।
ಕನ್ಯಾಮಿಥುನಯೋಃ ಸೌಮ್ಯೋ ಗುರುಸ್ತು ಧನುಮೀನಯೋಃ॥೭೪॥
ಶನಿರ್ನಕ್ರಸ್ಯ ಕುಮ್ಭಸ್ಯ ಕರ್ಕಸ್ಯೈವ ತು ಚನ್ದ್ರಮಾಃ ।
ಸಿಂಹಸ್ಯಾಧಿಪತಿಃ ಸೂರ್ಯಃ ಕಥಿತೋ ಗಣಕೈಃಕ್ರಮಾತ್ ॥೭೫॥

ಮೇಷ–ವೃಶ್ಚಿಕಗಳಿಗೆ ಕುಜ, ವೃಷಭ–ತುಲಾಗಳಿಗೆ ಶುಕ್ರ, ಕನ್ಯಾ–ಮಿಥುನಗಳಿಗೆ ಬುಧ, ಧನುಸ್ಸು–ಮೀನಗಳಿಗೆ ಗುರು,ಮಕರ–ಕುಂಭಗಳಿಗೆ ಶನಿ. ಕರ್ಕಾಟಕಕ್ಕೆ ಚಂದ್ರ ಸಿಂಹಕ್ಕೆ ಸೂರ್ಯ ಹೀಗೆರಾಶ್ಯಾಧಿಪತಿಗಳನ್ನು ತಿಳಿಯಬೇಕು.

ಶತ್ರೂ ಮನ್ದಸಿತೌ ಸಮಶ್ಚ ಶಶಿಜೋ ಮಿತ್ರಾಣಿ ಶೇಷಾ ರವೇ
ಸ್ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚ ಸುಹೃದೌ ಶೇಷಾಃ ಸಮಾಃ ಶೀತಗೋಃ ।
ಜೀವೇನ್ದೂಷ್ಣಕರಾಃ ಕುಜಸ್ಯಸುಹೃದಾ ಜ್ಞೋರಿಃ ಸಿತಾರ್ಕೀ ಸಮೌ
ಮಿತ್ರೇ ಸೂರ್ಯಸಿತೌ ವುಧಸ್ಯ ಹಿಮಗುಃ ಶತ್ರುಃ ಸಪಾಶ್ಚಾಪರೇ ॥೭೬॥



ಸೂರೇಃ ಸೌಮ್ಯಸಿತಾವರೀ ರವಿಸುತೋ ಮಧ್ಯೇಪರೇ ತ್ವನ್ಯಥಾ
ಸೌಮ್ಯಾರ್ಕೀ ಸುಹೃದೌ ಸಮೌ ಕುಜಗುರೂ ಶುಕ್ರಸ್ಯ ಶೇಷಾವರೀ।
ಶುಕ್ರಜ್ಞೌ ಸುಹೃದೌ ಸಮಃ ಸುರಗುರುಃ ಸೌರಸ್ಯ ತ್ವನ್ಯೇ ರವೇರ್ಯೇ ಪ್ರೋಕ್ತಾಃ
ಸುಹೃದಸ್ತ್ರಿಕೋಣಭವನಾತ್ತೇಮೀ ಮಯಾ ಕೀರ್ತಿತಾಃ ॥೭೭॥

ಇದನ್ನು ಈ ಎರಡುಶ್ಲೋಕಗಳ ಅರ್ಥವನ್ನು ಕೆಳಗಿನ ಪಟ್ಟಿಯಿಂದ ತಿಳಿಯಿರಿ.

## ಗ್ರಹಮೈತ್ರಪಟ್ಟಿ

| ಗ್ರಹ | ಮಿತ್ರ | ಸಮ | ಶತ್ರು |
|---|---|---|---|
| ರವಿ | ಚಂ,ಕು,ಗು ಬು | | ಶ,ಶು |
| ಚಂದ್ರ | ರ,ಬು | ಕು,ಗು,ಶು,ಶ | --- |
| ಕುಜ | ಗು,ಚಂ,ರ ಶು,ಶ | | ಬು |
| ಬುಧ | ರ,ಶು | ಕುಗುಶ | ಚಂ |
| ಗುರು | ರಚಂಕು | ಶ | ಬುಶು |
| ಶುಕ್ರ | ಬುಶ | ಗುಶು | ರಚಂ |
| ಶನಿ | ಬುಶು | ಗು | ರಚಂಕು |

## ಗಣಕೂಟ

ಅನುರಾಧಾ ಮೃಗಾಶ್ವಿಸ್ತು ಶ್ರವಣೋದಿತಿಪುಷ್ಯಕೇ ।
ಸ್ವಾತೀ ಹಸ್ತೋ ರೇವತೀ ಚ ನವ ದೇವ ಗಣಾಃ ಸ್ಮೃತಾಃ ॥೭೮॥
ಪೂರ್ವಾತ್ರಯಂ ರೋಹಿಣೀ ಚ ಉತ್ತರಾತ್ರಯಮೇವ ಚ ।
ಆರ್ದ್ರಾ ತು ಭರಣೀ ಚೈವ ನವೈತೇ ಮಾನುಷಾ ಗಣಾಃ ॥೭೯॥
ಆಶ್ಲೇಷಾ ಶತಭಂ ಮೂಲಂ ವಿಶಾಖಾಕೃತ್ತಿಕಾ ಮಘಾ ।
ಚಿತ್ರಾ ಜ್ಯೇಷ್ಠಾ ಧನಿಷ್ಠಾ ಚ ನವೈತೇ ರಾಕ್ಷಸಾ ಗಣಾಃ॥೮೦॥

ಅನುರಾಧಾ,ಮೃಗಶಿರ,ಅಶ್ವಿನಿ,ಶ್ರವಣಾ,ಪುನರ್ವಸು,ಪುಷ್ಯ, ಸ್ವಾತೀ,ಹಸ್ತಾ,ರೇವತೀ ಈ ಒಂಬತ್ತು ನಕ್ಷತ್ರಗಳು ದೇವಗಣ. ಪೂರ್ವಾತ್ರಯ,ರೋಹಿಣೀ,ಉತ್ತರಾತ್ರಯ, ಆರ್ದ್ರಾ, ಭರಣೀ ಈ ಒಂಬತ್ತು ನಕ್ಷತ್ರಗಳು ಮನುಷ್ಯಗಣ. ಆಶ್ಲೇಷಾ,ಶತಭಿಷ, ಮೂಲಾ,ವಿಶಾಖಾ,ಕೃತ್ತಿಕಾ,ಮಘಾ,ಚಿತ್ರಾ, ಜ್ಯೇಷ್ಠಾ, ಧನಿಷ್ಠಾ, ಈ ಒಂಬತ್ತು ನಕ್ಷತ್ರಗಳು ರಾಕ್ಷಸಗಣ.

## ರಾಶಿಕೂಟ

ಚತುರ್ಥದಶಮೇ ಮಿತ್ರಂ ತೃತೀಯೈಕಾದಶಃ ಶುಭಃ ।
ಉಭಯೋಃ ಸಪ್ತಮಃ ಸಾಮ್ಯಮೇಕರ್ಕ್ಷ ಶುಭಮುಚ್ಯತೇ ॥೮೧॥

ಷಷ್ಠಾಷ್ಟಕೇ ಭವೇನ್ಮೃತ್ಯುರ್ನವಮೇ ಪಂಚಮೇ ಕಲಿಃ ।

ದ್ವಿರ್ದ್ವಾದಶ ಚ ದಾರಿದ್ರ್ಯಂ ಕನ್ಯರ್ಕ್ಷಾದ್ಗಣ್ಯತೇ ಕ್ರಮಾತ್ ॥೮೨॥

೪ ವಧೂ–೧೦ವರ ಆದರೆ ರಾಶಿಮೈತ್ರಿ, ೩ ವಧೂ–೧೧ವರ ಆದರೆ ಶುಭ, ಇಬ್ಬರದೂ ಪರಸ್ಪರ ಸಪ್ತಮಾವಾದರೆ ಶುಭ.

ವಿಷಮಾತ್ಕನ್ಯಕಾರಾಶೇಃ ಷಷ್ಠಂ ಷಷ್ಠಾಷ್ಟಕಂ ತ್ಯಜೇತ್ ।

ಸಮಾತ್ ಷಷ್ಠಂ ಶುಭಂ ಜ್ಞೇಯಂ ವಿಪರೀತಂ ನ ಶೋಭನಮ್ ॥೮೩॥

ವಿಷಮವಾದ ಕನ್ಯೆಯರಾಶಿಯಿಂದ ಷಷ್ಟರಾಶಿ ವರನದಾದರೆ ಶುಭವಲ್ಲ. ಸಮವಾದ ಕನ್ಯೆಯರಾಶಿಯಿಂದ ಷಷ್ಟರಾಶಿ ವರನದಾದರೆ ಶುಭವೆಂದು ತಿಳಿಯಬೇಕು.

ಕನ್ಯಾಮೇಷೌ ವೃಷಚಾಪೌ ಕಾಮಾಲೀ ಘಟಕರ್ಕಟೇ।

ಮೃಗಸಿಂಹೇ ತುಲಾಮೀನೇ ತ್ಯಜೇನ್ಮೃತ್ಯುಷಡಷ್ಟಕಮ್॥೮೪॥

ಕನ್ಯಾ–ಮೇಷೌ,ವೃಷಭ–ಧನುಸ್ಸು, ಮಿಥುನ–ವೃಶ್ಚಿಕ, ಕುಂಭ–ಕರ್ಕ,ಮಕರ–ಸಿಂಹ, ತುಲಾ–ಮೀನಗಳು ಪರಸ್ಪರ ವಧೂ–ವರರದಾದರೆ ಮೃತ್ಯುಷಡಷ್ಟಕವಾಗುವುದರಿಂದ ಬಿಡುವುದು ಒಳ್ಳೆಯದು.

ಮೇಷಾಲೀ ಮಕರೇ ಯುಗ್ಮೇ ಕನ್ಯಾಕುಂಭೌ ತುಲಾವೃಷೌ।

ಸಿಂಹೇಮೀನೇ ಧನುಃ ಕರ್ಕೇ ಷಟ್ಕಾಷ್ಟಂ ಪ್ರೀತಿವರ್ಧಕಮ್॥೮೫॥

ಮೇಷ–ವೃಶ್ಚಿಕ, ಮಕರ–ಮಿಥುನ, ಕನ್ಯಾ–ಕುಂಭ, ತುಲಾ–ವೃಷಭ, ಸಿಂಹ–ಮೀನ, ಧನುಸ್ಸು–ಕರ್ಕಗಳು ಪರಸ್ಪರ ವಧೂ–ವರರದಾದರೆ ಪ್ರೀತಿಷಡಷ್ಟಕವಾಗುವುದು.

ವರಸ್ಯ ಪಂಚಮೇ ಕನ್ಯಾ ಕನ್ಯಾಯಾಂ ನವಮೇ ವರಃ।

ಏತತ್ರಿಕೋಣಕಂ ಗ್ರಾಹ್ಯಂ ಪುತ್ರಪೌತ್ರಸುಖಾವಹಮ್॥೮೬॥

ವರನಿಂದ ೫ರಲ್ಲಿ ವಧೂ, ವಧುವಿನ ೯ರಲ್ಲಿ ವರವಾದ ಶುಭತ್ರಿಕೋಣ ವಾಗುವುದು ಪುತ್ರಪೌತ್ರವರ್ಧಕವಾಗಿ ಶುಭವಾದ್ದರಿಂದ ಗ್ರಾಹ್ಯವಾಗಿದೆ.

**ನಾಡೀಕೂಟ**

ಅಶ್ವಿನ್ಯಾರ್ದ್ರಾ ಶತಭಿಷಕ ಜ್ಯೇಷ್ಠಾ ಹಸ್ತಃ ಪುನರ್ವಸುಃ।

ಪೂರ್ವಾಭಾದ್ರಾ ಮೂಲಂ ಚೋತ್ತರಾ ತ್ಯಾದ್ಯನಾಡಿಕಾ॥೮೭॥

ಅಶ್ವಿನೀ,ಆರ್ದ್ರಾ, ಶತಭಿಷ,ಜ್ಯೇಷ್ಠಾ, ಹಸ್ತ,ಪುನರ್ವಸು,ಪೂರ್ವಾಭಾದ್ರಾ, ಮೂಲ,ಉತ್ತರಾ, ಇವು ಆದಿನಾಡಿ.

ಪೂರ್ವಾಷಾಢಾನುರಾಧಾ ಚ ಧನಿಷ್ಠಾಭರಣೀಮೃಗಾಃ।

ಪೂರ್ವಾಫಾಲ್ಗುನಿಕಾ ಚಿತ್ರಾ ಪುಷ್ಯೋಭಾ ಮಧ್ಯನಾಡಿಕಾಃ॥೯೦॥

ಪೂರ್ವಾಷಾಢಾ,ಅನುರಾಧಾ,ಧನಿಷ್ಠಾ,ಭರಣೀ,ಮೃಗಶಿರ, ಪೂರ್ವಾಫಲ್ಗುನೀ,



ಚಿತ್ರಾ,ಪುಷ್ಯಾ,ಉತ್ತರಾಭಾದ್ರ ಮಧ್ಯನಾಡಿ.

ಕೃತ್ತಿಕಾ ರೋಹಿಣೀ ಸ್ವಾತೀ ಮಘಾಶ್ಲೇಷಾಚ ರೇವತೀ।

ಶ್ರವಣಶ್ಚೋತ್ತರಾಷಾಢಾ ವಿಶಾಖಾ ತ್ವಂತ್ಯನಾಡಿಕಾಃ॥೮೯॥

ಕೃತ್ತಿಕಾ,ರೋಹಿಣೀ,ಸ್ವಾತೀ,ಮಘಾ,ಆಶ್ಲೇಷಾ,ರೇವತೀ,ಶ್ರವಣ,ಉತ್ತರಾಷಾಢಾ,ವಿಶಾಖಾ ಇವು ಅಂತ್ಯನಾಡಿ.

ಅಗ್ರನಾಡೀ ವ್ಯಧೇಭರ್ತಾ ಮಧ್ಯನಾಡೀ ವ್ಯಧೇ ದ್ವಯಮ್।

ಪೃಷ್ಟನಾಡೀ ವ್ಯಧೇ ಕನ್ಯಾ ಮ್ರಿಯತೇ ನಾತ್ರಸಂಶಯಃ॥೯೦॥

ವಧೂವರರು ಇಬ್ಬರೂ ಪ್ರಥಮಪಾರ್ಶ್ವನಾಡಿಯಾದರೆ ಗಂಡನಿಗೂ, ಮಧ್ಯನಾಡಿ ಏಕನಾಡಿಯಾದರೆ ಇಬ್ಬರಿಗೂ, ಅಂತ್ಯನಾಡಿ ಏಕನಾಡಿಯಾದರೆ ಹೆಣ್ಣಿಗೂ ನಾಶವೆಂದು ಹೇಳಲ್ಪಟ್ಟಿದೆ.

ಕನ್ಯರ್ಕ್ಷಾದ್ವರನಕ್ಷತ್ರಮಶುಭಂ ನಿಕಟೇ ಯದಿ।

ವರರ್ಕ್ಷಾದ್ದೂರಗಂ ತ್ರ್ಯರ್ಕ್ಷಂ ದೇವಕ್ಯೈರ್ಲಕ್ಯೇ ಶುಭಂ ಭವೇತ್॥೯೧॥

ವಧುವಿನ ನಕ್ಷತ್ರದಿಂದ ವರನಕ್ಷತ್ರವು ಹತ್ತಿರವಿದ್ದರೆ ಅಶುಭವು. ವರನ ನಕ್ಷತ್ರದಿಂದ ವಧುವಿನ ನಕ್ಷತ್ರವು ದೂರವಿದ್ದರೂ ನಕ್ಷತ್ರವು ಒಂದೇ ಆಗಿ ರಾಶಿಬೇರೆ ಆದರೂ, ಇಬ್ಬರ ರಾಶ್ಯಾಧಿಪತಿ ಒಬ್ಬನೇ ಆದರೂ ಶುಭಫಲ ವೆಂದು ತಿಳಿಯಬೇಕು.

ರಾಶ್ಯೈಲಕ್ಯಶ್ಚೇದ್ಭಿನ್ನಮೃಕ್ಷಂ ದ್ವಯೋಃ ಸ್ಯಾನ್ನಕ್ಷತ್ರೈಕ್ಯೇ ರಾಶಿಯುಗ್ಮಂ ತಥೈವ। ನಾಡೀದೋಷೋ ನ ಗಣಾನಾಂ ಚ ದೋಷೋ ನಕ್ಷತ್ರೈಕ್ಯೇ ಪದಭೇದೇ ಶುಭಂ ಸ್ಯಾತ್॥೯೨॥

ಇಬ್ಬರ ರಾಶಿಯ ಅಧಿಪತಿಯು ಒಬ್ಬನೇ ಆಗಿ ನಕ್ಷತ್ರ ಒಂದೇ ಆದರೂ, ಇಬ್ಬರ ರಾಶಿಯು ಒಂದೇ ಆದರೂ ನಕ್ಷತ್ರಬೇರೆ ಆದರೂ ನಾಡಿ ದೋಷವಿಲ್ಲ. ಇಬ್ಬರ ನಕ್ಷತ್ರವೂ ಒಂದೇ ಆಗಿ ಪಾದ ಭೇದವಾದರೆ ನಾಡೀ ಮತ್ತು ಗಣದೋಷವಿಲ್ಲ. ಈ ನಾಡೀ ಕೂಟಕ್ಕೆ ೮ ಗುಣಗಳು. ಇಬ್ಬರ ನಾಡಿಯೂ ಒಂದೇ ಆದರೆ ಗುಣವಿಲ್ಲ. ಬಿನ್ನ ನಾಡಿಯಾದರೆ ೮ ಗುಣ.

ಅಕಚಟತಪಯಶವರ್ಗಾಃಖಗೇಶಮಾರ್ಜಾರಸಿಂಹಶುನಾಮ್।

ಸರ್ಪಾಖುಮೃಗಾವೀನಾಂ ನಿಜಪಂಚಮವೈರಿಣಾಮಷ್ಟೌ॥೯೩॥

ಸ್ವವರ್ಗೇ ಪರಮಾ ಪ್ರೀತಿರ್ಮಿತ್ರೇ ಪ್ರೀತಿಶ್ಚ ಕಥ್ಯತೇ।

ಉದಾಸೀನೇ ಪ್ರೀತಿರಲ್ಪಾ ಶತ್ರುವರ್ಗೇ ಮೃತಿಸ್ತಥಾ॥೯೪॥

ಅವರ್ಗಕ್ಕೆ ಗರುಡ, ಕವರ್ಗಕ್ಕೆ ಬೆಕ್ಕು,ಚವರ್ಗಕ್ಕೆ ಸಿಂಹ,ಟವರ್ಗಕ್ಕೆಶುನಕ, ತವರ್ಗಕ್ಕೆ ಸರ್ಪ,ಪವರ್ಗಕ್ಕೆ ಇಲಿ,ಯವರ್ಗಕ್ಕೆ ಮೃಗ, ಶವರ್ಗಕ್ಕೆ ಮೇಕೆ, ಈ ಎಂಟುವರ್ಗಗಳಲ್ಲಿ ತಮ್ಮಿಂದ ೫ನೇ ವರ್ಗವು ವೈರಿವರ್ಗವಾಗಿದೆ. ಸ್ವವರ್ಗವಾದರೆ ಪರಮಪ್ರೀತಿ, ಮಿತ್ರವರ್ಗವಾದರೆ ಪ್ರೀತಿ, ಉದಾಸೀನವರ್ಗವಾದರೆ ಅಲ್ಪಪ್ರೀತಿ, ಶತ್ರುವರ್ಗವಾದರೆ ಅರಿಷ್ಟವೆಂದು ತಿಳಿಯಬೇಕು.

ನ ವರ್ಗವರ್ಣೌ ನಗಣೋ ನ ಯೋನಿರ್ದ್ವಿರ್ದ್ವಾದಶೇ ನೈವ ಷಡಷ್ಟಕೇ ಚ।

ತಾರಾವಿರುದ್ಧೇ ನವಪಂಚಮಸ್ಯ ಮೈತ್ರೀ ಯದಾ ಸ್ಯಾಚ್ಛುಭದೋ ವಿವಾಹಃ॥೯೫॥

ವರ್ಗ,ವರ್ಣ,ಗಣ,ಯೋನಿ,ದ್ವಿರ್ದ್ವಾದಶ,ಷಡಷ್ಟಕ,ತಾರಾವಿರುದ್ಧ, ನವಪಂಚಮ, ಗ್ರಹಮೈತ್ರೀ, ಇತ್ಯಾದಿ ದೋಷದಿಂದ ಕೂಡಿದ್ದರೂ ವಧೂ–ವರರ ಈ ಪ್ರಾಣಿವರ್ಗಗಳು ಶುಭಮೈತ್ರಿ ಹೊಂದಿದ್ದರೆ ವಿವಾಹಕ್ಕೆ ಶುಭವಾಗಿದೆ. ಈ ಪ್ರಕಾರವಾಗಿ ವಧೂ–ವರರ ಪ್ರೀತಿಯನ್ನು ಅಳೆಯಬೇಕು.

ಗುಣೈಃ ಷೋಡಶಭಿರ್ನಿಂದ್ಯಾ ಮಧ್ಯಮಾ ವಿಂಶತಿಸ್ತಥಾ।

ಶ್ರೇಷ್ಠಂ ತ್ರಿಂಶದ್ಗುಣಂ ಯಾವತ್ಪರತಸ್ತೂತ್ತಮೋತ್ತಮಮ್॥

ಸದ್ಭಕೂಟ ಇತಿ ಜ್ಞೇಯಂ ದುಷ್ಕೂಟೇಥ ಕಥ್ಯತೇ॥೯೬॥

೧೬ಗುಣಗಳು ಬಂದರೆ ಉಪಯೋಗವಿಲ್ಲ,೨೦ ಗುಣಗಳುಬಂದರೆ ಮಧ್ಯಮ, ೩೦ಗುಣಗಳು ಬಂದರೆ ಶ್ರೇಷ್ಠ, ೩೦ಕ್ಕಿಂತ ಹೆಚ್ಚುಬಂದರೆ ಉತ್ತಮೋತ್ತಮ, ಸತ್ ಕೂಟದಲ್ಲಿ ಈ ರೀತಿ ತಿಳಿಯಬೇಕು. ದುಷ್ಕೂಟವನ್ನು ಮುಂದೆ ಹೇಳುತ್ತೇವೆ.

ನಿಂದ್ಯಗುಣೈರ್ವಿಂಶತಿರ್ಭಿರ್ಮಧ್ಯಂಬಾಣಾಧಿಕೈರ್ಮತಮ್।

ತತ್ಪರೈಃ ಪಂಚಭಿಃ ಶ್ರೇಷ್ಠಂ ತತಃ ಶ್ರೇಷ್ಠತರಂ ಗುಣೈಃ॥೯೭॥

ತಥಾ ಚೈಕೈಕ ವೃದ್ಧಿತೋ ವರ್ಣಾದೀನಾಂ ಗುಣಾಃ ಕ್ರಮಾತ್।

ವಿವಾಹಃ ಶುಭದಸ್ತೇಷಾಂ ಗುಣೇ ತ್ವಷ್ಟಾದಶಾಧಿಕೇ॥೯೮॥

ದುಷ್ಕೂಟದಲ್ಲಿ ೨೦ಗುಣಗಳು ಬಂದರೆ ಉಪಯೋಗವಿಲ್ಲ, ೨೫ಗುಣಗಳು ಬಂದರೆ ಮಧ್ಯಮ, ೩೦ ಬಂದರೆ ಶ್ರೇಷ್ಠ, ೩೦ಕ್ಕೂ ಅಧಿಕವಾದರೆ ಶ್ರೇಷ್ಠತರವೆಂದು ತಿಳಿಯಬೇಕು. ವರ್ಣಾದಿ ಕೂಟಗಳಿಗೆ ೧–೧ವೃದ್ಧಿಯಾಗಿಕ್ರಮವಾಗಿ ನಾಡಿಕೂಟದವರೆಗೆ ಎಣಿಸಿಕೊಳ್ಳಬೇಕು. ೧೮ಗುಣಗಳಿಗಿಂತ ಅಧಿಕ ಬಂದರೆ ವಿವಾಹ ಶುಭ.

ನಾಡೀದೋಷಸ್ತು ವಿಪ್ರಾಣಾಂ ವರ್ಣದೋಷಸ್ತು ಕ್ಷತ್ರಿಯಃ।

ಗಣದೋಷಸ್ತು ವೈಶ್ಯೇಷು ಯೋನಿದೋಷಸ್ತು ಪಾದಜಾನ್॥೯೯॥

ಬ್ರಾಹ್ಮಣರಿಗೆ ನಾಡೀದೋಷ,ಕ್ಷತ್ರಿಯರಿಗೆ ವರ್ಣದೋಷ, ವೈಶ್ಯರಿಗೆ ಗಣದೋಷ, ಶೂದ್ರರಿಗೆ ಯೋನಿದೋಷ ವಿಶೇಷವಾಗಿ ನೋಡಬೇಕು.

ಗಣದೋಷೋ ಯೋನಿದೋಷೋ ವರ್ಣದೋಷೋ ಷಡಷ್ಟಕಮ್।

ಚತ್ವಾರೋ ನೈವ ದುಷ್ಯಂತಿ ರಾಶಿಮೈತ್ರೀ ಯದಾ ಭವೇತ್॥೧೦೦॥

ಗಣದೋಷ,ಯೋನಿದೋಷ,ವರ್ಣದೋಷ,ಷಡಷ್ಟಕದೋಷ ಈ ೪ ದೋಷಗಳು ವಧೂವರರಿಗೆ ರಾಶಿಮೈತ್ರೀ ಇದ್ದಲ್ಲಿ ದೋಷಕಾರಿ ಯಾಗುವುದಿಲ್ಲ

ಮೈತ್ರ್ಯಾಂ ರಾಶಿಸ್ವಾಮಿನೋರಂಶನಾಥದ್ವಂದ್ವಸ್ಯಾಪಿ ಸ್ಯಾದ್ಗುಣಾನಾಂ ನ ದೋಷಃ।



ಖೇಟಾರಿತ್ವಂ ರಾಶಯೇಸದ್ಭಕೂಟಂ ಖೇಟಂ ಪ್ರೀತಿಶ್ಚಾಪಿ ದುಷ್ಟ ಭಕೂಟಮ್॥೧॥

ವಧೂ–ವರರ ರಾಶ್ಯಾಧಿಪತಿ ಅಥವಾ ನವಾಂಶಾಧಿಪತಿ ಮಿತ್ರರಾಗಿದ್ದರೆ ಕೂಟಗಳುದೋಷಗಳು ದೂರವಾಗುತ್ತವೆ. ರಾಶ್ಯಾಧಿಪತಿ ಮೈತ್ರಿ ಇಲ್ಲದೆ ಶತ್ರುತ್ವವಿದ್ದ ಪಕ್ಷದಲ್ಲಿ ಸತ್ಕೂಟ ವಾಗಿದ್ದರೂ ಅದರಗುಣಗಳನ್ನು ನಾಶ ಮಾಡುತ್ತಾರೆ. ರಾಶ್ಯಾಧಿಪತಿ ಅಥವಾ ನವಾಂಶಾಧಿಪತಿ ಮಿತ್ರರಾಗಿದ್ದರೆ ದುಷ್ಟಭಕೂಟಗಳಿದ್ದರೂ ಶುಭವಾಗುವುದೆಂದೇ ಹೇಳಬೇಕು.

ಷಡಷ್ಟಕೇ ಗೋಮಿಥುನಂ ಪ್ರದದ್ಯಾತ್ ಕಾಂಸ್ಯಂ ಸರೂಪ್ಯ ನವಪಂಚಮೇ ಚ।

ನಾಡ್ಯಾಂ ಸುಧೇನ್ವನ್ನಸುವರ್ಣವಸ್ತ್ರಂ ದ್ವಿರ್ದ್ವಾದಶೇ ಬ್ರಾಹ್ಮಣತರ್ಪಣಂ ಚ॥೩॥

ಷಡಷ್ಟಕದಲ್ಲಿ ಎರಡುಗೋದಾನ ಮಾಡಬೇಕು, ನವಪಂಚಮದಲ್ಲಿ ಬೆಳ್ಳಿ–ಕಂಚುಗಳನ್ನು ದಾನಮಾಡಬೇಕು, ನಾಡೀದೋಷವಿದ್ದರೆ ಗೋ,ಅನ್ನ, ಸುವರ್ಣ,ವಸ್ತ್ರಗಳನ್ನು ದಾನಮಾಡಬೇಕು, ದ್ವಿರ್ದ್ವಾದಶದಲ್ಲಿ ಬ್ರಾಹ್ಮಣ ಸಂತರ್ಪಣೆ ಮಾಡಬೇಕು.

ನಿಧನಂ ಮಧ್ಯನಾಡ್ಯಾಂತು ದಂಪತ್ಯೋರ್ನೈವ ಪಾರ್ಶ್ವಯೋಃ।

ಕರಗ್ರಹೇ ಪೃಷ್ಠನಾಡ್ಯೋ ನ ನಂದ್ಯೇ ಇತಿ ತದ್ವಚಃ॥೩॥

ದಂಪತಿಗಳಿಬ್ಬರೂ ಮಧ್ಯನಾಡಿಯಾದರೆ ಮೃತ್ಯುಪ್ರದ. ಪಾರ್ಶ್ವನಾಡಿ ಯಾದರೆ ದೋಷವಿಲ್ಲ ಪಂಡಿತರುಹೇಳುವರು.

ಲಗ್ನಾಚ್ಚಂದ್ರಾದ್ವಯಾರ್ಥಸ್ಥೌ ಪಾಪಖೇಟೌ ಯದಾ ತದಾ।

ಕರ್ತರೀ ವರ್ಜನೀಯಾ ಸೋದ್ವಾಹೋಪನಯನಾದಿಷು॥೪॥

ನಹಿ ಕರ್ತರಿಜೋ ದೋಷಃ ಸೌಮ್ಯಯೋರ್ಯದಿ ಜಾಯತೇ।

ಶುಭಗ್ರಹಯುತಂ ಲಗ್ನಂ ಕ್ರೂರಯೋರ್ನಾಸ್ತಿ ಕರ್ತರೀ॥೫॥

ಲಗ್ನದಿಂದಲೂ,ಚಂದ್ರನಿಂದಲೂ ೧೨–೨ ನೆಯ ಸ್ಥಾನದಲ್ಲಿ ಪಾಪಗ್ರಹರಿದ್ದರೆ ಕರ್ತರೀದೋಷವಾಗುವುದು. ಈ ಕರ್ತರೀದೋಷವನ್ನು ವಿವಾಹ ಉಪನಯನಾದಿಗಳಲ್ಲಿ ಬಿಡಬೇಕು. ಆದರೆ ಶುಭಗ್ರಹರು ಕರ್ತರಿಮಾಡು ತ್ತಿದ್ದರೆ ಶುಭವೇ ಆಗುವುದು. ಲಗ್ನವು ಶುಭಗ್ರಹಯುತವಾದರೂ ಕ್ರೂರಗ್ರಹರ ಕರ್ತರೀ ದೋಷಕಾರಿಯಲ್ಲ.

## ಗುರುಬಲವಿಚಾರ

ಜನ್ಮತ್ರಿದಶಮಾರಿಸ್ಥ ಪೂಜಯಾ ಶುಭದೋ ಗುರುಃ ।

ವಿವಾಹೇ ಚ ಚತುರ್ಥಾಷ್ಟದ್ವಾದಶಸ್ಥೋ ಮೃತಿಪ್ರದಃ॥೬॥

ವಿವಾಹದಲ್ಲಿ ೧–೩–೧೦–೬ ಸ್ಥಾನಗಳಲ್ಲಿ ಗುರುವಿದ್ದರೆ ಪೂಜೆಯಿಂದ ಶುಭನಾಗುವನು. ೪–೮–೧೨ರಲ್ಲಿ ಗುರುವಿದ್ದರೆ ಮೃತಿಪ್ರದನಾಗುವನು.

ನಷ್ಟಾತ್ಮಜಾ ಧನವತೀ ವಿಧವಾ ಕುಶೀಲಾ ಪುತ್ರಾನ್ವಿತಾ ಪರರತಾ ಸುಭಗಾ ವಿಪುತ್ರಾ।

ಸ್ವಾಮಿಪ್ರಿಯಾ ವಿಗತಕೋಶಗಮಾ ಧನಾಢ್ಯಾ ವಂಧ್ಯಾ ಭವೇತ್ಸಗುರೌ ಕ್ರಮಶೋ ವಿವಾಹೇ॥೭॥

ಗುರುವು ವಧುವಿನ ಜನ್ಮರಾಶಿಯಿಂದ ೧.ಸಂತಾನನಷ್ಟ. ೨. ಧನವತಿ ೩. ವಿಧವಾ ೪. ಕುಶೀಲಾ ೫. ಪುತ್ರವತಿ ೬. ಪರಪುರುಷರತಾ ೭. ಸೌಭಾಗ್ಯವತಿ ೮.ಪುತ್ರಹೀನಾ. ೯. ಪತಿಪ್ರಿಯಾ. ೧೦. ಧನಹೀನಾ. ೧೧.ಧನವತೀ. ೧೨.ವಂಧ್ಯೆ. ಆಗುವಳು.

ಗುರೌ ಸಿಂಹಗತೇ ಕಾರ್ಯೋ ನ ವಿವಾಹಃ ಕದಾಚನ।
ಮೇಷಸ್ಥಿತೇ ದಿವಾನಾಥೇ ಸಿಂಹಸ್ಥೋಪಿ ಶುಭಪ್ರದಃ॥೮॥

ಗುರುವು ಸಿಂಹಕ್ಕೆ ಬಂದಾಗ ವಿವಾಹ ಮಾಡಬಾರದು. ರವಿಯು ಮೇಷಕ್ಕೆ ಬಂದಾಗ ಗುರುವು ಸಿಂಹದಲ್ಲಿದ್ದರೂ ವಿವಾಹವು ಶುಭಕರವು.

## ಸೂರ್ಯಬಲವಿಚಾರ

ಏಕಾದಶೇ ತೃತೀಯೇ ವಾ ಷಷ್ಠೇ ವಾ ದಶಮೇಪಿ ವಾ।
ವರಸ್ಯ ಶುಭದೋ ನಿತ್ಯಂ ವಿವಾಹೇ ದಿನನಾಯಕಃ॥೯॥
ಜನ್ಮನ್ಯಥ ದ್ವಿತೀಯೋ ವಾ ಪಂಚಮೇ ಸಪ್ತಮೇ ಪಿ ವಾ।
ನವಮೇ ಚ ದಿವಾನಾಥೇ ಪೂಜಯಾ ಪಾಣಿಪೀಡನಮ್॥೧೦॥
ಅಷ್ಟಮೇ ಚ ಚತುರ್ಥೇ ಚ ದ್ವಾದಶೇ ಚ ದಿವಾಕರೇ।
ವಿವಾಹಿತೋ ವರೋ ಮೃತ್ಯುಂ ಪ್ರಾಪ್ನೋತ್ಯತ್ರ ನ ಸಂಶಯಃ॥೧೧॥

ರವಿಯು ವರನ ರಾಶಿಯಿಂದ ೧೧–೩–೬–೧೦ಸ್ಥಾನಗಳಲ್ಲಿದ್ದರೆ ವಿವಾಹವಿಚಾರದಲ್ಲಿ ಶುಭನಾಗಿರುವನು. ೧–೨–೫–೭–೯ ಈ ಸ್ಥಾನಗಳಲ್ಲಿರುವ ರವಿಯು ಪೂಜೆಯಿಂದ ಶುಭನಾಗುವನು ೮–೪–೧೨ಸ್ಥಾನಗಳಲ್ಲಿರುವ ರವಿಯು ಅಶುಭವನ್ನು ಉಂಟುಮಾಡುವನು.

ಗರ್ಗೋ ಮುನಿಶ್ಚಾಥ ವಸಿಷ್ಠಕಶ್ಯಪೌ ಪರಾಶರದ್ಯಾ ಮುನಯೋ ವದಂತಿ।
ದ್ವಿತೀಯಪುತ್ರಾಂಬುಗತೋ ದಿವಾಕರಸ್ತ್ರಯೋದಶಾಹಾತ್ ಪರತಃ ಶುಭಾವಹಃ॥೧೨॥

೩–೫–೪ ಸ್ಥಾನಗಳಲ್ಲಿರುವ ರವಿಯು ೧೩ದಿನಗಳ ನಂತರ ಶುಭವನ್ನು ಕೊಡುವನೆಂದು ಗರ್ಗಮುನಿಗಳು, ವಸಿಷ್ಠಮುನಿಗಳು, ಕಶ್ಯಪಮುನಿಗಳು, ಪರಾಶರರೇ ಮೊದಲಾದ ಮುನಿಗಳು ಅಭಿಪ್ರಾಯಪಡುತ್ತಾರೆ.

## ವರ್ಜ್ಯವಿಚಾರ

ಮಾಸಾಂತೇ ದಿನಮೇಕಂ ತು ತಿಥ್ಯಂತೇ ಘಟಿಕಾದ್ವಯಮ್।
ಘಟಿಕಾತ್ರಿತಯಂ ಭಾಂತೇ ವಿವಾಹೇ ಪರಿವರ್ಜಯೇತ್॥೧೪॥

ಮಾಸಾಂತದಲ್ಲಿ ಒಂದುದಿನ, ತಿಥ್ಯಂತದಲ್ಲಿ ಎರಡು ಘಟಿಗಳನ್ನು,ನಕ್ಷತ್ರದ ಕೊನೆಗೆ ಘಟಿಕಾತ್ರಿಯ ವಿವಾಹವಿಷಯದಲ್ಲಿ ಬಿಡಬೇಕು.



ಶನೈಶ್ಚರದಿನೇ ಚೈವ ಯದಿ ರಿಕ್ತಾ ತಿಥಿರ್ಭವೇತ್।
ತಸ್ಮಿನ್ವಿವಾಹಿತಾ ಕನ್ಯಾ ಪತಿಸಂತಾನ ವರ್ಧಿನೀ॥೧೪॥

ಶನಿವಾರದದಿನ ಒಂದುವೇಳೆರಿಕ್ತಾತಿಥಿ(೪–೯–೧೪) ಬಂದಾಗ ವಿವಾಹಮಾಡಿಕೊಂಡ ಕನ್ಯೆಯು ಪತಿಯಿಂದ ಬಹುಸಂತಾನಹೊಂದಿ ಶುಭವನ್ನುಂಟುಮಾಡುವಳು.

ಭಾಮಿನೀ ಜನ್ಮನಕ್ಷತ್ರಾದ್ದ್ವಿತೀಯಂ ಪತಿಜನ್ಮಭಮ್।
ನ ಶುಭಂ ಭರ್ತೃನಾಶಾಯ ಕಥಿತಂ ಬ್ರಹ್ಮಯಾಮಲೇ॥೧೫॥

ಸ್ತ್ರೀಯ ಜನ್ಮನಕ್ಷತ್ರದಿಂದ ಎರಡನೆಯದು ಪತಿಯ ಜನ್ಮನಕ್ಷತ್ರವಾದರೆ ಗಂಡನಿಗೆ ಅರಿಷ್ಟವೆಂದು ಬ್ರಹ್ಮಯಾಮಲದಲ್ಲಿ ಹೇಳಿ.

## ದಶದೋಷವಿಚಾರ

ಲತ್ತಾಪಾತೋ ಯುತಿರ್ವೇಧೋ ಯಾಮಿತ್ರಂ ಬುಧಪಂಚಕಂ।
ಏಕಾರ್ಗಲೋಪಗ್ರಹೌ ಚ ಕ್ರಾಂತಿಸಾಮ್ಯಂ ತತಃ ಪರಮ್॥೧೬॥
ದಗ್ಧಾ ತಿಥಿಶ್ಚ ವಿಜ್ಞೇಯಾ ದಶ ದೋಷಾ ಮಹಾಬಲಾಃ।
ಏತಾನ್ದೋಷಾನ್ ಪರಿತ್ಯಜ್ಯ ಲಗ್ನಂ ಸಂಶೋಧಯೇದ್ಬುಧಃ॥೧೭॥

ಲತ್ತಾ,ಪಾತ,ಯುತಿ,ವೇಧ,ಯಾಮಿತ್ರ,ಬುಧಪಂಚಕ,ಏಕಾರ್ಗಲ,ಉಪಗ್ರಹ, ಕ್ರಾಂತಿ ಸಾಮ್ಯ,ದಗ್ಧತಿಥಿ ಈ ಹತ್ತು ಮಹಾದೋಷಗಳೆಂದು ಹೇಳಲ್ಪಟ್ಟಿದೆ. ಈ ದೋಷಗಳು ಬರದಂತೆ ಲಗ್ನವನ್ನು ದೈವಜ್ಞನು ಸಂಶೋಧಿಸಿ ನಿರ್ಣಯಿಸಿ ಹೇಳಬೇಕು.

## ಪಂಚಶಲಾಕಾಚಕ್ರ

ಪಂಚೋರ್ಧ್ವಾಃ ಸ್ಥಾಪಯೇದ್ರೇಖಾಃ ಪಂಚತಿರ್ಯಙ್ಮುಖಾಸ್ತಥಾ।
ದ್ವಯೋಶ್ಚ ಕೋಣಯೋರ್ದ್ವಂದ್ವೇ ಚಕ್ರಂ ಪಂಚಶಲಾಕಕಮ್॥೧೮॥

ಐದು ಉದ್ದವಾಗಿ ಗೆರೆಗಳನ್ನು ಬರೆದು ಅದರಮೇಲೆ ಐದು ಅಡ್ಡವಾಗಿ ಗೆರೆಗಳನ್ನು ಎಳೆಯಬೇಕು ಮತ್ತು ಮೂಲೆಗಳಲ್ಲಿ ಎರೆಡೆರಡು ಗೆರೆಗಳನ್ನು ಬರೆಯಬೇಕು.

ಈಶಾನೇ ಕೃತ್ತಿಕಾ ದೇಯಾ ಕ್ರಮಾದನ್ಯಾನಿ ಭಾನಿ ತು।
ಗ್ರಹಾಸ್ತೇಷು ಪ್ರದಾತವ್ಯಾ ಯೇ ಚ ಯತ್ರ ಪ್ರತಿಷ್ಠಿತಾಃ॥೧೯॥
ಲಗ್ನಸ್ಯ ನಿಕಟೇ ಯಾ ಚ ಗತಾ ಭವತಿ ಪೂರ್ಣಿಮಾ।
ತನ್ನಕ್ಷತ್ರೇ ಸ್ಥಿತಶ್ಚಂದ್ರೋ ದಾತವ್ಯೋ ಗಣಕೋತ್ತಮೈಃ॥೨೦॥

ಮೇಲೆ ತಿಳಿಸಿದ ಪಂಚಶಲಾಕಾಚಕ್ರದಲ್ಲಿ ಈಶಾನ್ಯದಿಂದ ಕೃತ್ತಿಕಾನಕ್ಷತ್ರ ದಿಂದಾರಂಭಿಸಿ ಕ್ರಮವಾಗಿ ನಕ್ಷತ್ರಗಳನ್ನು ಬರೆಯಬೇಕು.ಲಗ್ನದ ಹತ್ತಿರ ಇರುವ ಪೂರ್ಣಿಮಾ ದಿನದ ನಕ್ಷತ್ರದಲ್ಲಿ ಚಂದ್ರನನ್ನು ಉತ್ತಮದೈವಜ್ಞನು ಬರೆಯಬೇಕು.

ನಕ್ಷತ್ರಂ ದ್ವಾದಶಂ ಭಾನುಸ್ತೃತೀಯಾಂ ಲತ್ತಯಾ ಕುಜಃ।

ಷಷ್ಠಂ ಜೀವೇ ಷ್ಟಮಂ ಮಂದೋ ಹಂತಿ ದಕ್ಷಿಣತಃ ಸದಾ॥೨೧॥

ವಾಮೇನ ಸಪ್ತಮಶ್ಚಾಂದ್ರಿರ್ನವಮಂ ಸಿಂಹಿಕಾಸುತಃ।

ಹಂತಿ ಭಂ ಪಂಚಮಂ ಶುಕ್ರೋ ದ್ವಾವಿಂಶಂ ಪೂರ್ಣಚಂದ್ರಮಾಃ॥೨೨॥

ವಿವಾಹನಕ್ಷತ್ರದಿಂದ ೧೨ರಲ್ಲಿ ರವಿಯು,೩ರಲ್ಲಿ ಕುಜನು,೬ರಲ್ಲಿ ಗುರುವು, ೮ರಲ್ಲಿ ಶನಿಯು ಲತ್ತಾದೋಷಹೊಂದಿ ಅರಿಷ್ಟಉಂಟುಮಾಡುವರು. ಹಿಂದಿನಿಂದ ೭ರಲ್ಲಿ ಬುಧ, ೯ರಲ್ಲಿ ರಾಹು ೫ರಲ್ಲಿ ಶುಕ್ರನು,೨೨ರಲ್ಲಿ ಪೂರ್ಣಚಂದ್ರನು ಲತ್ತಾದೋಷ ಹೊಂದಿ ಅರಿಷ್ಟಉಂಟುಮಾಡುವರು.

**ಪಾತದೋಷ**

ಸೂರ್ಯಯುಕ್ತಾಚ್ಚ ನಕ್ಷತ್ರಾದ್ದೋಷಃ ಪಾತೋ ವಿಧೀಯತೇ।

ಮಘಾ ಆಶ್ಲೇಷಾಚಿತ್ರಾ ಚ ಸಾನುರಾಧಾ ಚ ರೇವತೀ॥೨೩॥

ಶ್ರವಣೋಪಿಚ ಷಟ್ಕೋಯಂ ಪಾತದೋಷೋ ನಿಗದ್ಯತೇ।

ಅಶ್ವಿನೀಮವಧಿಂ ಕೃತ್ವಾ ಗಣೇಲ್ಲಗ್ನಭಾವಧಿ॥೨೪॥

ಸೂರ್ಯನಿರುವ ನಕ್ಷತ್ರಾದಿಂದ ಪಾತದೋಷ ತಿಳಿಯಬೇಕು. ಮಘಾ, ಆಶ್ಲೇಷಾ,ಚಿತ್ರಾ,ಅನುರಾಧಾ,ರೇವತೀ,ಶ್ರವಣಾ, ಈ ಆರು ನಕ್ಷತ್ರಗಳಲ್ಲಿ ಪಾತದೋಷವು ಉಂಟಾಗುತ್ತದೆ ಅಶ್ವಿನೀಯಿಂದ ಲ್ಲಗ್ನನಕ್ಷತ್ರದವರೆಗೆ ಎಣಿಸಿದಾಗ ಲಗ್ನದ ನಕ್ಷತ್ರವು ಪಾತದೋಷದ ನಕ್ಷತ್ರದಲ್ಲಿ ಬಂದರೆ ಪಾತದೋಷವಿದೆಯೆಂದು ತಿಳಿಯಬೇಕು.

**ಯುತಿ**

ಯತ್ರ ರಾಶೌಭವೇಚ್ಚಂದ್ರೋ ಗ್ರಹಸ್ತತ್ರ ಯದಾ ಭವೇತ್।

ಯುತಿದೋಷಸ್ತದಾ ಜ್ಞೇಯೋ ವಿನಾ ಶುಕ್ರಂ ಶುಭಾಶುಭಾಃ॥೨೫॥

ಯಾವ ರಾಶಿಯಲ್ಲಿ ಚಂದ್ರನಿರುವನೋ ಅವನ ಜೊತೆಗೆ ಗ್ರಹವಿದ್ದರೆ ಯುತಿದೋಷ ವುಂಟಾಗುವುದು ಶುಕ್ರನನ್ನು ಬಿಟ್ಟು ಬೇರೆಯಾವ ಗ್ರಹ ವಿದ್ದರೂ ಯುತಿದೋಷಉಂಟಾಗುತ್ತದೆ.

**ವೇಧ**

ಏಕರೇಖಾಸ್ಥಿತಿರ್ವೇಧೋ ದಿನನಾಥಾದಿಭಿರ್ಗ್ರಹೈಃ।

ವಿವಾಹೇ ತತ್ರ ಮಾಸೇ ತು ನ ಜೀವತಿ ಕದಾಚನ॥೨೬॥

ರವ್ಯಾದಿಗ್ರಹರು ಏಕರೇಖೆಯಲ್ಲಿ ಇರುವಿಕೆಯು ವೇಧೆ ಯಾಗುವುದು. ಪಂಚಶಲಾಕಾ ಚಕ್ರದಲ್ಲಿಹೇಳಿದ ಈ ವೇಧೆಯು ವಿವಾಹದಲ್ಲಿ ಉಂಟಾದರೆ ಒಂದುತಿಂಗಳಲ್ಲಿ ಜೀವನಷ್ಟ ಉಂಟಾಗುವುದು.

ಲತ್ತಾ ಮಾಲವಕೇ ದೇಶೇ ಪಾತಶ್ಚ ಕುರುಜಾಂಗಲೇ।



ಏಕಾರ್ಗಲಂ ಚ ಕಾಶ್ಮೀರೇ ವೇಧಂ ಸರ್ವತ್ರ ವರ್ಜಯೇತ್॥೨೭॥

ಲತ್ತಾದೋಷವನ್ನು ಮಾಲವದೇಶದಲ್ಲೂ, ಪಾತವನ್ನು ಕುರುಜಾಂಗಲ ದಲ್ಲೂ, ಏಕಾರ್ಗಲವನ್ನು ಕಾಶ್ಮೀರದಲ್ಲೂ, ವೇಧವನ್ನು ಸರ್ವತ್ರ ಬಿಡಬೇಕು.

ಚತುರ್ದಶಂ ಚ ನಕ್ಷತ್ರಂ ಯಾಮಿತ್ರಂ ಲಗ್ನಭಾತ್ಸ್ಮೃತಮ್।

ಶುಭಯುಕ್ತಂ ತದಿಚ್ಛಂತಿ ಪಾಪಯುಕ್ತಂ ಚ ವರ್ಜಯೇತ್॥೨೮॥

ಚಂದ್ರಾಶ್ಚಾಂದ್ರಿರ್ಭೃಗುರ್ಜೀವೋ ಯಾಮಿತ್ರೇ ಶುಭಕಾರಕಾಃ।

ಸ್ವರ್ಭಾನುರ್ಭಾನುಮಂದಾರಾ ಯಾಮಿತ್ರೇ ನಶುಭಪ್ರದಾಃ॥೨೯॥

ಲಗ್ನನಕ್ಷತ್ರದಿಂದ ೧೪ ನೆಯ ನಕ್ಷತ್ರ ಯಾಮಿತ್ರವೆಂದು ಹೇಳಲ್ಪಡುತ್ತದೆ, ಇದು ಶುಭಗ್ರಹಯುಕ್ತವಾಗಿದ್ದರೆ ಶುಭವು, ಪಾಪಗ್ರಹಯುಕ್ತವಾಗಿದ್ದರೆ ಬಿಡಬೇಕು. ಚಂದ್ರ,ಬುಧ,ಶುಕ್ರ,ಗುರುಗಳು ಯಾಮಿತ್ರದಲ್ಲಿ ಶುಭಕರರು, ರಾಹು,ಕೇತು,ರವಿ,ಶನಿ,ಕುಜರು ಯಾಮಿತ್ರದಲ್ಲಿ ಶುಭಪ್ರದರಲ್ಲ.

ಧಾರ್ಯಾ ತಿಥಿ೧೫ ಮಾರ್ಸ೧೨ದಶಾ೧೦ ಷ್ಟಲವೇದಾಃ೪ ಸಂಕ್ರಾಂತಿತೋ ಯಾತದಿನೈಶ್ಚ ಯೋಜ್ಯಾಃ।

ಗ್ರಹೇರ್ವಿಭಕ್ತಾ ಯದಿ ಪಂಚಶೇಷೇ ರೋಗಸ್ತಥಾ ಗ್ನಿರ್ನೃಪಚೌರಮೃತ್ಯುಃ॥೩೦॥

ವರ್ತೇ ರೋಗಃ ಪಥೇ ಚೌರಃ ಸೇವಾಯಾಂ ರಾಜಪಂಚಕಮ್।

ಗೃಹೇ ತ್ವಗ್ನಿಪರಿತ್ಯಾಜ್ಯಂ ವಿವಾಹೇ ಮೃತ್ಯುಪಂಚಕಮ್॥೩೧॥

೧೫-೧೨-೧೦-೮-೪ ಈ ಅಂಕೆಗಳನ್ನು ಸ್ವೀಕರಿಸಬೇಕು. ಸಂಕ್ರಾಂತಿ ದಿನದಿಂದ ಮುಹೂರ್ತನಿಶ್ಚಯಿಸುವದಿನ ಎಷ್ಟನೆಯದೆಂದು ತಿಳಿದು ಕೊಂಡು(ಅಂದರೆ ಸೂರ್ಯನು ಎಷ್ಟು ಅಂಶಗಳನ್ನು ಕಳೆದಿರುವನೋ) ಅಷ್ಟು ಸಂಖ್ಯೆಯನ್ನು ಸ್ವೀಕರಿಸಿದ ಸಂಖ್ಯೆಗೆ ಸೇರಿಸಬೇಕು. ೯ರಿಂದ ಭಾಗಿಸಿದಾಗ ೫ ಶೇಷಬಂದರೆ ಪಂಚಕವೆಂದು ತಿಳಿಯಬೇಕು. ೧೫ಕ್ಕೆ ಸೇರಿಸಿ ೯ರಿಂದ ಭಾಗಿಸಲು ೫ ಬಂದರೆ ರೋಗಪಂಚಕ. ೧೨ಕ್ಕೆ ಸೇರಿಸಿ ೯ರಿಂದ ಭಾಗಿಸಿದಾಗ ೫ ಶೇಷಬಂದರೆ ಅಗ್ನಿಪಂಚಕ. ೧೦ಕ್ಕೆ ಸೇರಿಸಿ ೯ರಿಂದ ಭಾಗಿಸಿದಾಗ ೫ಶೇಷಬಂದರೆ ರಾಜಪಂಚಕ. ೮ಕ್ಕೆ ಸೇರಿಸಿ ೯ರಿಂದ ಭಾಗಿಸಿದಾಗ ೫ ಶೇಷಬಂದರೆ ಚೋರಪಂಚಕ. ೪ಕ್ಕೆ ಸೇರಿಸಿ ೯ರಿಂದ ಭಾಗಿಸಿದಾಗ ೫ ಶೇಷಬಂದರೆ ಮೃತ್ಯುಪಂಚಕವೆಂದು ತಿಳಿಯಬೇಕು. ವ್ರತಬಂಧಗಳಲ್ಲಿ ರೋಗಪಂಚಕ ಬಿಡಬೇಕು. ಯಾತ್ರಯಲ್ಲಿ ಚೋರಪಂಚಕ ಬಿಡಬೇಕು. ಸೇವಕಾರ್ಯಗಳಲ್ಲಿ ರಾಜಪಂಚಕವನ್ನು ಬಿಡಬೇಕು. ಗೃಹಕಾರ್ಯಗಳಲ್ಲಿ ಅಗ್ನಿಪಂಚಕವನ್ನು ಬಿಡಬೇಕು. ವಿವಾಹದಲ್ಲಿ ಮೃತ್ಯುಪಂಚಕವನ್ನು ಬಿಡಬೇಕು.

**ಏಕಾರ್ಗಲ**

ಯೋಗಾಂಕೇ ವಿಷಮೇ ಚೈಕೋ ದೇಯೋಷ್ಟಾವಿಂಶತಿಃ ತಮೇ।

ಅರ್ಧಂ ಕೃತ್ವಾಶ್ವಿನೀಪೂರ್ವಮಂಕಭಂ ಮೂರ್ಧ್ನಿವಿಸ್ತೃತಾ।

ಯೋಗಾಂಕೇ ಪ್ರಾಪ್ತನಕ್ಷತ್ರೇ ಜ್ಞೇಯಮೇಕಾರ್ಗಲಂ ಬುಧೈಃ।

ಸೂರ್ಯಚಂದ್ರಮಸೋರ್ಯೋಗೇ ಭವೇದೇಕಾರ್ಗಲಸ್ತದಾ॥೩೩॥

ಯೋಗವು ವಿಷಮಸಂಖ್ಯೆಯದಾದರೆ ೧ಸಂಖ್ಯೆಯನ್ನು ಸಮವಾದರೆ ೨೮ಸಂಖ್ಯೆಯನ್ನು ಸೇರಿಸಬೇಕು. ಬಂದಸಂಖ್ಯೆಯ ಅರ್ಧಮಾಡಿ ಬಂದ ಸಂಖ್ಯೆಯ ವರೆಗೆ ಅಶ್ವಿನ್ಯಾದಿ ನಕ್ಷತ್ರಗಳನ್ನು ಎಣಿಸಿ. ಏಕಾರ್ಗಲಚಕ್ರವನ್ನು ಒಂದು ಉದ್ದರೇಖೆಯ ಮೇಲೆ ಅಡ್ಡವಾಗಿ ೧೩ರೇಖೆಗಳನ್ನು ಬರೆದು ಮೇಲ್ಭಾಗದಲ್ಲಿ ಸೂರ್ಯನಿರುವ ನಕ್ಷತ್ರವನ್ನು ಬರೆದು ವಿವಾಹ ನಕ್ಷತ್ರದಮೇಲೆ ಚಂದ್ರನನ್ನು ಬರೆಯಬೇಕು. ಹೀಗೆ ಬರೆದಾಗ ಸೂರ್ಯಚಂದ್ರರು ಏಕರೇಖೆಯ ಮೇಲೆ ಬಂದರೆ ಏಕಾರ್ಗಲವೆಂಬ ವೇಧದೋಷವಾಗುವುದು.

**ಉಪಗ್ರಹ**

ಶರಾಷ್ಟದಿಕ್ ನಗಾತಿಧೃತ್ಯಸ್ತಿಥಿಧೃತಿಶ್ಚ ಪರ್ಕೃತೇಶ್ಚ ಪಂಚ।ಉಪಗ್ರಹಾಃ

ಸೂರ್ಯತೋಬ್ಜತಾರಾಃ ಶುಭಾ ನ ದೇಶೇ ಕುರುಬಾಹ್ಲಿಕಾನಾಮ್॥೩೪॥

ರವಿ ಇರುವ ನಕ್ಷತ್ರದಿಂದ ವಿವಾಹನಕ್ಷತ್ರವು ೫–೮–೧೦–೧೪–೭–೧೯–೧೮–೨೧–೨೨–೨೩–೨೪–೨೫ ಈಸಂಖ್ಯೆಗಳಲ್ಲಿ ಯಾವುದಾದರೂ ಉಪಗ್ರಹದೋಷ ವಾಗುವುದು. ಈ ದೋಷವನ್ನು ಕುರು ಮತ್ತು ಬಾಹ್ಲೀಕದೇಶದಲ್ಲಿ ಅಶುಭವೆಂದು ವಿಶೇಷವಾಗಿ ಪರಿಗಣಿಸಬೇಕು.

**ಕ್ರಾಂತಿಸಾಮ್ಯ**

ಊರ್ಧ್ವಸ್ತಿಸ್ರ ರಸ್ತಿರಸ್ತಿಸ್ರೋ ಮಧ್ಯೇ ಮೀನಂ ಲಿಖೇದ್ಬುಧಃ।

ಸೂರ್ಯಚಂದ್ರಮಸೋರ್ದೃಷ್ಟೌ ಕ್ರಾಂತಿಸಾಮ್ಯಂ ನಿಗದ್ಯತೇ॥೩೫॥

ಉದ್ದವಾಗಿ ೩ ರೇಖೆಗಳನ್ನು ಅದರಮೇಲೆ ಅಡ್ಡವಾಗಿ ೩ ರೇಖೆಗಳನ್ನು ಬರೆದು ಮಧ್ಯದಲ್ಲಿ ಮೀನವನ್ನು ಕ್ರಮವಾಗಿ ೧೨ ರಾಶಿಗಳನ್ನು ಬರೆದು ವಿವಾಹದಿನದಂದು ಸೂರ್ಯ–ಚಂದ್ರರು ಒಂದು ರೇಖೆಗೆ ಬಂದರೆ ಕ್ರಾಂತಿಸಾಮ್ಯದೋಷವಾಗುವುದು.

**ದಗ್ಧಾತಿಥಿ**

ಮೀನೇಚಾಪೇ ದ್ವಿತೀಯಾ . ಚತುರ್ಥೀ ವೃಷಕುಂಭಯೋಃ।

ಮೇಷಕರ್ಕಟ ಯೋಃ ಷಷ್ಠೀ ಕನ್ಯಾಯುಗ್ಮೇಷು ಚಾಷ್ಟಮೀ॥೩೬॥

ದಶಮೀ ವೃಶ್ಚಿಕೇ ಸಿಂಹೇ ದ್ವಾದಶೀ ಮಕರೇ ತುಲೇ।

ಏತಾಸ್ತು ತಿಥಯೋ ದಗ್ಧಾ ಶುಭೇ ಕರ್ಮಣಿ ವರ್ಜಿತಾಃ॥೩೭॥

ವಿವಾಹಸಮಯದಲ್ಲಿ ಸೂರ್ಯನು ಮೀನ–ವೃಷಭದಲ್ಲಿದ್ದರೆ ದ್ವಿತೀಯಾ, ವೃಷಭ–ಕುಂಭವಾದರೆ ಚತುರ್ಥೀ,ಮೇಷ–ಕರ್ಕವಾದರೆ ಷಷ್ಠೀ, ಕನ್ಯಾ–ಮಿಥುನವಾದರೆ ಅಷ್ಟಮೀ,ವೃಶ್ಚಿಕ–ಸಿಂಹವಾದರೆ ದಶಮೀ,ಮಕರ–ತುಲಾ ವಾದರೆ ದ್ವಾದಶೀ ತಿಥಿ ದಗ್ಧವಾಗುವುದು. ಈ ರೀತಿ



ದಗ್ಧವಾದತಿಥಿಯಲ್ಲಿ ವಿವಾಹಮಾಡಬಾರದು. ಇವು ದಶಮಹಾದೋಷಗಳು.

**ವಿವಾಹಲಗ್ನಶೋಧನ**

ತ್ಯಾಜ್ಯಾ ಲಗ್ನೇ ವ್ಯಯೇ ಷಷ್ಠೇ ಶುಕ್ರೇಂದುಲಗ್ನಪಾಃ।

ರಂಧ್ರೇ ಚಂದ್ರಾದಯಃ ಪಂಚ ಸರ್ವೇಸ್ತ್ಯೇಬ್ಜಗುರೂ ಸಮೌ॥೩೯॥

ವಿವಾಹಲಗ್ನದಲ್ಲೂ–೧೨ರಲ್ಲೂ ಶನಿಯು, ೬ ರಲ್ಲಿ ಶುಕ್ರ–ಚಂದ್ರರು ಮತ್ತು ವಿವಾಹಲಗ್ನಾಧಿಪತಿಯೂ, ೮ ರಲ್ಲಿ ಚಂದ್ರ,ಕುಜ,ಬುಧ, ಗುರು,ಶುಕ್ರರೂ, ೭ನೇಸ್ಥಾನದಲ್ಲಿ ಯಾವಗ್ರಹವೂ ಇರಬಾರದು.

ಕರ್ಕೇಲಗ್ನೇಥವಾ ಮೇಷೇ ಘಟಾಂಶೋ ಯದಿ ಜಾಯತೇ।

ತುಲಾಯಾಂ ಮಕರೇ ಚಂದ್ರೇ ವೈಧವ್ಯಂ ಜಯತೇ ಧ್ರುವಮ್॥೩೯॥

ಕರ್ಕಲಗ್ನದಲ್ಲಾದರೂ ಮೇಷಲಗ್ನದಲ್ಲಾದರೂ ತುಲಾನವಾಂಶವಾದರೂ, ತುಲಾ ಅಥವಾ ಮಕರದ ಚಂದ್ರನಿದ್ದರೂ ನಿಶ್ಚಯವಾಗಿ ವೈಧವ್ಯ ಯೋಗ ವಾಗವುದು.

ಕೇಂದ್ರೇ ಸಪ್ತಮಹೀನೇ ಚ ದ್ವಿತ್ರಿಕೋಣೇ ಶುಭಾಃಶುಭಾಃ।

ತೃತೀಯೈಕಾದಶೇ ಸರ್ವೇ ಪಾಪಾಃ ಷಷ್ಠೇ ಚ ಶೋಭನಾಃ॥೪೦॥

ವಿವಾಹಲಗ್ನಕ್ಕೆ ಸಪ್ತಮಸ್ಥಾನವನ್ನು ಬಿಟ್ಟು ಉಳಿದ ೧–೪–೧೦ ಕೇಂದ್ರಗಳಲ್ಲಿ ೨–೫–೯ ಸ್ಥಾನಗಳಲ್ಲಿ ಶುಭಗ್ರಹರು ಶುಭಕೊಡುವರು. ೩–೧೧ ರಲ್ಲಿ ಎಲ್ಲಾ ಪಾಪಗ್ರಹರು ಶುಭಕೊಡವರು.

ದ್ಯೂನಂ ವಿನಾ ಕೇಂದ್ರಗತೋಮರೇಜ್ಯಸ್ತ್ರಿಕೋಣಗೋ ವಾಪಿ ಹಿ ಲಕ್ಷಮೇಕಮ್।

ನಿಹಂತಿ ದೋಷತ್ರಿಶತಂ ಭೃಗುಶ್ಚ ಶತಂ ಬುಧೋ ವಾಪಿ ಹಿ ದೃಶ್ಯಮೂರ್ತಿಃ॥೪೧॥

ವಿವಾಹಲಗ್ನಕ್ಕೆ ಸಪ್ತಮಸ್ಥಾನವನ್ನು ಬಿಟ್ಟು ಉಳಿದ ೧–೪–೧೦ ಕೇಂದ್ರಗಳಲ್ಲಿ ಮತ್ತು ತ್ರಿಕೋಣಗಳಲ್ಲಿ ಗುರುವಿದ್ದರೆ ಲಕ್ಷದೋಷವನ್ನು,ಶುಕ್ರನು ೩೦೦ ದೋಷಗಳನ್ನು , ಬುಧನು ೧೦೦ ದೋಷಗಳನ್ನು ನಾಶಮಾಡುವರು(ಅಸ್ತಂಗತರಾಗಿರಬಾರದು).

ಕಿಂಕುರ್ವಂತಿ ಗ್ರಹಾಃ ಸರ್ವೇ ಯಸ್ಯ ಕೇಂದ್ರೇ ಬೃಹಸ್ಪತಿಃ।

ಮತ್ತಮಾತಂಗಯೂಥಾನಾಂ ಶತಂ ಹಂತಿ ಚ ಕೇಸರೀ॥೪೧॥

ನೂರು ಮದೋನ್ಮತ್ತ ಆನೆಗಳನ್ನು ಒಂದು ಸಿಂಹವು ನಾಶಮಾಡುವಂತೆ, ಎಲ್ಲದೋಷಗಳನ್ನು ನಾಶಮಾಡುವ ಗುರು ಒಬ್ಬನು ಕೇಂದ್ರದಲ್ಲಿರುತ್ತಿರಲು ಬೇರೆಗ್ರಹರು ದುಷ್ಟರಾಗಿ ಏನು ಮಾಡಬಲ್ಲರು.

**ದ್ವಿರಾಗಮನ ಮುಹೂರ್ತ**

ಚರೇದಥೌಜಹಾಯನೇ ಘಟಾಲಿ ಮೇಷಗೇ ರವೌ

ರವೀಜ್ಯಶುದ್ಧಿಯೋಗತಃ ಶುಪ್ರದಸ್ಯ ವಾಸರೇ।

ನೃಯುಗ್ಮಮೀಕನ್ಯಕಾತುಲಾವೃಷೇ ವಿಲಗ್ನಕೇ

ದ್ವಿರಾಗಮಂ ಲಘುಧ್ರುವೇ ಚರೇ ಸ್ರಪೋ ಮೃದೂಡುಭಿಃ॥೪೩॥

ವಿವಾಹದದಿನದಿಂದ ೧-೩-೫-೭ ನೆಯ ವರ್ಷಗಳಲ್ಲಿ, ಕುಂಭ, ವೃಶ್ಚಿಕ, ಮೇಷದಲ್ಲಿ ರವಿ ಇರುವಾಗ ರವಿ-ಗುರುಗಳು ಶುದ್ಧರಾಗಿ-ಶುಭರಾಗಿರಲು ಶುಭ ವಾರದಲ್ಲಿ, ಮಿಥುನ-ಮೀನ-ಕನ್ಯಾ-ತುಲಾ- ವೃಷಭಲಗ್ನವಿದ್ದಾಗ, ಲಘು (ಹಸ್ತ, ಅಶ್ವಿನಿ,ಪುಷ್ಯ,ಅಭಿಜಿತ್) ಧ್ರುವ (ಉತ್ತರಾತ್ರಯ,ರೋಹಿಣೀ) ಚರ(ಸ್ವಾತಿ, ಪುನರ್ವಸು,ಶ್ರವಣ,ಧನಿಷ್ಠಾ, ಶತಭಿಷ)ಮೂಲ,ಮೃದು (ಮೃಗಶಿರ, ರೇವತೀ, ಚಿತ್ರಾ,ಅನೂರಾಧ)ನಕ್ಷತ್ರಗಳಲ್ಲಿ ದ್ವಿರಾಗಮನವು ಶುಭವಾಗಿದೆ.

ಸಾರ್ಧಷ್ಟಮಾಸೇ ಭೃಗುಜಷ್ಟ ಪೂರ್ವೇ ತತೋ ಧನೇಶೇ ಸ್ಥಿತಪಂಚಪಕ್ಷ।

ತತಃ ಪ್ರತೀಚ್ಯಾಂ ನವಮಾಂಶಭುಕ್ತಮೇಕಾದಶಾಹಾಸ್ತಮುದೇತಿ ಪೂರ್ವೇ॥೪೪॥

ಶುಕ್ರನು ಎಂಟೂವರೆ ತಿಂಗಳು ಪೂರ್ವದಲ್ಲಿ ಉದಯನಾಗಿದ್ದು ಎರಡೂವರೆತಿಂಗಳು ಅಸ್ತನಾಗುತ್ತಾನೆ. ನಂತರ ಪಶ್ಚಿಮದಲ್ಲಿ ಉದಿತನಾಗಿ ಒಂಬತ್ತುತಿಂಗಳನಂತರ ಹನ್ನೊಂದುದಿನ ಅಸ್ತನಾಗ ನಂತರ ಪೂರ್ವದಲ್ಲಿ ಉದಿತನಾಗುವನು. ದ್ವಿರಾಗಮನಕ್ಕೆ ಶುಕ್ರನು ಉದಯನಾಗಿರುವುದು ಮುಖ್ಯವಾಗಿದೆ.

ರೇವತ್ಯಾದಿಮೃಗಾಂತೇ ಚ ಯಾವತ್ತಿಷ್ಠತಿ ಚಂದ್ರಮಾಃ।

ತಾವಚ್ಛುಕ್ರೋ ಭವೇದಂಧಃ ಸಮ್ಮುಖೋ ದಕ್ಷಿಣಃ ಶುಭಃ॥ ೪೫॥

ಚಂದ್ರನು ರೇವತ್ಯಾದಿ-ಮೃಗಶಿರದವರೆಗೆ ನಕ್ಷತ್ರಗಳಲ್ಲಿ ಇರುವವರೆಗೆ ಶುಕ್ರನು ಅಂಧನಾಗುವನು ಮತ್ತು ಸಮ್ಮುಖನೂ- ದಕ್ಷಿಣನೂ ಆಗಿ ಶುಭವನ್ನು ಕೊಡುವನು.

## ವಧೂಪ್ರವೇಶಮುಹೂರ್ತ

ಹಸ್ತತ್ರಯೇ ಬ್ರಹ್ಮಯುಗೇ ಮಘಾಯಾಂ ಪುಷ್ಯೇ ಧನಿಷ್ಠಶ್ರವಣೋತ್ತರೇಷು।

ಮೂಲಾನುರಾಧಾಹಯರೇವತೀಷು ಸ್ಥಿರೇಷು ಲಗ್ನೇಷು ವಧೂಪ್ರವೇಶಃ॥೪೬॥

ಹಸ್ತ,ಚಿತ್ರಾ,ಸ್ವಾತಿ,ರೋಹಿಣೀ,ಮೃಗಶಿರ,ಮಘಾ,ಪುಷ್ಯ,ಧನಿಷ್ಠಾ,ಶ್ರವಣಾ, ಉತ್ತರಾತ್ರಯಗಳು,ಮೂಲಾ,ಅನುರಾಧಾ,ಅಶ್ವಿನೀ,ರೇವತೀ,ಸ್ಥಿರಲಗ್ನಗಳಾದ ವೃಷಭ,ಸಿಂಹ,ವೃಶ್ಚಿಕ,ಕುಂಭ ವಧೂಪ್ರವೇಶವು ಶುಭವೆಂದು ತಿಳಿಯಬೇಕು.

ಸೂರ್ಯೇ ರೋಗಃ ಕುಜೇ ಮೃತ್ಯುರ್ವೈಧವ್ಯಂಚ ಬುಧೇ ಸ್ಮೃತಾ।

ಜೀವಶುಕ್ರಾರ್ಕಿಚಂದ್ರೇಷು ಪ್ರವೇಶೇ ಸಂಪದೇ ವಧೂಃ॥೪೭॥

ರವಿವಾರ-ರೋಗ, ಮಂಗಳವಾರ-ಮೃತ್ಯು,ಬುಧವಾರ-ವೈಧವ್ಯ, ಗುರುವಾರ ಶುಕ್ರವಾರಶನಿವಾರಸೋಮವಾರಗಳಲ್ಲಿ ವಧೂ ಪ್ರವೇಶದಿಂದ ಸಂಪತ್ಪ್ರಾಪ್ತಿ ಯಾಗುವುದು.

## ತ್ರಿರಾಗಮನಮೂಹೂರ್ತ

ಅಲಿಧನುಮಕರಾರ್ಕೇ ಪೂರ್ವಸಂಸ್ಥೋ ಹಿ ರಾಹುಃ



ಘಟಶಫರ ತ ಥಾಜೇ ದಕ್ಷಿಣಸ್ಥೇ ಚ ತಸ್ಮಿನ್।

ವೃಷಿಮಿಥುಕುಲೀರೇ ಪಶ್ಚಿಮೇ ದಿಗ್ವಿಭಾಗೇ

ರಹಿಯುತಿತುಲಾಯಾಮುತ್ತರಸ್ಥೇ ಚ ರಾಹುಃ॥೪೮॥

ಅಗ್ರತೋ ರಾಹುರ್ವೈಧವ್ಯಂ ದಕ್ಷಿಣೇ ಸುತಹಾ ಭವೇತ್।

ಪೃಷ್ಠೇ ಪುತ್ರವತೀ ಪ್ರೋಕ್ತಾ ವಾಮೇ ಸೌಭಾಗ್ಯವರ್ಧನಮ್॥೪೯॥

ವೃಶ್ಚಿಕ-ಧನು-ಮಕರದಲ್ಲಿ ರವಿ ಇದ್ದಾಗ ಪೂರ್ವದಲ್ಲಿ ರಾಹು ಇರುವನು. ಕುಂಭ-ಮೀನ-ಮೇಷದಲ್ಲಿ ರವಿ ಇರಲು ದಕ್ಷಿಣದಲ್ಲಿ ರಾಹು ಇರುವನು. ವೃಷಭ-ಮಿಥುನ-ಕರ್ಕದಲ್ಲಿ ರವಿ ಇರಲು ಪಶ್ಚಿಮದಲ್ಲಿ ರಾಹು ಇರುವನು. ಸಿಂಹ-ಕನ್ಯಾ-ತುಲಾದಲ್ಲಿ ರವಿ ಇರಲು ಉತ್ತರದಲ್ಲಿ ರಾಹು ಇರುವನು. ಮುಂದೆ ರಾಹು ಇದ್ದರೆ ವೈಧವ್ಯ, ದಕ್ಷಿಣದಲ್ಲಿ ರಾಹು ಇದ್ದರೆ ಸಂತಾನ ಹಾನಿ. ಹಿಂದೆ ರಾಹು ಇದ್ದರೆ ಸುಪುತ್ರವತೀ, ಎಡದಲ್ಲಿ ರಾಹು ಇದ್ದರೆ ಸೌಭಾಗ್ಯವರ್ಧನೆಯು. ಆದ್ದರಿಂದ ಹಿಂಭಾಗದಲ್ಲಿ ಮತ್ತು ಎಡಭಾಗದಲ್ಲಿ ರಾಹು ಇರುವಂತೆ ತ್ರಿರಾಗಮನ ಮುಹೂರ್ತವನ್ನು ಇಡಬೇಕು.

ಮೇಷೇ ಪೂರ್ವೇ ವೃಷೇ ಯಾಮ್ಯೇ ಮಿಥುನೇ ಪಶ್ಚಿಮೇ ಸ್ಥಿತಃ

ಕರ್ಕಟೇ ಚೋತ್ತರೇ ರಾಹುರ್ಮಾಸಿಮಾಸಿ ವಿಚಾರಯೇತ್॥೫೦॥

ತ್ರೈಮಾಸಿಕಂ ತಡಾಗಾದೌ ಮಾಸಿಕಂ ಹ್ಯಂಗಕರ್ಮಣಿ।

ಯಾಮಾರ್ಧಂ ಯುದ್ಧಕಾರ್ಯೇಷು ರಾಹುಸ್ತತ್ರ ವಿಚಾರಯೇತ್॥

ಮೇಷದಲ್ಲಿ ಸೂರ್ಯನಿದ್ದಾಗ ಪೂರ್ವ, ವೃಷಭದಲ್ಲಿ ಸೂರ್ಯನಿದ್ದಾಗ ದಕ್ಷಿಣ, ಮಿಥುನದಲ್ಲಿ ಸೂರ್ಯನಿದ್ದಾಗ ಪಶ್ಚಿಮ, ಕರ್ಕಟದಲ್ಲಿ ಸೂರ್ಯನಿರಲು ಉತ್ತರ ಹೀಗೆ ೧೨ ರಾಶಿಗಳಲ್ಲಿ ಸೂರ್ಯನ ಸಂಚಾರಾನುಸಾರ ರಾಹುವಿನ ದಿಗ್ವಾಸವನ್ನು ತಿಳಿಯಬೇಕು.

ಇತಿ ಶ್ರೀಕೃಷ್ಣಾರ್ಯಪುತ್ರೇಣ ಜ್ಯೋತಿರ್ವಿದು ಷಾವಿಜಯವಿಠಲಾಚಾರ್ಯೇಣ ವಿಲಿಖಿತೇ

ಸಮಗ್ರಜ್ಯೋತಿಷ್ಯ ಪಾರಿಜಾತೆಚತುರ್ಥಾಧ್ಯಾಯಃ ಸಂಪೂರ್ಣಮ್॥

# ಪಂಚಮೋಽಧ್ಯಾಯ

## ಜಾತಕಫಲ ಸಂಗ್ರಹ

## ಜನ್ಮಪತ್ರಲೇಖನ ರೀತಿ

ಮೊದಲು ಮಂಗಳಾಚರಣೆ, ನಂತರ ಸಂವತ್ಸರ ಶಕೆ,ಆಯನ, ಋತು, ಮಾಸ,ಪಕ್ಷ, ತಿಥಿ,ವಾರ,ನಕ್ಷತ್ರ,ಯೋಗ,ಕರಣ,ದಿನಮಾನ,ಇಷ್ಟಘಟೀ, ಘಂಟಾ,ಲಗ್ನ,ನವಾಂಶ, ಪಿತ್ರಾದಿನಾಮ, ಜನ್ಮನಕ್ಷತ್ರ ಚರಣ, ತತ್ಕಾಲ ಗ್ರಹಸಂಪತ್ತಿ,ಜನನಾಕಾಲದಶಾಭುಕ್ತಿ ಇವು ಸಾಮಾನ್ಯಮಾಹಿತಿಗೆ ಸಾಕು.

ಯತ್ಸೂರ್ಯರಾಶ್ಯಂಶಸಯಾನ ಕೋಷ್ಠೇ ಘಟ್ಯಾದಿಕಂ ಸ್ವೇಷ್ಟಘಟೀಯುತಂ ತತ್।
ತತ್ತುಲ್ಯ ಘಟ್ಯಾದಿಭವೇದ್ಧಿ ಯತ್ರ ತತ್ತಿರ್ಯಗೂರ್ಧ್ವಾಂಕಮಿತಂ ಹಿ ಲಗ್ನಮ್॥೨॥

ಲಗ್ನಪ್ರಮಾಣಗಳು ಆಯಾದೇಶದ ಅಕ್ಷಾಂಶಾನುಸಾರವಾಗಿರುತ್ತವೆ ಅದನ್ನು ಗುರುಮುಖೇನ ತಿಳಿಯಬೇಕು.

ಜನ್ಮಪತ್ರಿಕಾ ಲೇಖ ಪ್ರಕಾರಃ –

ಸಜಯತಿ ಸಿಂಧುರವದನೋ ದೇವೋ ಯತ್ಪಾದಪಂಕಜಸ್ಮರಣಮ್।
ವಾಸರಮಣಿರಿವ ತಮಸಾಂ ರಾಶೀನ್ನಾಶಯತು ವಿಘ್ನಾನಾಮ್॥೧॥
ಜನನೀಜನ್ಮಸೌಖ್ಯಾನಾಂ ವರ್ಧಿನೀ ಕುಲಸಂಪದಾಂ॥
ಪದವೀ ಪೂರ್ವ ಪುಣ್ಯಾನಾಂ ಲಿಖ್ಯತೇ ಜನ್ಮ ಪತ್ರಿಕಾ॥

ಶ್ರೀಮನ್ನೃಪಶಾಲಿವಾಹನಶಕ........ ತತ್ರ ಷಷ್ಟ್ಯಬ್ದಾನಾಂ ಮಧ್ಯೇ ಶ್ರೀ ಸಂವತ್ಸರೇ ಯನೇ ಋತೌ ಮಾಸೇ ಪಕ್ಷೇ ತಿಥೌ ಘಂ ನಿ. ನಕ್ಷತ್ರೇ ಘಂ ನಿ. ಯೋಗೇ ಘಂ ನಿ. ಕರಣೇ ಘಂ ನಿ.ಸೂರ್ಯೋದಯು (ದಿನಾಂಕೇ ) ಅಸ್ಮಿನ್ ಶುಭದಿವಸೇ ಸೂರ್ಯೋದಯಾದಿ ಘಂ ನಿ( ) ಶ್ರೀಮನ್॥ ಮಾ॥ ರಾ॥ ಶ್ರೀ ಮ॥ಶಾ॥ಪ್ರ॥ಶ್ರೀ ನಾಮಧೇಯಸ್ಯ ಧರ್ಮಪತ್ನೀ ಚಿ॥ ಸೌ॥ ನಾಮ್ನ್ಯಾಃ ಗರ್ಭಸುಧಾಸಾಗರೇ ಪುತ್ರ(ತ್ರೀ)ರತ್ನ ಮಜೀಜನತ್–

ತಾತ್ಕಾಲಿಕ ಗ್ರಹಸಂಪದಃ

| | | | | | | | | | |
|---|---|---|---|---|---|---|---|---|---|
| ನಕ್ಷತ್ರ | | | | | | | | | |
| ಪಾದ | | | | | | | | | |
| ಗ್ರಹಃ | ರವಿಃ | ಚಂದ್ರಃ | ಕುಜಃ | ಬುಧಃ | ಗುರುಃ | ಶುಕ್ರಃ | ಶನಿಃ | ರಾಹುಃ | ಕೇತುಃ |



ಏವಂ ಗ್ರಹಸ್ಥಿತಯಃ

ಶ್ರೀ
ಜನನಲಗ್ನ
ಕುಂಡಲಿ

ಶ್ರೀ
ನವಾಂಶ
ಕುಂಡಲಿ

ಜನನಕಾಲೇ ಮಹಾದಶಾ
ಗರ್ಭಗತ ಸಂ ಮಾಸ ದಿನಾನೀ
ಏಷ್ಯಕಾಲಮಾನಾಃ ಸಂ ಮಾಸ ದಿನಾನಿ.

ಆದಿತ್ಯಾದಿ ನವಗ್ರಹ ಪ್ರಸಾದೇನ ಮತಾಪಿತ್ರೋಶ್ಚ ಶಿಶೋಶ್ಚ ಆಯುರಾರೋಗ್ಯ
ಐಶ್ವರ್ಯಾಭಿವೃದ್ಧಿರಸ್ತು
ಶುಭಂ ಭೂಯಾತ್॥

### ದ್ವಾದಶಭಾವವಿಚಾರ

ತನುರ್ಧನಂಸೋದರಮಿತ್ರಪುತ್ರಶತ್ರುಪ್ರಿಯಾಮೃತ್ಯುಶುಭಾಃ ಕ್ರಮೇಣ।
ಕರ್ಮಾಯಸಂಜ್ಞೌ ವ್ಯಯನಾಮಧೇಯೌ ಲಗ್ನಾದಿ ಭಾವಾ ವಿಬುಧೈರಿಹೋಕ್ತಾಃ॥೨॥

ತನು,ಧನ,ಸಹೋದರ,ಮಿತ್ರ,ಪುತ್ರ,ಶತ್ರು,ಕಳತ್ರ,ಮೃತ್ಯು,ಶುಭ, ಕರ್ಮ,ಲಾಭ,ವ್ಯಯ ಎಂಬುದಾಗಿ ಲಗ್ನಾದಿ ಭಾವಗಳನ್ನು ಜ್ಞಾನಿಗಳಿಂದ ಹೇಳಲ್ಪಟ್ಟಿದೆ.

ಯೋಯೋ ಭಾವಃ ಸ್ವಾಮಿದೃಷ್ಟೋ ಯುತೋವಾ ಸೌಮ್ಯೈರ್ವಾ ಸ್ಯಾತ್ತಸ್ಯ ತಸ್ಯಾಸ್ತಿ
ವೃದ್ಧಿಃ। ಪಾಪೈರೇವಂ ತಸ್ಯ ಭಾವಸ್ಯ ಹಾನಿರ್ನಿದಿಷ್ಟವ್ಯಾಪೃಚ್ಛತಾಂ ಜನ್ಮತೋ ವಾ॥೩॥

ಯಾವ–ಯಾವ ಭಾವವು ಆ ಸ್ಥಾನದಸ್ವಾಮಿಯಿಂದ ದೃಷ್ಟವಾಗಿ ಯಾದರೂ, ಕೂಡಿದ್ದರೂ,

ಶುಭಗ್ರಹರಿಂದ ಕೂಡಿದ್ದರೂ ದೃಷ್ಟವಾದರೂ ಆ ಭಾವಕ್ಕೆ ವೃದ್ಧಿಯನ್ನು ಹೇಳಬೇಕು. ಹೀಗೆ ಯಾವ- ಯಾವ ಭಾವವು ಪಾಪಗ್ರಹರಿಂದ ಕೂಡಿದ್ದರೂ ದೃಷ್ಟವಾದರೂ ಆ ಭಾವಕ್ಕೆ ಹಾನಿಯನ್ನು ವಿಚಾರಿಸಿ ಪ್ರಶ್ನಸಮಯಕ್ಕೂ, ಜನ್ಮಕುಂಡಲಿಯಲ್ಲಿ ನಿರ್ಣಯಿಸಬೇಕು.

**ದೃಷ್ಟಿವಿಚಾರಃ**

ಪಾದೈಕ ದೃಷ್ಟಿರ್ದಶಮೇ ತೃತೀಯೇ ದ್ವಿಪಾದದೃಷ್ಟಿರ್ನವಪಂಚಮೇ ಚ।
ತ್ರಿಪಾದದೃಷ್ಟಿಶ್ಚತುರಷ್ಟಕೇ ವಾ ಸಂಪೂರ್ಣದೃಷ್ಟಿಃ ಕಿಲ ಸಪ್ತಕೇ ಚ॥೪॥
ತೃತೀಯೇ ದಶಮೇ ಮಂದೋ ನವಮೇ ಪಂಚಮೇ ಗುರುಃ।
ವಿಂಶತೀಂ ವೀಕ್ಷ್ಯತೇ ವಿಶ್ವಾಂ ಚತುರ್ಥೇ ಚಾಷ್ಟಮೇ ಕುಜಃ॥೫॥

ಎಲ್ಲಾಗ್ರಹರು ತಾವಿರುವ ಸ್ಥಾನದಿಂದ ೧೦-೩ನೆಯಸ್ಥಾನವನ್ನು ಪಾದದೃಷ್ಟಿಯಿಂದಲೂ, ೫-೯ನೆಯ ಸ್ಥಾನವನ್ನು ಅರ್ಧದೃಷ್ಟಿಯಿಂದಲೂ, ೪-೮ಸ್ಥಾನವನ್ನು ಮುಕ್ಕಾಲುದೃಷ್ಟಿಯಿಂದಲೂ, ೭ನೆಯ ಸ್ಥಾನವನ್ನು ಪೂರ್ಣದೃಷ್ಟಿಯಿಂದಲೂ ನೋಡುವರು. ಆದರೆ ಗುರುವು ೭ನೆಯ ಸ್ಥಾನವಲ್ಲದೆ ೫-೯ ಸ್ಥಾನವನ್ನು ಪೂರ್ಣವಾಗಿ ನೋಡುವನು. ಕುಜನು ೭ನೆಯ ಸ್ಥಾನವಲ್ಲದೆ ೪-೮ಸ್ಥಾನನ್ನು ಪೂರ್ಣವಾಗಿ ನೋಡುವನು. ಶನಿ ೭ನೆಯ ಸ್ಥಾನವಲ್ಲದೆ ೩-೧೦ನೆಯ ಸ್ಥಾನವನ್ನು ಪೂರ್ಣವಾಗಿ ನೋಡವನು. ಫಲನಿರ್ಣಯಿಸುವಾಗ ಇದನ್ನು ಚೆನ್ನಾಗಿ ಗಮನಿಸಬೇಕು.

**ಶುಭಾಶುಭಯೋಗಗಳು**

ಮೂರ್ತೌಶುಕ್ರಬುಧೌ ಯಸ್ಯ ಕೇಂದ್ರೇ ಚೈವ ಬೃಹಸ್ಪತಿಃ।
ದಶಮೋಂಗಾರಕೋ ಯಸ್ಯ ಸ ಜ್ಞೇಯಃ ಕುಲದೀಪಕಃ॥೬॥

ಯಾವ ಜಾತಕನಿಗೆ ಲಗ್ನದಲ್ಲಿ ಶುಕ್ರಬುಧರು, ಕೇಂದ್ರದಲ್ಲಿ ಬೃಹಸ್ಪತಿಯು, ದಶಮದಲ್ಲಿ ಕುಜನು ಇರುವರೋ ಅವನು ಕುಲದೀಪಕನಾಗುವನೆಂದು ತಿಳಿಯಬೇಕು.

ನಾಸ್ತಿ ಶುಕ್ರ ಬುಧೋ ನೈವ ನಾಸ್ತಿ ಕೇಂದ್ರೇ ಬೃಹಸ್ಪತಿಃ।
ದಶಮೋಂಗಾರಕೋ ನೈವ ಸ ಜಾತಃ ಕಿಂ ಕರಿಷ್ಯತಿ॥೭॥

ಕೇಂದ್ರದಲ್ಲಿ ಶುಕ್ರ,ಬುಧ,ಗುರುಗಳ ಇಲ್ಲದೆ, ದಶಮದಲ್ಲಿ ಕುಜನಿಲ್ಲದೆ ಇರುವಂತೇ ಹುಟ್ಟಿರುವವನ ಜಾತಕವು ಏನೂ ಶುಭಫಲ ಹೊಂದಿರುವುದಿಲ್ಲ ವೆಂದು ತಿಳಿಯಬೇಕು.

ಷಷ್ಠೇ ಚ ಭವನೇ ಭೌಮೋ ರಾಹು ಸಪ್ತಮ ಸಂಭವಃ।
ಅಷ್ಟಮೇ ಚ ಯದಾ ಸೌರಿಸ್ತಸ್ಯ ಭಾರ್ಯಾ ನ ಜೀವತಿ॥೮॥

೬ನೆಯಸ್ಥಾನದಲ್ಲಿ ಕುಜ,ರಾಹುವು ಏಳನೆಯಸ್ಥಾನದಲ್ಲೂ, ಎಂಟರಲ್ಲಿ ಶನಿ ಇದ್ದರೆ



ಶುಭಯೋಗವಿಲ್ಲವಾದರೆ ಜಾತಕ ಭಾರ್ಯೆಯು ಬದುಕುವುದಿಲ್ಲ.

ಷಷ್ಠೇಚ ದ್ವಾದಶೇ ರಾಶೌ ಯದಾ ಪಾಪಗ್ರಹೋ ಭವೇತ್।
ತದಾ ಮಾತೃಭಯಂ ವಿದ್ಯಾಚ್ಚತುರ್ಥೇ ದಶಮೇ ಪಿತುಃ॥೯॥

೬-೧೨ನೆಯ ಸ್ಥಾನಗಳಲ್ಲಿ ಪಾಪಗ್ರಹರಿದ್ದರೆ ತಾಯಿಗೆ ಅರಿಷ್ಟ, ೪-೧೦ ನೆಯ ಸ್ಥಾನಗಳಲ್ಲಿ ತಂದೆಗೆ ಅರಿಷ್ಟ.

ಲಗ್ನಸ್ಥಾನೇ ಯದಾ ಸೌರಿಃ ಷಷ್ಠೇ ಭವತಿ ಚಂದ್ರಮಾಃ।
ಕುಜಸ್ತು ಸಪ್ತಮಸ್ಥಾನೇ ಪಿತಾ ತಸ್ಯ ನಜೀವತಿ॥೧೦॥

ಜನ್ನಲಗ್ನದಲ್ಲಿ ಶನಿ,೬ರಲ್ಲಿ ಚಂದ್ರ, ಕುಜನು ೭ ಸ್ಥಾನದಲ್ಲಿದ್ದರೆ ತಂದೆ ಬದುಕುವುದಿಲ್ಲ.

ಜನ್ಮಲಗ್ನೇ ಯದಾ ರಾಹುಃ ಷಷ್ಠೇ ಭವತಿ ಚಂದ್ರಮಾಃ।
ಜಾತೋ ಮೃತ್ಯುಮವಾಪ್ನೋತಿ ಕುದೃಷ್ಟ್ಯಾಂ ತ್ವಪಮೃತ್ಯುನಾ॥೧೧॥

ಜನ್ಮಲಗ್ನದಲ್ಲಿ ರಾಹು, ಷಷ್ಠದಲ್ಲಿ ಚಂದ್ರಇದ್ದಾಗ ಹುಟ್ಟಿದ ಶಿಶುವು ಬದುಕುವುದಿಲ್ಲ ಮತ್ತು ಪಾಪದೃಷ್ಟಿ ಇದ್ದರಂತೂ ಅಪಮೃತ್ಯುವಶ ವಾಗುವುದು.

ಪಾತಾಲಸ್ಥೋ ಯದಾ ರಾಹುಶ್ಚೇಂದುಃ ಷಷ್ಠಾಷ್ಟಮೇಪಿ ಚ।
ಪಾಪದೃಷ್ಟೋ ಪಿ ಶೇಷೇಣ ಸದ್ಯಃಪ್ರಾಣಹರಃಶಿಶೋಃ॥೧೨॥

೪ನೆಯ ಸ್ಥಾನದಲ್ಲಿ ರಾಹು, ೬ ಅಥವಾ ೮ರಲ್ಲಿ ಚಂದ್ರರಿದ್ದು ಪಾಪಗ್ರಹರಿಂದ ದೃಷ್ಟರಾದರೆ ಹುಟ್ಟಿದ ತಕ್ಷಣ ಶಿಶುವಿನ ಪ್ರಾಣಹೋಗುವುದು.

ಜನ್ಮಲಗ್ನೇ ಯದಾ ಭೌಮಶ್ಚಾಷ್ಟಮೇ ಚ ಬೃಹಸ್ಪತಿಃ।
ವರ್ಷೇಚ ದ್ವಾದಶೇ ಮೃತ್ಯುರ್ಯದಿ ರಕ್ಷತಿ ಶಂಕರಃ॥೧೩॥

ಜನ್ಮಲಗ್ನದಲ್ಲಿ ಕುಜ,೮ರಲ್ಲಿ ಗುರುವಿರಲು ಹುಟ್ಟಿದ ಶಿಶುವನ್ನು ಶಂಕರನೇ ರಕ್ಷಿಸಿದರೂ ೧೨ ನೆಯ ವರ್ಷದಲ್ಲಿ ಮೃತ್ಯುವಶವಾಗುವುದು.

ಶನಿಕ್ಷೇತ್ರೇ ಯದಾ ಸೂರ್ಯೋ ಭಾನುಕ್ಷೇತ್ರೇ ಯದಾ ಶನಿಃ।
ವರ್ಷೇ ಚ ದ್ವಾದಶೇ ಮೃತ್ಯುರ್ದೇವೋ ವೈ ರಕ್ಷಿತಾ ಯದಿ ॥೧೪॥

ಹುಟ್ಟಿದ ಶಿಶುವಿನ ಕುಂಡಲಿಯಲ್ಲಿ ಶನಿಕ್ಷೇತ್ರದಲ್ಲಿ ರವಿ ಮತ್ತು ರವಿಕ್ಷೇತ್ರದಲ್ಲಿ- ಶನಿ ಹೀಗೆ ಯೋಗವುಂಟಾದರೆ ಆ ಶಿಶುವನ್ನು ದೇವತೆಗಳು ರಕ್ಷಿಸಿದರೂ ೧೨ ನೆಯ ವರ್ಷದಲ್ಲಿ ಮೃತ್ಯುವನ್ನು ಹೊಂದುವನು.

ಷಷ್ಠೋಷ್ಟಮಸ್ತಥಾ ಮೂರ್ತೌ ಜನ್ಮಕಾಲೇ ಯದಾ ಬುಧಃ।
ಚತುರ್ಥವರ್ಷೇ ಮೃತ್ಯುಶ್ಚ ಯದಿ ರಕ್ಷತಿ ಶಂಕರಃ॥೧೫॥

೬–೮ ಅಥವಾ ಜನ್ಮಲಗ್ನದಲ್ಲಿ ಬುಧ ಇದ್ದಾಗ ಹುಟ್ಟಿದವನು ಶಿವನೇ ರಕ್ಷಿಸಿದರೂ ೪ನೆಯ ವರ್ಷದಲ್ಲಿ ಮೃತ್ಯುಹೊಂದುವನು.

ಭೌಮಕ್ಷೇತ್ರೇ ಯದಾ ಜೀವಃ ಷಷ್ಟಾಷ್ಟಾಸು ಚ ಚಂದ್ರಮಾಃ।
ವರ್ಷೇಷ್ಟಮೇಪಿ ಮೃತ್ಯುರ್ವ್ಯೆ ಈಶ್ವರೋ ರಕ್ಷಿತಾ ಯದಿ॥೧೬॥

ಕುಜಕ್ಷೇತ್ರ ಗುರು, ೬–೮ರಲ್ಲಿ ಚಂದ್ರ ಇದ್ದಾಗ ಹುಟ್ಟಿದವನು ಶಿವನೇ ರಕ್ಷಿಸಿದರೂ ೮ನೆಯ ವರ್ಷದಲ್ಲಿ ಷ್ಟಮೇಪಿ ಮೃತ್ಯುವನ್ನು ಹೊಂದುವನು.

ದಶಮೋಪಿ ಯದಾ ರಾಹುರ್ಜನ್ಮಲಗ್ನೇ ಯದಾ ಭವೇತ್।
ವರ್ಷೇತು ಷೋಡಶೇ ಮೃತ್ಯುರ್ವ್ಯೆ ಭವೇತ್ ತನ್ನರಸ್ಯ ಚ॥೧೭॥

೧೦ನೆಯ ಸ್ಥಾನದಲ್ಲಿ ರಾಹು ಇರುವಾಗ ಹುಟ್ಟಿದವನು ೧೬ ವರ್ಷದಲ್ಲಿ ಮೃತ್ಯುವನ್ನು ಹೊಂದುವನು.

## ತನುಭಾವ

ಲಗ್ನ ಸ್ಥಿತೋ ದಿನಕರಃ ಕುರುತೇಂಗ ಪೀಡಾಂ ಪೃಥ್ವೀಸುತೋ ವಿತನುತೇ ರುಧಿರಪ್ರಕೋಪಮ್।
ಛಾಯಾಸುತಃ ಪ್ರಕುರುತೇ ಬಹುದುಃಖಭಾಜಂಜೀವೇಂದುಭಾರ್ಗವಬುಧಾಃ ಸುಖಕಾಂತಿದಾಃ ಸ್ಯುಃ॥೧೮॥

ಜನ್ಮಲಗ್ನದಲ್ಲಿ ರವಿಯು ಅಂಗಪೀಡೆಯನ್ನು, ಕುಜನು ರಕ್ತಾಭಿಸರಣವನ್ನು,ಶನಿ ಬಹುದುಃಖವನ್ನು,ಗುರು–ಚಂದ್ರ–ಶುಕ್ರ–ಬುಧರು ಸುಖ–ಕಾಂತಿಗಳನ್ನು ಕೊಡುವರು.

## ಧನಭಾವ

ದುಃಖಾವಹಾ ಧನವಿನಾಶಕರಾಃ ಪ್ರದಿಷ್ಟಾವಿತ್ತೇ ಸ್ಥಿತಾ ರವಿಶನೈಶ್ಚರಭೂಮಿಪುತ್ರಾಃ।
ಚಂದ್ರೋ ಬುಧಂ ಸುರಗುರುರ್ಭೃಗುನಂದನೋವಾ ನಾನಾವಿಧಂ ಧನಚಯಂ ಕುರುತೇ ಧನಸ್ಥಃ॥೧೯॥

ರವಿ–ಶನಿ–ಕುಜರು ಧನಭಾವದಲ್ಲಿದ್ದರೆ ಧನನಾಶಮಾಡಿ ದುಃಖ ಕೊಡುವರು. ಚಂದ್ರ–ಬುಧ–ಗುರು–ಶುಕ್ರರು ನಾನಾರೀತಿಯಿಂದ ಧನಾಗಮ ವನ್ನುಂಟು ಮಾಡುವರು.

## ಸಹಜಭಾವ

ಭಾನುಕರೋತಿ ವಿರುಜಂ ರಜನೀಕರೋಪಿಕೀರ್ತ್ಯಾಯುತಂ ಕ್ಷಿತಿಸುತಃ ಪ್ರಚುರಪ್ರಕೋಪಮ್।
ಋದ್ಧಿಂ ಬುಧಂ ಸುಧಿಷಣಂ ಸುವಿನೀತವೇಷಂ ಸ್ತ್ರೀಣಾಂ ಪ್ರಿಯಂ ಗುರುಕವೀ ರವಿಜಸ್ತೃತೀಯೇ॥೨೦॥

ತೃತೀಯಭಾವದಲ್ಲಿರುವ ರವಿಯು,ಚಂದ್ರನು ಆರೋಗ್ಯವನ್ನು, ಕುಜನು ಕೀರ್ತಿಯನ್ನು ಮತ್ತು ಮಹಾಕೋಪವನ್ನು, ಬುಧನು ಅಭಿವೃದ್ಧಿಯನ್ನು, ಗುರು,ಶುಕ್ರ,ಶನಿಗಳು ಚತುರಮತಿ,ಸುಂದರ, ಸ್ತ್ರೀಯರಿಗೆ ಪ್ರಿಯನನ್ನಾಗಿ ಮಾಡುವರು.

## ಮಿತ್ರಭಾವ

ಅದಿತ್ಯಭೌಮಶನಯಃ ಸುಖವರ್ಜಿತಾಂಕಂ ಕುರ್ವಂತಿ ಜನ್ಮನಿ ವನಂ ಸುಚಿರಂ ಚತುರ್ಥೇ।



ಸೋಮೋ ಬುಧಃ ಸುರಗುರುರ್ಭೃಗುನಂದನೋ ವಾ ಸೌಖ್ಯಾನ್ವಿತಂ ಚ
ನೃಪಕರ್ಮರತಪ್ರಧಾನಮ್॥೨೧॥

ಚತುರ್ಥಭಾವದಲ್ಲಿರುವ ರವಿ–ಕುಜ–ಶನಿಗಳು ಬಹುಕಾಲ ದೇಹಕ್ಕೆ ಸುಖ ವಿಲ್ಲದಂತೆಯೂ,ಚಂದ್ರ,ಬುಧ,ಗುರು,ಶುಕ್ರರು ಸೌಖ್ಯದಿಂದ ಕೂಡಿ ಪ್ರಧಾನರಾಜಕರ್ಮ ಯುಕ್ತನಾಗಿ ಮಾಡುವರು.

## ಪುತ್ರಭಾವ

ಪುತ್ರೇ ರವಿಃ ಪ್ರಚುರಕೋಪಯುತಂ ಬುಧಶ್ಚ ಸ್ವಲ್ಪಾತ್ಮಜಂ ಶನಿಧರಾತನುಜಾವಪುತ್ರಮ್।
ಶುಕ್ರೇಂದುದೇವಗುರವಃ ಸುತಧಾಮಸಂಸ್ಥಾಃ ಕುರ್ವಂತಿ ಪುತ್ರಬಹುಲಂ ಸುಖಿನಂ ಸುರೂಪಮ್

ಪಂಚಮಭಾವದಲ್ಲಿರುವ ರವಿಯು ಮಹಾಕೋಪಿಷ್ಠನನ್ನಾಗಿಯೂ, ಬುಧನು ಸ್ವಲ್ಪಸಂತಾನಿಯಾಗಿಯೂ, ಶನಿ–ಕುಜರು ಸಂತಾನಹೀನ ನನ್ನಾಗಿಯೂ, ಶುಕ್ರ,ಚಂದ್ರ, ಗುರುಗಳು ಸುಖಿಯನ್ನೂ, ಬಹುಳ ಸುಸಂತಾನ ಉಂಟಾಗುವಂತೆ ಮಾಡುವರು.

## ಶತ್ರುಭಾವ

ಮಾರ್ತಂಡಭೂಮಿತನಯೌ ಹ್ಯರಿಪಕ್ಷನಾಶಂ ಮಂದಃ ಕರೋತಿ ಪುರುಷಂ ಬಹುರಾಜ್ಯಮಾನಮ್।
ಶುಕ್ರೋ ಬುಧೋ ಹಿ ಕುಮತಿಂ ಸರುಜಂ ಚ ಜೀವಶ್ಚಂದ್ರಃ ಕರೋತಿ ವಿಕಲಂ ವಿಫಲಪ್ರಯತ್ನಮ್॥೨೩॥

ಷಷ್ಠಭಾವದಲ್ಲಿರುವ ರವಿ–ಕುಜರು ಶತ್ರುಸಮೂಹದ ನಾಶವನ್ನು, ಶನಿಯು ಅನೇಕರಾಜರಿಂದ ಮಾನ ಮರ್ಯಾದೆಯನ್ನು, ಶುಕ್ರ,ಬುಧರು ಕುಬುದ್ಧಿ,ರೋಗಿಷ್ಟ ನನ್ನಾಗಿಯೂ,ಗುರು–ಚಂದ್ರರು ವಿಕಲಾಂಗನಾಗಿಯೂ, ನಿಷ್ಫಲಪ್ರಯತ್ನವುಳ್ಳವನ ನ್ನಾಗಿಯೂ ಮಾಡುವರು.

## ಕಳತ್ರಭಾವ

ತಿಗ್ಮಾಂಶುಭೌಮರವಿಜಾಃ ಕಿಲ ಸಪ್ತಮಸ್ಥಾ ಜಾಯಾಂ ಕುಕರ್ಮನಿರತಾಂ ತನುಸಂತತಿಂ ಚ।
ಜೀವೇಂದುಭಾರ್ಗವಬುಧಾ ಬಹು ಪುತ್ರಯುಕ್ತಾಂರೂಪಾನ್ವಿತಾಂ ಜನಮನೋಹರರೂಪಶೀಲಾಮ್॥೨೪॥

ಸಪ್ತಮಭಾವದಲ್ಲಿರುವ ರವಿ–ಕುಜ–ಶನಿಗಳು ದುಷ್ಟಕಾರ್ಯನಿರತಳಾದ ಭಾರ್ಯೆ ಯನ್ನು,ದುಷ್ಟಕಾರ್ಯನಿರತ ಸಂತತಿಯನ್ನು, ಗುರು,ಚಂದ್ರ,ಶುಕ್ರ,ಬುಧರು ಬಹು ಪುತ್ರಯುತ, ರೂಪಸಿಯಾದ ಸುಶೀಲೆಯದಾ ಭಾರ್ಯೆಯನ್ನು ಕೊಡುವರು.

## ನಿಧನಭಾವ

ಸರ್ವೇ ಗ್ರಹಾ ದಿನಕರಪ್ರಮುಖಾ ನಿತಾಂತಂ ಮೃತ್ಯುಸ್ಥಿತಾ ವಿದಧತೇ ಕಿಲ ದುಷ್ಟಬುದ್ಧಿಮ್।
ಶಸ್ತ್ರಾಭಿಘಾತಪರಿಪೀಡಿತಗಾತ್ರಭಾಗಂ ಸೌಖ್ಯೈರ್ವಿಹೀನಮತಿರೋಗಗಣೈರುಪೇತಮ್॥೨೫॥

ರವ್ಯಾದಿ ಎಲ್ಲಗ್ರಹರೂ ಅಷ್ಟಮಭಾವದಲ್ಲಿದ್ದರೆ ಜಾತಕನನ್ನು ದುಷ್ಟಬುದ್ಧಿ ಯನ್ನಾಗಿ ಮಾಡುವರು, ಶರೀರದ ಯಾವುದಾದರೂ ಅಂಗ ಶಸ್ತ್ರಾಘಾತದಿಂದ ಪೀಡಿತ ವಾಗುವಂತೆ

ಮಾಡುವರು. ಸೌಖ್ಯರಹಿತರನ್ನೂ,ಅನೇಕರೋಗಗಳಿಂದ ಕೂಡಿರು ವಂತೆಯೂ ಮಾಡುವರು.

## ಧರ್ಮಭಾವ

ಧರ್ಮಸ್ಥಿತಾ ರವಿಶನೈಶ್ಚರಭೂಮಿಪುತ್ರಾಃ ಕುರ್ವಂತಿ ಧರ್ಮರಹಿತಂ ವಿಮತಿಂ ಕುಶೀಲಮ್।
ಚಂದ್ರೋ ಬುಧೋ ಭೃಗುಸುತಶ್ಚ ಸುರೇಂದ್ರಮಂತ್ರೀ ಧರ್ಮಕ್ರಿಯಾಸು ನಿರತೇ ಕುರುತೇ ಮನುಷ್ಯಮ್॥೨೬॥

ನವಮಭಾವದಲ್ಲಿರುವ ರವಿ–ಶನಿ–ಕುಜರು ಜಾತಕನನ್ನು ಧರ್ಮರಹಿತ ನನ್ನಾಗಿಯೂ,ಮತಿಹೀನನನ್ನಾಗಿಯೂ,ಶೀಲರಹಿತನನ್ನಾಗೀಯೂ ಮಾಡುವರು. ಚಂದ್ರ,ಬುಧ,ಶುಕ್ರ,ಗುರುಗಳು ನವಮಭಾವದಲ್ಲಿದ್ದರೆ ಧಾರ್ಮಿಕ ಕರ್ಮನಿರತನನ್ನಾಗಿ ಜಾತಕನನ್ನು ಮಾಡುವರು.

## ಕರ್ಮಭಾವ

ಆದಿತ್ಯ ಭೌಮ ಶನಯಃ ಕಿಲ ಕರ್ಮಸಂಖ್ಯಾಃ ಕುರ್ಯುರ್ನರಂ ಬಹುಕುಕರ್ಮರತಂ ಕುಪುತ್ರಮ್।
ಚಂದ್ರಃ ಸುಕೀರ್ತಿಮುಶನಾ ಬಹುವಿತ್ತಯುಕ್ತಂ ರೂಪಾನ್ವಿತಂ ಬುಧಗುರೂ ಶುಭಕರ್ಮಭಾಜಮ್॥೨೭॥

ದಶಮಭಾವದಲ್ಲಿ ರವಿ–ಕುಜ–ಶನಿಗಳು ಜಾತಕನನ್ನು ಬಹುಕುಕರ್ಮಿ ಯನ್ನಾಗೀಯೂ, ಕುಪುತ್ರಯುತನಾಗಿಯೂ ಮಾಡುವರು. ಚಂದ್ರನು ಸುಕೀರ್ತಿಯನ್ನು, ಶುಕ್ರನು ಬಹುಧನಿಕನನ್ನು, ಸುಂದರನನ್ನು, ಬುಧ–ಗುರಗಳು ಶುಭಕರ್ಮದಲ್ಲಿ ಆಸಕ್ತಿಯನ್ನು ಕೊಡುವರು.

## ಲಾಭಭಾವ

ಲಾಭಸ್ಥಿತೋ ದಿನಕರೋ ನೃಪಲಾಭಕಾರೀ ತಾರಾಪತಿರ್ಬಹುಧನಂ ಕ್ಷಿತಿಜಶ್ಚ ನಾರೀ।
ಸೌಮ್ಯೋ ವಿವೇಕಸತತಂ ಸುಭಗಂ ಚ ಜೀವಃ ಶುಕ್ರೇ ಕರೋತಿ ಧನಿನಂ ರವಿಜಃ ಸುಕೀರ್ತಿಮ್॥೨೮॥

ಲಾಭಭಾವದಲ್ಲಿರುವ ರವಿಯು ರಾಜರಿಂದ ಲಾಭವನ್ನು, ಚಂದ್ರನು ಬಹುಧನವನ್ನು, ಕುಜನು ಸ್ತ್ರೀಸುಖವನ್ನು, ಬುಧನು ಸುಜ್ಞಾನವನ್ನು, ಗುರುವು ಐಶ್ವರ್ಯವಂತನನ್ನು, ಶುಕ್ರನು ಧನವಂತನನ್ನಾಗಿಯೂ, ಶನಿಯು ಕೀರ್ತವಂತನನ್ನಾಗಿ ಮಾಡುವರು.

## ವ್ಯಯಭಾವ

ಸೂರ್ಯಃ ಕರೋತಿ ಪುರುಷಂ ವ್ಯಯಗೋ ವಿಶೀಲಂ ಕಾಣಂ ಶಶಿ ಕ್ಷಿತಿಸುತೋ ಬಹು ಪಾಪಭಾಜಮ್।
ಚಂದ್ರಾತ್ಮಜೋ ಗತಧನಂ ಧಿಷಣೇಃ ಕೃಶಾಂಗಂ ಶುಕ್ರೋ ಬಹುವ್ಯಯಕರಂ ರವಿಜಃ ಸುತೀಕ್ಷ್ಣಮ್॥೨೯॥

ವ್ಯಯಭಾವದಲ್ಲಿರುವ ರವಿಯು ಕುಶೀಲನನ್ನು, ಚಂದ್ರನು ಕುರುಡನನ್ನು,ಕುಜನು ಬಹುಪಾಪಕರ್ಮಿಯನ್ನು, ಬುಧನು ಧನಹೀನನನ್ನು, ಗುರುವು ದುರ್ಬಲದೇಹಿ ಯಾಗಿಯೂ, ಶುಕ್ರನು ಬಹುಖರ್ಚನ್ನು, ಶನಿಯು ತೀಕ್ಷ್ಣಪ್ರಕೃತಿಯವನನ್ನಾಗಿಯೂ ಮಾಡುವರು.

ಶನಿವದ್ರಾಹುಃ ಕುಜವತ್ಕೇತುರಿತಿ ರಾಹುಕೇತುಫಲಂ। ಜ್ಞೇಯಂ ಋಷಿಭಿಃ ಪೂರ್ವೈ ಗ್ರಂಥೈಃ ಗ್ರಥಿತಃ॥೩೦॥

ಶನಿಯಂತೆ ರಾಹು, ಕುಜನಂತೆ ಕೇತು ಎಂದು ಋಷಿಗಳು ಗ್ರಂಥಗಳಲ್ಲಿ ಹೇಳಿದಂತೆ



ರಾಹುಕೇತುಗಳಫಲಗಳನ್ನು ತಿಳಿಯಬೇಕು.

## ಉಚ್ಚನೀಚರಾಶಿಗಳು

ರವಿರ್ಮೇಷೋ ತುಲೇ ನೀಚೋ ವೃಷೇ ಚಂದ್ರಸ್ತು ವೃಶ್ಚಿಕೇ।
ಭೌಮಶ್ಚ ನಕ್ರಕರ್ಕೇಚ ಸ್ತ್ರಿಯಾಂಸೌಮ್ಯೋ ಝಷಸ್ತಥಾ॥೩೧॥
ಗುರುಃ ಕರ್ಕೇಚ ನಕ್ರೇ ಚ ಮೀನೇ ಕನ್ಯೇ ಸಿತಸ್ಯ ಚ॥೩೨॥
ಮಂದಸ್ತುಲಾಯಾಂ ಮೇಷೇ ಚ ಕನ್ಯಾ ರಾಹು ಗೃಹಸ್ತಥಾ॥೩೨॥
ರಾಹುರ್ಯುಗ್ಮೇ ತು ಚಾಪೇ ಚ ತಸ್ಮಾತ್ಸಪ್ತಮಗಃ ಶಿಖೀ।
ಪ್ರೋಕ್ತಂ ಗ್ರಹಾಣಾಂ ಉಚ್ಚತ್ವಂ ನೀಚತ್ವಂಚ ಕ್ರಮಾತ್ಬುಧೈಃ॥೩೩॥

ರವಿಯು ಮೇಷದಲ್ಲಿ ಉಚ್ಚ, ತುಲೆಯಲ್ಲಿ ನೀಚ, ಚಂದನು ವೃಷಭಉಚ್ಚ ವೃಶ್ಚಿಕನೀಚ,ಕುಜನು ಮಕರಉಚ್ಚ,ಕರ್ಕನೀಚ, ಬುಧನು ಕನ್ಯೆಯಲ್ಲಿಉಚ್ಚ ಮೀನದಲ್ಲಿ ನೀಚ, ಗುರುವು ಕರ್ಕಉಚ್ಚ ಮಕರ ನೀಚ, ಶುಕ್ರನು ಮೀನಉಚ್ಚ, ಕನ್ಯಾನೀಚ, ಶನಿ ತಾಲಾಉಚ್ಚ,ಮೇಷೇ ನೀಚ, ರಾಹು ಕನ್ಯಾಸ್ವಕ್ಷೇತ್ರ ಮಿಥುನಉಚ್ಚ ಧನುಸ್ಸು ನೀಚ ರಾಹುಗೆ ಸಪ್ತಮ ಕೇತುವಿನ ಸ್ಥಾನವೆಂದು ತಿಳಿಯಬೇಕು.

ತ್ರಿಭಿಃ ಸ್ವಸ್ಥೋ ಭವೇನ್ಮಂತ್ರೀ ತ್ರಿಭಿರುಚ್ಚೈರ್ಭವೇನ್ನೃಪಃ।
ತ್ರಿಭಿರ್ನೀಚಗತ್ಯೈರ್ದಾಸಃ ತ್ರಿಭಿರಸ್ತಂಗತ್ಯೈರ್ಜಡಃ॥೩೪॥

ಮೂರುಗ್ರಹರು ಸ್ವಕ್ಷೇತ್ರದಲ್ಲಿದ್ದರೆ ಜಾತಕನು ಮಂತ್ರಿಯಂತೆ ಮೆರೆಯುವನು, ಮೂರು ಗ್ರಹರು ಉಚ್ಚಸ್ಥಾನದಲ್ಲಿದ್ದರೆ ಜಾತಕನು ರಾಜನಂತೆ ಮೆರೆಯುವನು, ಮೂರುಗ್ರಹರು ನೀಚತ್ವವನ್ನು ಹೊಂದಿದ್ದರೆ ಜಾತಕನು ಸೇವಕನಾಗುವನು. ಮೂರುಗ್ರಹರು ಅಸ್ತರಾಗಿದ್ದರೆ ಜಾತಕನು ಜಡನಂತೆ ಆಗುವನು.

## ಸ್ತ್ರೀಜಾತಕ

ಸಮ ವಿಲಗ್ನೇ ಯದಿ ಸಂಸ್ಥಿತಾಃ ಸ್ಯುರ್ಬಲಾನ್ವಿತಾಃ ಶುಕ್ರಬುಧೇಂದುಜೀವಾಃ।
ಸ್ಯಾತ್ಕಾಮಿನೀ ಬ್ರಹ್ಮವಿಚಾರಚರ್ಚಾಪರಾಗಮಜ್ಞಾನವಿರಾಜಮಾನಾ॥೩೫॥

ಸ್ತ್ರೀಜಾತಕದಲ್ಲಿ ಲಗ್ನವುಸಮರಾಶಿಯಾಗಿ ಅಲ್ಲಿ ಬಲಿಷ್ಟರಾದ ಶುಕ್ರ–ಬುಧ–ಚಂದ್ರ, ಗುರುಗಳು ಇದ್ದರೆ, ಜಾತಕಳು ಬ್ರಹ್ಮವಿಚಾರಚರ್ಚಾಪರಳೂ, ಪರೇಂಗಿತ ಜ್ಞಾನವುಳ್ಳವಳೂ ಆಗುವುಳು.

ಸಪ್ತಮೇ ಭಾರ್ಗವೇ ಜಾತಾ ಕುಲದೋಷಕರಾ ಭವೇತ್।
ಕರ್ಕರಾಶಿ ಸ್ಥಿತೇ ಭೌಮೇ ಸ್ವೈರಾ ಭ್ರಮತಿ ವೇಶ್ಮಸು॥೩೬॥

ಸಪ್ತಮದಲ್ಲಿ ಶುಕ್ರನಿದ್ದರೆ ಕುಲಕ್ಕೆ ಕಳಂಕತರುವಳು, ಕರ್ಕರಾಶಿಯಲ್ಲಿ ಕುಜನಿದ್ದರೆ ತನ್ನಿಷ್ಟದಂತೆ ಪರಗೃಹವಾಸಮಾಡುವಳು.

ಪಾಪಯೋರಂತರೇ ಲಗ್ನೇ ಚಂದ್ರೋ ವಾ ಯದಿ ಕನ್ಯಕಾ।

ಜಾಯತೇ ಚ ತದಾ ಹಂತಿ ಪಿತೃಶ್ವಶುರಯೋಃ ಕುಲಮ್॥೩೭॥

ಪಾಪಗ್ರಹಮಧ್ಯದಲ್ಲಿ ಲಗ್ನವಾಗಲೂ ಚಂದ್ರನಾಗಲೀ ಇದ್ದ ಜಾತಕಳು ತಂದೆ ಮತ್ತು ಮಾವನ ಕುಲವನ್ನು ನಾಶಮಾಡುವಳು.

ಲಗ್ನೇ ಚ ಸಪ್ತಮೇ ಪಾಪೇ ಸಪ್ತಮೇ ವತ್ಸರೇ ಪತಿಃ।

ಮ್ರಿಯತೇ ಚಾಷ್ಟಮೇ ವರ್ಷೇ ಚಂದ್ರಃ ಷಷ್ಠಾಷ್ಟಮೇ ಯದಿ॥೩೮॥

ಲಗ್ನ ಮತ್ತು ಸಪ್ತಮಗಳಲ್ಲಿ ಪಾಪರಿದ್ದರೆ ೭ನೆಯ ವರ್ಷದಲ್ಲಿ ಪತಿಯು ಸಾಯುವನು, ಚಂದ್ರನು ಷಷ್ಠಾಷ್ಟಮಗಳಲ್ಲಿದ್ದರೆ ೮ನೆಯವರ್ಷದಲ್ಲಿ ಪತಿಯುಸಾಯುವನು.

ದ್ವಾದಶೇ ಚಾಷ್ಟಮೇ ಭೌಮೇ ಕ್ರೂರೇ ತತ್ರೈವ ಸಂಸ್ಥಿತೇ।

ಲಗ್ನೇ ತು ಸಿಂಹಿಕಾಪುತ್ರೇ ರಂಡಾ ಭವತಿ ಕನ್ಯಕಾ॥೩೯॥

೧೨–೮ ರಲ್ಲಿ ಕುಜನು ಮತ್ತು ಕ್ರೂರಗ್ರಹರು ಇದ್ದು ಲಗ್ನದಲ್ಲಿ ರಾಹು ಇದ್ದರೆ ಜಾತಕಳು ವಿಧವೆಯಾಗುವಳು.

ಲಗ್ನಾತ್ಸಪ್ತಮಗಃ ಪಾಪಶ್ಚಂದ್ರಾತ್ ಸಪ್ತಮಗೋಪಿ ವಾ।

ಸದ್ಯೋ ನಿಹಂತಿ ದಂಪತ್ಯೋರೇಕಂ ನಾಸ್ತ್ಯತ್ರ ಸಂಶಯಃ॥೪೦॥

ಲಗ್ನದಿಂದ ೭ರಲ್ಲಿ ಪಾಪರಿರಲು ಅಥವಾ ಚಂದ್ರನಿಂದ ಸಪ್ತಮದಲ್ಲಿ ಪಾಪರಿರಲು ದಂಪತಿಗಳಲ್ಲಿ ಒಬ್ಬರನ್ನು ತಕ್ಷಣನಾಶಮಾಡುವರು.

ನಿಶಾಕರಃ ಪಾಪ ಖಗಾಂತರಸ್ಥಃ ಶಸ್ತ್ರಾಗ್ನಿಮೃತ್ಯುಂ ಕುಜಭೇ ಕರೋತಿ।

ಪಾಪೇ ಸ್ಮರಸ್ಥೇನ್ಯಖಗೇ ಚ ಧರ್ಮೇ ಕಿಲಾಂಗನಾ ಪ್ರವ್ರಜಿತತ್ವಮೇತಿ॥೪೧॥

ಚಂದ್ರನು ಪಾಪಗ್ರಹರ ಮಧ್ಯದಲ್ಲಿದ್ದರೆ ಶಸ್ತ್ರದಿಂದಲೂ, ಚಂದ್ರನು ಕುಜನ ಕ್ಷೇತ್ರದಲ್ಲಿದ್ದರೆ ಅಗ್ನಿಯಿಂದಲೂ ಮೃತ್ಯುಉಂಟಮಾಡುವನು. ಪಾಪರು ೭ರಲ್ಲೂ ಬೇರೇಗ್ರಹರು ೯ರಲ್ಲೂ ಇದ್ದರೂ ಸ್ತ್ರೀಯು ಕಾಷಾಯವಸ್ತ್ರಧರಿಸಿ ಸನ್ಯಾಸಿನಿಯಾಗುವಳು.

ರವಿಸುತೋ ಯದಿ ಕರ್ಕಮುಪಾಗತೋ ಹಿಮಕರೋ ಮಕರೋಪಗತೋ ಭವೇತ್।

ಕಿಲ ಜಲೋದರಸಂಜನಿತಾ ತದಾ ನಿಧನತಾ ವನಿತಾಸು ತು ಕೀರ್ತಿತಾ॥೪೨॥

ಶನಿಯು ಕರ್ಕದಲ್ಲಿದ್ದು ಚಂದ್ರನು ಮಕರಗತನಾದರೆ ಜಲೋದರ ರೋಗದಿಂದ ಸ್ತ್ರೀಯು ಮರಣವನ್ನು ಹೊಂದುವಳು.

ಸಪ್ತಮೇ ದಿನಪತೌ ಪತಿಮುಕ್ತಾ ಕ್ಷೋಣಿಜೇ ಚ ವಿಧವಾ ಖಲು ಬಾಲ್ಯೇ।

ಪಾಪಖೇಚರ ವಿಲೋಕನಯಾತ್ ಮಂದಗೇ ಚ ಯುವತೀ ಜರತೀ ಸ್ಯಾತ್॥೪೩॥

ಸಪ್ತಮದಲ್ಲಿ ರವಿಇರಲು ಪತಿಯಿಂದ ಬಿಡಲ್ಪಟ್ಟವಳು,ಕುಜನಿರಲು ವಿಧವೆಯು, ಪಾಪಗ್ರಹರ



ದೃಷ್ಟಿಯುಳ್ಳ ಶನಿಯು ಇರಲು ಯುವವಯಸ್ಸಿನಲ್ಲೆ ಮುದುಕಿಯಂತಾಗುವಳು

## ತನುಭಾವ

ಮೂರ್ತೌ ಕರೋತಿ ವಿಧವಾಂ ದಿನಕೃತ್ಕುಜಶ್ಚ ರಾಹುರ್ವಿನಷ್ಟತನಯಾಂ ರವಿಜೋದರಿದ್ರಾಮ್।

ಶುಕ್ರಃ ಶಶಾಂಕತನಯಶ್ಚ ಗುರುಶ್ಚ ಸಾಧ್ವೀ ಮಾಯುಃಕ್ಷಯಂ ಚ ಕುರುತೇತ್ರ ಚ ಶರ್ವರೀಶಃ॥೪೪॥

ಸ್ತ್ರೀಜಾತಕದಲ್ಲಿ ಲಗ್ನದಲ್ಲಿ ರವಿಯು,ಕುಜನು ವಿಧವೆಯನ್ನು, ರಾಹುವು ನಷ್ಟಪುತ್ರರನ್ನು, ಶನಿಯು ದರಿದ್ರಳನ್ನು, ಶುಕ್ರ,ಬುಧ,ಗುರುಗಳು ಮುತ್ತೈದೆಯನ್ನಾಗಿಯೂ, ಚಂದ್ರನು ಆಯುಕ್ಷಯವನ್ನು ಉಂಟುಮಾಡುವರು.

## ಧನಭಾವ

ಕುರ್ವಂತಿ ಭಾಸ್ಕರಶನೈಶ್ಚರರಾಹುಭೌಮಾ ದಾರಿದ್ರ್ಯದುಃಖಮತುಲಂ ನಿಯತಂ ದ್ವಿತೀಯೇ।

ವಿತ್ತೇಶ್ವರೀಮವಿಧವಾಂ ಗುರುಶುಕ್ರಸೌಮ್ಯಾ ನಾರೀಂ ಪ್ರಭೂತತನಯಾಂ ಕುರುತೇ ಶಶಾಂಕಃ॥೪೫॥

ದ್ವಿತೀಯಭಾವದಲ್ಲಿರುವ ರವಿ,ಶನಿ,ರಾಹು,ಕುಜರು ಕಡುದಾರಿದ್ರ್ಯವನ್ನು. ಗುರುಶುಕ್ರಬುಧರು ಧನವತಿಯನ್ನು,ಸೌಭಾಗ್ಯವತಿಯನ್ನು, ಚಂದ್ರನು ಸುಪುತ್ರವತಿಯನ್ನು ಮಾಡುವರು.

## ಸಹಜಭಾವ

ಶುಕ್ರೇಂದುಭೌಮಗುರುಸೂರ್ಯಬುಧಾಸ್ತೃತೀಯೇ ಕುರ್ಯುಃ ಸತೀಂ ಬಹುಸುತಾಂ ಧನಭೋಗಿನೀಂ ಚ।

ಕನ್ಯಾಂ ಕರೋತಿ ರವಿಜೋ ಬಹುವಿತ್ತಯುಕ್ತಾಂ ಪುಷ್ಟಿಂ ಕರೋತಿ ನಿಯತಂ ಖಲು ಸೈಂಹಿಕೇಯಃ॥೪೬॥

ತೃತೀಯಭಾವದಲ್ಲಿರುವ ಶುಕ್ರ,ಚಂದ್ರ,ಕುಜ,ಗುರು,ರವಿ,ಬುಧರು ಬಹು ಪುತ್ರವತಿಯನ್ನಾಗಿಯೂ, ಧನವತಿಯನ್ನಾಗಿಯಾ, ಸುಖಿಯನ್ನಾಗಿಯೂ, ಶನಿಯು ಬಹುಧನವತಿಯನ್ನು, ರಾಹುವು ಆರೋಗ್ಯವಂತಳನ್ನು ಮಾಡುವರು.

## ಗೃಹಭಾವ

ಸ್ವಲ್ಪಂ ಪಯಂ ಕ್ಷಿತಿಜಸೂರ್ಯಸುತೇ ಚತುರ್ಥೇ ಸೌಭಾಗ್ಯ ಶೀಲರಹಿತಾಂ ಕುರುತೇ ಶಶಾಂಕಃ।

ರಾಹುಃ ಸಪತ್ನಿಸಹಿತಾಂ ಕ್ಷಿತಿವಿತ್ತಲಾಭಂದದ್ಯಾದ್ ಬುಧಃ ಸುರಗುರುರ್ಭೃಗುಜಶ್ಚ ಸೌಖ್ಯಮ್॥೪೭॥

ಚತುರ್ಥಭಾವದಲ್ಲಿ ಕುಜ–ರವಿಗಳು ಸ್ವಲ್ಪಹಾಲು ಇರುವಂತೆಯೂ, ಚಂದ್ರನು ಸೌಭಾಗ್ಯ ಶೀಲರಹಿತಳಾಗಿಯೂ, ರಾಹುವು ಸವತಿಯು ಬರುವಂತೆಯೂ, ಬುಧನು ಭೂ,ಧನಲಾಭವನ್ನು , ಗುರು,ಶುಕ್ರರು ಸೌಖ್ಯವನ್ನುಂಟುಮಾಡುವರು.

## ಸುತಭಾವ

ನಷ್ಟಾತ್ಮಜಾಂ ರವಿಕುಜೌ ಖಲುಪಂಚಮಸ್ಥೌ ಚಂದ್ರಾತ್ಮಜೋ ಬಹುಸುತಾಂ ಗುರುಭಾರ್ಗವೌ ಚ।

ರಾಹುರ್ದದಾತಿ ಮರಣಂ ರವಿಜಸ್ತು ರೋಗಂ ಕನ್ಯಾಪ್ರಸೂತಿನಿತರಾಂ ಕುರುತೇ ಶಶಾಂಕಃ॥೪೮॥

ಪಂಚಮಭಾವದಲ್ಲಿ ರವಿ–ಕುಜ ಸಂತತಿನಷ್ಟವನ್ನು, ಬುಧ,ಗುರು,ಶುಕ್ರರು ಬಹುಸಂತತಿಯನ್ನು,

ರಾಹುವು ಮರಣವನ್ನು, ಶನಿ ರೋಗವನ್ನು,ಚಂದ್ರನು ಹೆಣ್ಣುಸಂತತಿ ಇರವಂತೆಮಾಡುವರು.

## ಶತ್ರುಭಾವ

ಷಷ್ಠೇ ಶನೈಶ್ಚರದಿವಾಕರರಾಹುಜೀವಾ ಭೌಮಃ ಕರೋತಿ ಸುಭಗಾಂ ಪತಿಸೇವಿನೀಂ ಚ।
ಚಂದ್ರಃ ಕರೋತಿ ವಿಧವಾಮುಶಾನಾ ದರಿದ್ರಾಂ ವೇಶ್ಯಾಂ ಶಶಾಂಕತನಯಂ ಕಲಹಪ್ರಿಯಾಂ ವಾ॥೪೯॥

ಷಷ್ಠಭಾವದಲ್ಲಿ ಶನಿ,ರನಿ,ರಾಹು,ಗುರು,ಕುಜ ಸೌಭಾಗ್ಯವತಿಯನ್ನು, ಪತಿಸೇವಾನಿರತಳಾಗಿಯೂ, ಚಂದ್ರನು ವಿಧವೆಯನ್ನು, ಶುಕ್ರನು ದರಿದ್ರಳನ್ನು, ಬುಧನು ವೇಶ್ಯೆ ಅಥವಾ ಕಲಹಪ್ರಿಯಳನ್ನು ಮಾಡುವರು.

## ಪತಿಭಾವ

ಸೌರಾರಜೀವಬುಧರವೀಂದುಶುಕ್ರಾಃ ದದ್ಯುಃ ಪ್ರಸಹ್ಯ ಮರಣಂ ಖಲು ಸಪ್ತಮಸ್ಥಾಃ।
ವೈಧವ್ಯಬಂಧನಭಯಂ ಕ್ಷಯವಿತ್ತನಾಶಂ ವ್ಯಾಧಿಪ್ರವಾಸನಿಯತಂ ಚ ಯಥಾಕ್ರಮೇಣ॥೫೦॥

ಸಪ್ತಮದಲ್ಲಿರುವ ಶನಿ,ಕುಜ,ಗುರು,ಬುಧ,ರವಿ,ಚಂದ್ರ,ಶುಕ್ರರು ಅತಿಕಷ್ಟದ ಮರಣವನ್ನು ವೈಧವ್ಯವನ್ನು,ಬಂಧನವನ್ನು,ಭಯವನ್ನು, ಕ್ಷಯವನ್ನು, ಧನನಾಶವನ್ನು, ವ್ಯಾಧಿಯನ್ನು,ಪರದೇಶವಾಸವನ್ನು ಕ್ರಮವಾಗಿ ಉಂಟುಮಾಡುವರು.

## ನಿಧನಭಾವ

ಸ್ಥಾನೇಷ್ಟಮೇ ಗುರುಬುಧೌ ನಿಯತಂ ವಿಯೋಗಂ ಮೃತ್ಯುಂ ಶಶೀ ಭೃಗುಸುತಶ್ಚ ತಥೈವ ರಾಹುಃ।
ಸೂರ್ಯಃ ಕರೋತಿ ವಿಧವಾಂ ಸುಭಗಾಂ ಮಹೀಜಃಸೂರ್ಯಾತ್ಮಜೋ ಬಹುಸುತಾಂ ಪತಿವಲ್ಲಭಾಂ ಚ॥೫೧॥

ಅಷ್ಟಮಾಭಾವದಲ್ಲಿರುವ ಗುರು,ಬುಧರು ಪತಿವಿಯೋಗವನ್ನು, ಚಂದ್ರ,ಶುಕ್ರ, ರಾಹುಗಳು ಮರಣವನನ್ನು, ರವಿಯು ವಿಧವೆಯನ್ನು, ಕುಜನು ಸೌಭಾಗ್ಯವತಿಯನ್ನು, ಶನಿಯು ಬಹುಸಂತತಿಯನ್ನು ಮತ್ತು ಪತಿಪ್ರಿಯಳ ನ್ನಾಗಿಯೂ ಮಾಡುವರು.

## ಧರ್ಮಭಾವ

ಧರ್ಮಸ್ಥಿತಾ ಭೃಗುದಿವಾಕರಭೂಮಿಪುತ್ರಜೀವಾಃ ಸುಧರ್ಮನಿರತಾಂ ಶಶಿಜಃ ಸುಭೋಗಮ್।
ರಾಹುಸ್ತಥಾರ್ಕತನಯಶ್ಚ ಕರೋತಿ ವಂಧ್ಯಾಂ ನಾರೀಂ ಪ್ರಸೂತಿತನಯಾಂ ಕುರುತೇ ಶಶಾಂಕಃ॥೫೨॥

ನವಮಭಾವದಲ್ಲಿ ಶುಕ್ರ,ರವಿ,ಕುಜ,ಗುರುಗಳು ಧರ್ಮನಿರತಳನ್ನು, ಬುಧನು ಸುಖವನ್ನು, ರಾಹು,ಶನಿಗಳು ವಂಧ್ಯೆಯನ್ನು, ಚಂದ್ರನು ಬಹುಸಂತತಿವುಳ್ಳ ವಳಾಗಿ ಮಾಡುವರು.

## ಕರ್ಮಭಾವ

ರಾಹುರ್ನಭಸ್ಥಲಗತೋ ವಿಧವಾಂ ಕರೋತಿ ಪಾಪೇ ರತಿಂ ದಿನಕರಶ್ಚ ಶನೈಶ್ಚರಶ್ಚ।
ಮೃತ್ಯುಂ ಕುಜೋಽರ್ಥರಹಿತಾಂ ಕುಲಟಾಂ ಚ ಚಂದ್ರಃಶೇಷಾ ಗ್ರಹಾ ಧನವತೀಂ ಸುಭಗಾಂ ಚ ಕುರ್ಯುಃ॥

ದಶಮಭಾವದಲ್ಲಿ ರಾಹುವು ವಿಧವೆಯನ್ನು,ರವಿಯು ಪಾಪಕರ್ಮಸಕಿ ್ತಯನ್ನು, ಶನಿಯು



ಮರಣವನ್ನು,ಕುಜನು ದರಿದ್ರತೆಯನ್ನು,ಚಂದ್ರನು ಶೀಲರಹಿತಳನ್ನು, ಉಳಿದಗ್ರಹರು ಧನವತೀ,ಸೌಭಾಗ್ಯವತಿಯನ್ನು ಮಾಡುವರು.

## ಲಾಭಭಾವ

ಆಯೇ ರವಿರ್ಬಹುಸುತಾಂ ಧನಿನೀಂ ಶಶಾಂಕಃ ಪುತ್ರಾನ್ವಿತಾ ಕ್ಷಿತಿಸುತೋ ರವಿಜೋ ಧನಾಢ್ಯಾಮ್।
ಆಯುಷ್ಮತೀಂ ಸುರಗುರುರ್ಭೃಗುಜಃ ಸುಪುತ್ರಾಂ ರಾಹುಕರೋತಿ ಸುಭಗಾಂ ಸುಖಿನೀಂ ಬುಧಶ್ಚ॥೫೪॥

ಲಾಭಭಾವದಲ್ಲಿ ರವಿಯು ಬಹುಪುತ್ರರನ್ನು,ಚಂದ್ರ,ಶನಿಗಳು ಧನವಂತಳನ್ನು, ಕುಜನು ಸುಪುತ್ರರನ್ನು, ಗುರುವು ದೀರ್ಘಾಯುವನ್ನು,ಶುಕ್ರನು ಸುಪುತ್ರರನ್ನು, ರಾಹುವು ಸೌಭಾಗ್ಯವನ್ನು, ಬುಧನು ಸುಖವನ್ನು ಕೊಡುವರು.

## ವ್ಯಯಭಾವ

ಅಂತ್ಯೇ ಧನವ್ಯಯಕರಾಂ ದಿನಕೃಚ್ಛನಿಶ್ಚ ವಂಧ್ಯಾಂ ಕುಜಃಪರರತಾಂ ಕುಟಿಲಾಂ ಚ ರಾಹುಃ।
ಸಾಧ್ವೀಂ ಸಿತೇಜ್ಯಶಶಿಜಾ ಬಹುಪುತ್ರಪೌತ್ರೈರ್ಯುಕ್ತಾಂವಿಧುಃಪ್ರಕುರು ತೇ ವ್ಯಯಗೋ ದಿನಾಂಧಾಮ್॥

ವ್ಯಯಭಾವದಲ್ಲಿ ರವಿಯು ಖರ್ಚಿನವಳಾಗಿಯೂ, ಶನಿಯು ವಂಧ್ಯೆಯ ನ್ನಾಗಿಯೂ, ಕುಜನು ಪರಾಸಕ್ತಿಯನ್ನು, ರಾಹುವು ಮೋಸಬುದ್ಧಿಯನ್ನು, ಶುಕ್ರ,ಗುರು,ಬುಧರು ಸಾಧ್ವೀ ಯನ್ನು,ಬಹುಪುತ್ರ,ಪೌತ್ರಯುಕ್ತಳಾಗಿಯೂ, ಚಂದ್ರನು ಹಗಲುಕುರುಡನ್ನು ಉಂಟುಮಾಡುವರು.

## ಗೋಚಾರವಿಚಾರ

ಮಾಸಂ ಶುಕ್ರಬುಧಾಧಿತ್ಯಾಃ ಸಾರ್ಧಮಾಸಂತು ಮಂಗಳಃ।
ವರ್ಷಮೇಕಂ ಗುರುಶ್ಚೈವ ಸಪಾದದ್ವಿದಿನ ಶಶೀ॥೫೬॥
ರಾಹುರಷ್ಟಾದಶಾನ್ ಮಾಸಾನ್ ತ್ರಿಂಶನ್ಮಾಸಾನ್ ಶನೈಶ್ಚರಃ।
ರಾಹುವತ್ಕೇತುರುಕ್ತಸ್ತು ರಾಶಿಭೋಗಾಃ ಪ್ರಕೀರ್ತಿತಾಃ॥೫೭॥
ರಾಶಿಪ್ರವೇಶೇ ಸೂರ್ಯಾರೌ ಮಧ್ಯೇ ಶುಕ್ರಬೃಹಸ್ಪತೀ।
ರಾಹುಶ್ಚಂದ್ರಶನಿಶ್ಚಾಂತೇ ಸೌಮ್ಯಶ್ಚೈವ ಸದಾ ಶುಭಃ॥೫೮॥

ಶುಕ್ರ,ಬುಧ,ರವಿಗಳು ಒಂದುತಿಂಗಳು, ಒಂದೂವರೆತಿಂಗಳು ಕುಜನು, ಒಂದುವರ್ಷ ಗುರುವು,ಎರಡೂಕಾಲುದಿನ ಚಂದ್ರನು,೧೮ತಿಂಗಳು ರಾಹುವು,೩೦ತಿಂಗಳು ಶನಿಯು, ರಾಹುವಿನಂತೆ ಕೇತುವು ೧೮ತಿಂಗಳು ಸಂಚಾರತ್ವೇನ ಒಂದೊಂದು ರಾಶಿಯಲ್ಲಿರುವರು. ರಾಶಿಪ್ರವೇಶಸಿದ ನಂತರ ರವಿ,ಕುಜರು, ಮಧ್ಯದಲ್ಲಿ ಶುಕ್ರ–ಗುರುಗಳು, ರಾಹು,ಚಂದ್ರ,ಶನಿಗಳು ಅಂತ್ಯದಲ್ಲೂ ಬುಧನು ಸದಾ ತಮ್ಮ ಶುಭಾ–ಶುಭಫಲಗಳನ್ನು ಕೊಡುವರು.

ಶುಭಾ ಏಕಾದಶೇ ಸರ್ವೇ ತ್ರಿಷಷ್ಠದಶಗೋ ರವಿಃ।
ವ್ಯಯಾಷ್ಟತುರ್ಯಗಾಃ ಸರ್ವೇ ನೇಷ್ಟಾಃ ಸೌಮ್ಯಾಃ ಶುಭಾ ಗ್ರಹಾಃ॥೪೯॥

ಎಲ್ಲಾ ಗ್ರಹರು ಏಕಾದಶದಲ್ಲಿ ಬಂದಾಗ ಶುಭರು, ೩-೬-೧೦ ರಲ್ಲಿ ರವಿಯು ಶುಭನು, ಎಲ್ಲಾ ಗ್ರಹರು ೧೨-೮-೪ ಶುಭರಲ್ಲ.

ದಶಸಪ್ತತ್ರಿಷಷ್ಠಾದ್ಯಸಂಸ್ಥಿತಶ್ಚಂದ್ರಮಾಃ ಶುಭಃ।
ಶುಕ್ಲಪ ಕ್ಷೇ ತು ನವಮೋ ದ್ವಿತೀಯಃ ಪಂಚಮೋ ಪಿ ಚ॥೬೦॥

೧೦-೭-೩-೬-೧ ರಲ್ಲಿ ಚಂದ್ರನು ಬರಲು ಶುಭನು ಮತ್ತು ಶುಕ್ಲಪಕ್ಷದಲ್ಲಿ ಮಾತ್ರ ೯-೫ರಲ್ಲೂ ಶುಭನು.

ದಿಗ್ವ್ಯಯಾಶ್ವಿತ್ರಿನವಾಖ್ಯೋ ಗೋಚರೇ ಶುಭದೋ ಬುಧಃ।
ಬೃಹಸ್ಪತಿಃ ಶುಭಃ ಪ್ರೋಕ್ತೋ ದ್ವಿಪಂಚನವಸಪ್ತಗಃ॥೬೧॥

೧೦-೧೨-೨-೩-೯ರಲ್ಲಿ ಬುಧನು ಶುಭನು. ಗುರುವು ೨-೫-೭-೯ರಲ್ಲಿ ಶುಭನು.

ಏಕದ್ವಿತ್ರಿದಶಾಯೇಷುನವಾದ್ರಿಗಭೃಗುಃ ಶುಭಃ॥೬೨॥

೧-೨-೩-೧೦-೧೧-೭-೯ರಲ್ಲಿ ಶುಕ್ರನು ಶುಭನು.

ದ್ವಿಪಂಚಮಸಪ್ತಗತಾ ಚತುರಾಂಗದ್ವಾದಶರಂಧ್ರಯುತಾಃ।
ಧನಧಾನ್ಯಹಿರಣ್ಯವಿನಾಶಕರಾರವಿರಾಹುಶನ್ಯೈಶ್ಚರಭೂಮಿಸುತಾಃ॥೬೩॥

೨-೫-೭-೪-೧-೧೨-೮ರ ರವಿ,ರಾಹು,ಶನಿ,ಕುಜರು ಧನಧಾನ್ಯಸುವರ್ಣಗಳ ನಾಶಮಾಡುವರು.

ಜನ್ಮನಿ ದಶಮಚತುರ್ಥೇ ತ್ರಿಷಡಾಷ್ಟದ್ವಾದಶೇ ತಥಾ ಹಿ।
ವ್ಯಾಧಿಂ ವಿದೇಶಗಮನಂ ಮಿತ್ರವಿರೋಧಂ ಸುರಗುರುಃ ಕುರುತೇ॥೬೪॥

೧-೧೦-೪-೩-೬-೮-೧೨ ರಲ್ಲಿ ಗುರುವು ವ್ಯಾಧಿಯನ್ನು, ಪರದೇಶವಾಸವನ್ನು, ಮಿತ್ರವಿರೋಧವನ್ನು ಮಾಡುವನು.

ಜನ್ಮಭಂ ಚ ಚತುರ್ಗುಣ್ಯಂ ತಿಥಿವಾರಸಮನ್ವಿತಮ್।
ನವಭಿಸ್ತು ಹರೇದ್ಭಾಗಂ ಶೇಷಂ ದಿನದಶೋಚ್ಯತೇ॥೬೫॥
ರವಿಣಾ ಶೋಕಸಂತಾಪೋ ಶಶಾಂಕೇ ಕ್ಷೇಮಲಾಭಕೌ।
ಭೂಮಿಪುತ್ರೇ ತ್ವನಿಷ್ಟಃಸ್ಯಾ ಬುಧೇಪ್ರಜ್ಞಾವಿವರ್ಧನಮ್॥೬೬॥
ಗುರೌ ವಿತ್ತಂ ಭೃಗೌ ಸೌಖ್ಯಂ ಶನೌ ಪೀಡಾ ನ ಸಂಶಯಃ।
ರಾಹುಣಾ ಘಾತಪಾತೌ ಚ ಕೇತೋರ್ಮೃತ್ಯುಸಮಂ ಫಲಮ್॥೬೭॥

ಜನ್ಮನಕ್ಷತ್ರವನ್ನು ೪ ರಿಂದ ಗುಣಿಸಿ ತಿಥಿವಾರಗಳನ್ನು ಸೇರಿಸಿ ೯ರಿಂದ ಭಾಗಿಸಿದಾಗ ಶೇಷಕ್ಕೆ ದಿನದ ದಶೆಬರುವುದು. ರವಿದಶೆಯು ಶೋಕಸಂತಾಪಗಳನ್ನು ಚಂದ್ರದಶೆಯು ಕ್ಷೇಮಲಾಭಗಳನ್ನು ಕುಜದಶೆಯು ಅನಿಷ್ಟವನ್ನು, ಬುಧದಶೆಯು ಬುದ್ಧಿತೀಕ್ಷ್ಣತೆಯನ್ನು, ಗುರುದಶೆಯು



ಧನಾಗಮವನ್ನು,ಶುಕ್ರದಶೆಯು ಸೌಖ್ಯವನ್ನು, ಶನದಶೆಯು ಪೀಡೆಯನ್ನು, ರಾಹುದಶೆಯು ಅಪಘಾತ, ಬೀಳುವಿಕೆಯನ್ನು, ಕೇತುದಶೆಯು ಮರಣಸಮವನ್ನು ಉಂಟುಮಾಡುವುದು.

## ಶೀನುವ ವಿಚಾರ

ಅಗ್ರೇ ಕಲಹಕೃತ್ ಛಿಕ್ಕಾ ಚಾತ್ಮಛಿಕ್ಕಾ ಮಹದ್ಭಯಮ್।
ಊರ್ಧ್ವಂ ಚೈವ ಶುಭಂ ಜ್ಞೇಯಂ ಮಧ್ಯೇ ಚೈವ ಮಹದ್ಭಯಮ್॥೬೮॥
ಆಸನೇ ಶಯನೇ ಚೈವ ದಾನೇ ಚೈವತು ಭೋಜನೇ।
ವಾಮಾಂಗೇ ಪೃಷ್ಠತಶ್ಚೈವ ಷಟ್ ಛಿಕ್ಕಾಹಿ ಶುಭಾವಹಾಃ॥ ೬೯॥

ಮುಂದೆ ಶೀನಿದರೆ ಕಲಹ, ತನ್ನಲ್ಲಿಯೇ ಶೀನಿಕೊಂಡರೆ ಮಹಾಭಯ, ಮೇಲೆ ಶೀನಿದರೆ ಶುಭ, ಮಧ್ಯ ಶೀನಿದರೂ ಮಹಾಭಯವು. ಕುಳಿತು, ಮಲಗಿದಾಗ, ದಾನ ಮಾಡುವಾಗ, ಊಟ ಮಾಡುವಾಗ ಎಡಭಾಗದಲ್ಲಿ ಶೀನುವುದು, ಹಿಂದೆ ಶೀನುವುದು ಹೀಗೆ ೬ ರೀತಿಯಲ್ಲಿ ಶೀನುವುದು ಶುಭಕರವಾಗಿದೆ.

## ಹಲ್ಲಿಮೇಲೆಬಿದ್ದ ಫಲ

ಪಲ್ಲೀ ಪತೇತ್ತು ಶಿರಸೇ ಬಹುರಾಜ್ಯಲಕ್ಷ್ಮೀ ಶ್ಚಾಗ್ರೇ ಪತೇದ್ಭುವಿತಲೇ ಬಹುದುಃಖಜಾಲಮ್॥
ವಾಮಾಂಗಭಾಗೇಧನಹಾನಿಮೃತ್ಯುಃ ಸುಖಪ್ರದಾಸ್ಯಾತ್ ಸ್ತ್ರಿಯದಕ್ಷಿಣಾಂ ಗೇ॥೭೦॥

ಹಲ್ಲಿಯು ನೆತ್ತಿಯಮೇಲೆ ಬಿದ್ದರೆ ಬಹುರಾಜ್ಯಸಂಪತ್ಪ್ರಾಪ್ತಿಯು, ಮುಂದೆ ಭೂಮಿಯಮೇಲೆ ಬಿದ್ದರೆ ಬಹುದುಃಖಉಂಟಾದೀತು, ಎಡಭಾಗದ ಅಂಗಗಳಮೇಲೆ ಬಿದ್ದರೆ ಧನಹಾನಿಯು, ಮೃತ್ಯುವು, ಬಲಭಾಗದ ಅಂಗಗಳಮೇಲೆ ಬಿದ್ದರೆ ಸುಖವುಂಟಾಗುವುದು. ಸ್ತ್ರೀಯರಿಗೆ ಇದಕ್ಕೆ ವಿರುದ್ಧವಾಗಿ ಫಲವು.

ಯದಿ ಪತತಿ ಚ ಪಲ್ಲೀ ದಕ್ಷಿಣಾಂಗೇ ನರಾಣಾಂ ಸುಜನಜನವಿನಾಶೋ ಲಾಭಕೃದ್ವಾಮಭಾಗೇ।
ಉದರಶಿರಸಿ ಕಷ್ಟೇ ಪೃಷ್ಠಭಾಗೇ ಚ ಮೃತ್ಯುಃ ಕರಪದಿಹೃದಿಗುಹ್ಯೇ ಸರ್ವಸೌಖ್ಯಂ ಕರೋತಿ॥೭೧॥

ಹಲ್ಲಿಯು ಬಲಭಾಗದ ಅಂಗದಮೇಲೇರಿದರೆ ಸ್ವಜನನಾಶ,ಎಡಭಾಗದ ಅಂಗದಮೇಲೆರಿದರೆ ಲಾಭ, ಹೊಟ್ಟೆ,ತಲೆಗೇರಿದರೆ ಕಷ್ಟ, ಪೃಷ್ಠಭಾಗಕ್ಕೇರಿದರೆ ಮರಣಸಮಾನ ತೊಂದರೆಯು, ಹಸ್ತ,ಪಾದ,ಹೃದಯ,ಗುಹ್ಯದಲ್ಲಿ ಬಿದ್ದರೆ ಸರ್ವಸೌಖ್ಯವು ಉಂಟಾಗುವುದು.

## ಅಂಗಸ್ಫುರಣಫಲ

ಅಂಗಸ್ಯ ದಕ್ಷಿಣೇಭಾಗೇ ಪ್ರಶಸ್ತಂ ಸ್ಫುರಣಂ ಭವೇತ್। ಅಪ್ರಶಸ್ತಂ ತಥಾ ವಾಮೇ ಪೃಷ್ಠಸ್ಯ ಹೃದಯಸ್ಯ ಚ॥೭೨॥

ಬಲಭಾಗದ ಅಂಗವು ಸ್ಫುರಿಸಿದರೆ ಒಳ್ಳೆಯದು, ಎಡಭಾಗಸ್ಫುರಣವು ಒಳ್ಳೆಯದಲ್ಲ, ಪೃಷ್ಟದ ಎಡಭಾಗ, ಹೃದಯದ ಸ್ಫುರಣವು ಕೂಡ ಒಳ್ಳೆಯದಲ್ಲ.

## ನೇತ್ರಸ್ಫುರಣಫಲ

ನೇತ್ರೋರ್ಧ್ವಂ ಹರತಿ ಸಕಲಂ ಮಾನಸಂ ದುಃಖಜಾಲಂ
ನೇತ್ರೋಪಾಂತೇ ದಿಶತಿ ಚ ಧನಂ ನಾಸಿಕಾಂತೇ ಚ ಮೃತ್ಯುಃ।
ನೇತ್ರಸ್ಯಾಧಃಸ್ಫುರಣಮಸಕೃತ್ ಸಂಗರೇ ಭಂಗಹೇತುರ್ವಾಮೇ
ಚೇತತ್ ಫಲಮವಿಕಲೇ ದಕ್ಷಿಣೇ ವೈಪರೀತ್ಯಮ್॥೭೩॥

ಕಣ್ಣಿನ ಮೇಲ್ಭಾಗದಲ್ಲಿ ಸ್ಫುರಣವು ಎಲ್ಲಾ ಮಾನಸಿಕ ದುಃಖಗಳು ದೂರವಾಗುವವು, ಕಣ್ಣಿತುದಿಯು ಸ್ಫುರಿಸಲು ಧನಾಗಮ, ಮೂಗಿನ ತುದಿಯ  ಸ್ಫುರಣವು ಮರಣಸಮಸೂಚಕ, ಕಣ್ಣಿನ ಕೆಳಭಾಗವು ಸ್ಫುರಣವು ಕಲಹಕಾರಣವು ಅಥವಾ ಯುದ್ಧದಲ್ಲಿ ಅಪಜಯ,ಈ ರೀತಿ ಪುರುಷರಿಗಾದರೆ ಸ್ತ್ರಿಯರಿಗೆ ಇದಕ್ಕೆ ವಿರುದ್ದವಾಗಿ ಕಣ್ಣಿನ ಎಡಭಾಗ ಸ್ಫುರಣವು ಶುಭಾಶುಭ ಸೂಚಕವಾಗಿದೆ.

## ಕಾರ್ಯಾಕಾರ್ಯಪ್ರಶ್ನೆ

ತಿಥಿಪ್ರಹರಸಂಯುಕ್ತಾ ತಾರಕಾ ವಾರಮಿಶ್ರಿತಾ। ಅಗ್ನಿಭಿಸ್ತು ಹರೇದ್ಭಾಗಂ ಶೇಷಂ ಸತ್ವರಜಸ್ತಮಃ॥೭೪॥
ಸಿದ್ಧಿಸ್ತಾತ್ಕಾಲಿಕೀ ಸತ್ವೇ ರಜಸಾ ತು ವಿಲಂಬಿತಾ। ತಮಸಾ ನಿಷ್ಫಲಂ ಕಾರ್ಯಂ ಜ್ಞಾತ್ವಾ ಪ್ರಶ್ನಕೋವಿದೈಃ॥೭೫॥

ತಿಥಿ,ಪ್ರಹರ,ನಕ್ಷತ್ರ,ವಾರ ಸಂಖ್ಯೆಗಳನ್ನು ಕೂಡಿಸಿ ೩ರಿಂದ ಭಾಗಿಸಿದಾಗ ಶೇಷವು ೧ಸಾತ್ವಿಕ,೨ ರಾಜಸ, ೩ಅಥವಾ ೦ ಆದರೆ ತಾಮಸ, ಸಾತ್ವಿಕವಾದರೆ ತಕ್ಷಣ ಸಿದ್ಧಿಯು, ರಾಜಸದಿಂದ ನಿಧಾನ,ತಾಮಸದಿಂದ ಕಾರ್ಯವಾಗು ವುದು ಕಷ್ಟವೆಂದು ತಿಳಿಯುವುದು.

## ಪಂಥಾಪ್ರಶ್ನ

ತಿಥಿಪ್ರಹರಸಂಯುಕ್ತಾ ತಾರಕಾ ವಾರಮಿಶ್ರಿತಾ। ವರ್ತಮಾನಂ ಚ ನಕ್ಷತ್ರಂ ಗಣಯೇತ್ ಕೃತ್ತಿಕಾದಿತಃ।
ಸಪ್ತಭಿಸ್ತು ಹರೇದ್ಭಾಗಂ ಶೇಷಂ ತು ಫಲಮಾದಿಶೇತ್॥೭೬॥
ತಿಥಿಪ್ರಹರಸಂಯುಕ್ತಾ ತಾರಕಾ ವಾರಮಿಶ್ರಿತಾ। ವರ್ತಮಾನಂ ಚ ನಕ್ಷತ್ರಂ ಗಣಯೇತ್ ಕೃತ್ತಿಕಾದಿತಃ।
ಸಪ್ತಭಿಸ್ತು ಹರೇದ್ಭಾಗಂ ಶೇಷಂ ತು ಫಲಮಾದಿಶೇತ್।

ತಿಥಿ,ಪ್ರಹರ,ನಕ್ಷತ್ರ,ವಾರ ಸಂಖ್ಯೆಗಳನ್ನು ಕೂಡಿಸಬೇಕು (ಇಲ್ಲಿ ನಕ್ಷತ್ರವನ್ನು ಕೃತ್ತಿಕಾದಿಯಾಗಿ ಎಣಿಸಬೇಕು) ಬಂದಸಂಖ್ಯೆಯನ್ನು ೭ರಿಂದ ಭಾಗಿಸಬೇಕು ಶೇಷಕ್ಕೆ ಮುಂದಿನ ಶ್ಲೋಕಗಳಂತೆ ಫಲವನ್ನು ತಿಳಿಯಬೇಕು.

ಏಕಶೇಷೇ ಭವೇತ್ ಸ್ಥಾನೇ ದ್ವಿತೀಯೇ ಪಥಿ ವರ್ತತೇ।
ತೃತೀಯೇ ಚಾರ್ಧಮಾರ್ಗೇ ತು ಚತುರ್ಥೇ ಗ್ರಾಮಸನ್ನಿಧೌ॥೭೭॥
ಪಂಚಮೇ ಪುನರಾವೃತ್ತಿಃ ಷಷ್ಠೇ ವ್ಯಾಧಿಯುತಂ ವದೇತ್।
ಶೂನ್ಯಂ ಜ್ಞೇಯಂ ಸಪ್ತಮೇ ವೈ ಚೌತತ್ಪ್ರಶ್ನಸ್ಯ ಲಕ್ಷಣಮ್॥೭೮॥



ಒಂದುಶೇಷವಾದರೆ ಅದೇ ಸ್ಥಾನದಲ್ಲೂ, ೨ಶೇಷವಾದರೆ ದಾರಿಯಲ್ಲೂ, ೩ಶೇಷವಾದರೆ ಅರ್ಧಮಾರ್ಗದಲ್ಲೂ, ೪ಶೇಷಉಳಿದರೆ ಗ್ರಾಮದಹತ್ತಿರವೂ, ೫ಶೇಷಉಳಿದರೆ ಬಂದು ಪುನಃ ಹೋಗಿರುವವನು, ೬ಶೇಷಉಳಿದರೆ ರೋಗಗ್ರಸ್ತ ನಾಗಿಯೂ, ೭-ಅಥವಾ ೦ ಉಳಿದರೆ ಉಪಯೋಗವಿಲ್ಲವೆಂದು  ತಿಳಿಯುವುದು.

## ಕಾರ್ಯಸಿದ್ಧಿಪ್ರಶ್ನೆ

ದಿಶಾಪ್ರಹರಸಂಯುಕ್ತಾ ತಾರಕಾ ವಾರಮಿಶ್ರಿತಾ।
ಅಷ್ಟಭಿಸ್ತು ಹರೇದ್ಭಾಗಂ ಶೇಷಂ ಪ್ರಶ್ನಸ್ಯ ಲಕ್ಷಣಮ್॥೭೯॥
ಪಂಚಕೇ ತ್ವರಿತಾ ಸಿದ್ಧಿಃ ಷಟ್ ತುರ್ಯೇ ಚ ದಿನ ತ್ರಯಮ್।
ತ್ರಿಸಪ್ತಕೇ ವಿಲಂಬಶ್ಚ ದ್ವೌ ಚಾಷ್ಟೌ ನ ಚ ಸಿದ್ಧಿದೌ॥೮೦॥

ದಿಕ್ಕಿ-ಪ್ರಹರಸಂಖ್ಯೆ,ನಕ್ಷತ್ರ,ವಾರಗಳ ಸಂಖ್ಯೆಗಳನ್ನು ಸೇರಿಸಿ ೮ರಿಂದ ಭಾಗಿಸಬೇಕು ಶೇಷಕ್ಕೆ ಫಲ. ೫ ಶೇಷವಾದರೆ ಶೀಘ್ರವಾಗಿಕಾರ್ಯಸಿದ್ಧಿ ೬-೪ ಆದರೆ ೩ ದಿನನಂತರ ಸಿದ್ಧಿ ೩-೭ ಆದರೆ ನಿಧಾನವಾಗಿ ಕಾರ್ಯಸಿದ್ಧಿ. ೨-೮ ಆದರೆ ಕಾರ್ಯಸಿದ್ಧಿಯು ಕಷ್ಟ.

## ಗರ್ಭಿಣೀಪ್ರಶ್ನೆ

ತತ್ಪ್ರಶ್ನಲಗ್ನೇ ರವಿಜೀವಭೌಮೇ ತೃತೀಯ ಸಪ್ತೇ ನವಪಂಚಮೇ ಚ।
ಗರ್ಭಃಪುಮಾನ್ವೈ ಋಷಿಭಿಃ ಪ್ರಣೀತಶ್ಚಾನ್ಯಗ್ರಹೇ ಸ್ತ್ರೀ ವಿಬುಧೈಃ ಪ್ರಣೀತಾ॥೮೧॥

ಗರ್ಭಿಣೀಪ್ರಶ್ನಗೆ ಲಗ್ನದಲ್ಲಿ ರವಿಗುರುಕುಜರು ೩-೭-೯-೫ರಲ್ಲಿದ್ದರೆ ಗರ್ಭಗಂಡು ಇದೆ, ಇದೇರೀತಿ ಇತರಗ್ರಹರು ಇದ್ದರೆ ಹೆಣ್ಣುಶಿಶು ಗರ್ಭದಲ್ಲಿರುವುದು ಎಂದು ಋಷಿಗಳಿಂದ ಹೇಳಲ್ಪಟ್ಟಿದೆ.

## ಮೇಘಪ್ರಶ್ನ

ಆಷಾಢಸ್ಯಾಸಿತೇ ಪಕ್ಷೇ ದಶಮ್ಯಾದಿದಿನತ್ರಯೇ।
ರೋಹಿಣೀಕಾಲಮಾಖ್ಯಾತಿ  ಸುಖದುರ್ಭಿಕ್ಷಲಕ್ಷಣಮ್॥೮೨॥
ರಾತ್ರಾವೇವ ನಿರಭ್ರಂ ಸ್ಯಾತ್ಪ್ರಭಾತೇ ಮೇಘಡಂಬರಮ್।
ಮಧ್ಯಾಹ್ನೇಜಲಬಿಂದುಃ ಸ್ಯಾತ್ತದಾ ದುರ್ಭಿಕ್ಷಕಾರಣಮ್॥೮೩॥

ಆಷಾಢಕೃಷ್ಣಪಕ್ಷದ  ದಶಮ್ಯಾದಿದಿನತ್ರಯದಲ್ಲಿ ರೋಹಿಣೀನಕ್ಷತ್ರವು ಬಂದರೆ ಸುಭಿಕ್ಷ, ಮಧ್ಯಮ, ದುರ್ಭಿಕ್ಷವೆಂದುತಿಳಿಯುವುದು, ರಾತ್ರಿಯಲ್ಲಿ ಶುಭ್ರವಾದ ಆಕಾಶವಿದ್ದು ಪ್ರಾತಃಕಾಲದಲ್ಲಿ ಮೇಘಾಚ್ಛಾನದ, ಮಧ್ಯಾಹ್ನದಲ್ಲಿ ಮಳೆಬೀಳುವುದು ಇವೆಲ್ಲ ದುರ್ಭಿಕ್ಷಲಕ್ಷಣವಾಗಿದೆ.

ಕುಂಭಕರ್ಕವೃಷಾ ಮೀನ ಮಕರೌ ವೃಶ್ಚಿಕಸ್ತುಲಾ।
ಜಲಲಗ್ನಾನಿ ಚೋಕ್ತಾನಿ ಲಗ್ನೇಷ್ವೇತೇಷು ಸೂರ್ಯಭಮ್।

ಭವತ್ಯೇವ ತದಾ ವೃಷ್ಟಿರ್ಜ್ಞಾತವ್ಯಾ ಗಣಕೋತ್ತಮೈಃ॥೮೪॥

ಕುಂಭ,ಕರ್ಕ,ವೃಷಾ,ಮೀನ,ಮಕರ,ವೃಶ್ಚಿಕ,ತುಲಾ ಇವು ಜಲಲಗ್ನಗಳಾಗಿವೆ ಈ ಲಗ್ನಗಳಲ್ಲಿ ಸೂರ್ಯನ ನಕ್ಷತ್ರವು ಬಂದರೆ ನಿಶ್ಚಯವಾಗಿ ವೃಷ್ಟಿವುಂಟಾಗುವುದೆಂದು ದೈವಜ್ಞನು ತಿಳಿಯಬೇಕು.

ಅಶ್ವಿನೀಮೃಗಪುಷ್ಯೇಷು ಪೂಷವಿಷ್ಣುಮಘಾಸು ಚ।

ಸ್ವಾತ್ಯಾಂ ಪ್ರವಿಶತೇ ಭಾನುರ್ವರ್ಷತೇ ನಾತ್ರ ಸಂಶಯಃ॥ ೮೫॥

ಅಶ್ವಿನೀ,ಮೃಗಶಿರ,ಪುಷ್ಯೇ,ಪೂಷಾ,ಶ್ರವಣ,ಮಘಾ,ಸ್ವಾತೀ ಇವುಗಳಲ್ಲಿ ರವಿಯು ಪ್ರವೇಶಿಸಿದರೇ ಸಂಶಯವಿಲ್ಲದೆ ಮಳೆಬೀಳುವುದು.

ಆದ್ರಾದಿ ದಶಕಂ ಸ್ತ್ರೀಣಾಂ ವಿಶಾಖಾಸ್ತ್ರಿನಪುಂಸಕಮ್।

ಮೂಲಾಚ್ಚತುರ್ದಶ ಪುಂಸಾಂ ನಕ್ಷತ್ರಾಣಿ ಕ್ರಮಾದ್ಬುಧೈಃ॥೮೬॥

ವಾಯುರ್ನಪುಂಸಕೇ ಭೇ ಚ ಸ್ತ್ರೀಣಾಂ ಭೇ ಚಾಭ್ರದರ್ಶನಮ್।

ಸ್ತ್ರೀಣಾಂ ಪುರುಷಸಂಯೋಗೇ ವೃಷ್ಟಿರ್ಭವತಿ ನಿಶ್ಚಯಮ್॥೮೭॥

ಆದ್ರಾದಿ ೧೦ ಸ್ತ್ರೀನಕ್ಷತ್ರಗಳು, ವಿಶಾಖಾದಿ ೩ ನಪುಂಸಕನಕ್ಷತ್ರಗಳು, ಮೂಲಾದಿ ೧೪ ಪುರುಷನಕ್ಷತ್ರಗಳೆಂದು ಪಂಡಿತರಿಂದ ಹೇಳಲ್ಪಟ್ಟಿದೆ. ನಪುಂಸಕ ನಕ್ಷತ್ರಗಳಿಂದ ಕೇವಲಗಾಳಿಬೀಸುವುದು, ಸ್ತ್ರೀನಕ್ಷತ್ರಗಳಿಂದ ಮೇಘದರ್ಶನ,ಸ್ತ್ರೀ- ಪುರುಷನಕ್ಷತ್ರಗಳ ಸಂಯೋಗದಿಂದ ವೃಷ್ಟಿಯಾಗುವುದು ನಿಶ್ಚಯವು.

ರವಿಶಶಿಪರಿವೇಷೇ ಪೂರ್ವಯಾಮೇ ಚ ಪೀಡಾ ರವಿಶಶಿಪರಿವೇಷೇ ಮಧ್ಯಯಾಮೇ ಚ ವೃಷ್ಟಿಃ।

ರವಿಶಶಿಪರಿವೇಷೇ ಧಾನ್ಯನಾಶಸ್ತೃತೀಯೇ ರವಿಶಶಿಪರಿವೇಷೇ ರಾಜ್ಯಭಂಗಶ್ಚತುರ್ಥೇ॥೮೮॥

ರವಿಶಶಿಪರಿವೇಷವು ಪೂರ್ವಯಾಮದಲ್ಲಾದರೆ ಪೀಡಾ, ಮಧ್ಯಯಾಮದಲ್ಲಾದರೆ ವೃಷ್ಟಿ,ಮೂರನೇಯಾಮದಲ್ಲಾದರೆ ಧಾನ್ಯನಾಶ,ಚತುರ್ಥಯಾಮದಲ್ಲಾದರೆ ರಾಜ್ಯಭಂಗವುಂಟಾಗುವುದು.

## ಪಶುಪ್ರಶ್ನೆ

ದ್ಯುಮಣಿಭಾನ್ನವಮೇಷು ವನೇ ಪಶುಂ ತದನು ಷಟ್ಸು ಚ ಕರ್ಣಪಥೇ ಸ್ಥಿತಮ್।

ಅಚಲೇಷು ಗತಂ ಗೃಹಮಾಗತಂ ದ್ವಯಗತಂ ಗತಮೇವ ಮತಂ ತ್ರಿಷು॥೮೯॥

ರವಿ ಇರುವನಕ್ಷತ್ರದಿಂದ ೯ಗಳಲ್ಲಿ ನಿತ್ಯನಕ್ಷ ೬ ವಾದರೆ ವನದಲ್ಲೂ, ಅನಂತರ ೬ನಕ್ಷತ್ರಗಳಲ್ಲಿ ಮಾರ್ಗದಲ್ಲೂ, ನಂತರ ೭ ನಕ್ಷತ್ರಗಳಲ್ಲಿ ಮನೆಗೆ ಬಂದಿದೆ ಎಂದೂ, ನಂತರ ೨ ನಕ್ಷತ್ರಗಳಲ್ಲಿ ಹಿಂತಿರುಗಿ ಬರುವುದಿಲ್ಲ ವೆಂದೂ, ನಂತರ ೩ ನಕ್ಷತ್ರಗಳಲ್ಲಿ ಮರಣಹೊಂದಿದೆ ಎಂದು ತಿಳಿಯಬೇಕು.



## ಅಂಧಾದಿ ನಕ್ಷತ್ರಜ್ಞಾನ

ಅಂಧಕಂ ತದನು ಮಂದಲೋಚನಂ ಮಧ್ಯಲೋಚನಮತಃಸುಲೋಚನಮ್।

ರೋಹಿಣೀಪ್ರಭೃತಿಭಂ ಚತುರ್ವಿಧಂ ಸಾಭಿಜಿಚ್ಚ ಗಣಯೇತ್ಪುನಃ॥೯೦॥

ರೋಹಿಣಿಯಿಂದ ಆರಂಭಿಸಿ ಅಂಧಕ, ಮಂದಲೋಚನ, ಮಧ್ಯಲೋಚನ, ಸುಲೋಚನ ಎಂಬುದಾಗಿ ನಾಲ್ಕುವಿಧವಾಗಿ ಅಭಿಜಿತ್ ಸಹಿತವಾಗಿ ಎಣಿಸಬೇಕು. ಇದರಿಂದ ಮುಂದೆ ನಷ್ಟವಸ್ತುವನ್ನು ತಿಳಿಯಬೇಕು.

## ನಷ್ಟವಸ್ತುಪ್ರಶ್ನೆ

ಅಂಧೇ ಸದ್ಯಃಪ್ರಾಪ್ಯತೇ ವಸ್ತು ನಷ್ಟಂ ಕಷ್ಟಾತ್ಪ್ರಾಪ್ಯಂ ಮಂದನೇತ್ರೇ ಚ ತದ್ವತ್।

ದೂರಾಚ್ಛ್ರಾವ್ಯಂ ಮಧ್ಯನೇತ್ರೇ ನ ಲಭ್ಯಂ ಶ್ರೋತವ್ಯಂ ನೈವ ಲಭ್ಯಂ ಸುನೇತ್ರೇ॥೯೧॥

ಅಂಧನಕ್ಷತ್ರದಲ್ಲಿ ಹೋದವಸ್ತು ತಕ್ಷಣ ಸಿಗುವುದು, ಮಂದನಕ್ಷತ್ರದಲ್ಲಿ ಹೋದರೆ ಕಷ್ಟದಿಂದ ಪ್ರಾಪ್ತಿಯು, ಮಧ್ಯನಕ್ಷತ್ರದಲ್ಲಿ ಹೋದರೆ ದೂರಹೋಗಿದ್ದು ಸಿಗುವುದು ಕಷ್ಟ, ಸುಲೋಚನ ನಕ್ಷತ್ರದಲ್ಲಿ ಹೋದ ಪಶು ಸಿಗುವುದಿಲ್ಲ.

ಮಘಾದಿ ಚಾರ್ಯಮಾಂತಂ ಚ ಸಮೀಪೇ ವಸ್ತು ದೃಶ್ಯತೇ।

ಹಸ್ತಾದಿವಸುಪರ್ಯಂತಮನ್ಯ ಹಸ್ತೇ ಚ ದೃಶ್ಯತೇ॥೯೨॥

ಶತತಾರಾದ್ಯಮಾಂತಂ ತು ಸ್ವಗೃಹೇ ವಸ್ತು ದೃಶ್ಯತೇ।

ಅಗ್ನ್ಯಾದಿ ಸಾರ್ಪಪರ್ಯಂತಮದೃಷ್ಟ ದೂರಗಂ ತಥಾ॥೯೩॥

ಮಘಾದಿ ಉತ್ತರಾನಕ್ಷತ್ರವರೆಗೆ ಸಮೀಪದಲ್ಲೇ ವಸ್ತು ಇರುವುದು, ಹಸ್ತಾದಿಧನಿಷ್ಠವರೆಗೆ ಬೇರೆಯವರ ಕೈಯಲ್ಲಿದೆ. ಶತಭಿಷದಿಂದ ಅಶ್ವಿನಿವರೆಗೆ ತನ್ನಮನೆಯಲ್ಲೇ ವಸ್ತುಇರುವುದು. ಕೃತ್ತಿಕಾದಿ ಆಶ್ಲೇಷಾವರೆಗೆ ಕಾಣದೆ ದೂರದಲ್ಲಿದೆ.

ತಿಥಿವಾರಂ ಚ ನಕ್ಷತ್ರಂ ಪ್ರಹರೇಣ ಸಮನ್ವಿತಮ್।

ದಿಕ್ಸಂಖ್ಯಯಾ ಹತಂ ಚೈವ ಸಪ್ತಭಿರ್ವಿಭಜೇತ್ಪುನಃ ॥೯೪॥

ಏಕೇನ ಭೂತಲೇ ದ್ರವ್ಯಂ ದ್ವಯಂಚೇದ್ಭಾಂಡಸಂಸ್ಥಿತಮ್।

ತೃತೀಯೇ ಜಲಮಧ್ಯಸ್ಥಮಂತರಿಕ್ಷೇ ಚತುರ್ಥಕೇ॥೯೫॥

ತುಷಸ್ಥಂ ಪಂಚಮೇ ತು ಸ್ಯಾತ್ಷಷ್ಠೇ ಗೋಮಯಮಧ್ಯಗಮ್।

ಸಪ್ತಮೇ ಭಸ್ಮಮಧ್ಯಸ್ಥಮಿತ್ಯೇತ್ಪ್ರಶ್ನಲಕ್ಷಣಮ್॥೯೬॥

ತಿಥಿವಾರನಕ್ಷತ್ರ ಪ್ರಹರಗಳನ್ನು ಸೇರಿಸಿ ೧೦ ರಿಂದ ಗುಣಿಸಿ ೭ ರಿಂದ ಭಾಗಿಸಿದಾಗ ಬಂದಶೇಷಕ್ಕೆ ಫಲ, ಒಂದುಶೇಷಕ್ಕೆ ಭೂಮಿಯಮೇಲೆ ದ್ರವ್ಯವಿರುವುದು, ೨ಶೇಷಕ್ಕೆ ಪಾತ್ರೆಯಲ್ಲಿದೆ, ೩ಶೇಷಕ್ಕೇ ಜಲಮಧ್ಯದಲ್ಲಿದೆ, ೪ ಶೇಷಕ್ಕೆ ಅಂತರಿಕ್ಷದಲ್ಲಿದೆ, ೫ಶೇಷಕ್ಕೆ ತೌಡಿನಲ್ಲಿದೆ. ೬ಶೇಷಕ್ಕೆ

ಗೋಮಯಮಧ್ಯದಲ್ಲಿದೆ, ೭ಅಥವಾಂ ಶೇಷಕ್ಕೆ ಭಸ್ಮಮಧ್ಯದಲ್ಲಿದೆ ಎಂದು ತಿಳಿಯಬೇಕು.

ತಾರಾಶುದ್ಧಂ ಕ್ಷೌರ ರವಿಗುರುಶುದ್ಧಾ ವ್ರತಂ ದೀಕ್ಷಾ।

ಶುಕ್ರವಿಶುದ್ಧಾ ಯಾತ್ರಾ ಸರ್ವಂ ಶುದ್ಧಂ ಶಶಾಂಕೇನ॥೯೭॥

ಕ್ಷೌರಕರ್ಮಕ್ಕೆ ತಾರಾಬಲವನ್ನು, ಉಪನಯನ-ದೀಕ್ಷಕಾರ್ಯಗಳಿಗೆ ರವಿಗುರುಶುದ್ಧಿಯನ್ನು,ಯಾತ್ರಾದಿಗಳಿಗೆ ಶುಕ್ರಶುದ್ಧಯನ್ನು, ಎಲ್ಲಾಕಾರ್ಯಗಳಿಗೂ ಚಂದ್ರ ಶುದ್ಧಿಯನ್ನು ಅವಶ್ಯವಾಗಿ ನೋಡಬೇಕು.

## ಸಂವತ್ಸರಫಲ

ಪ್ರಭವಾದ್ವಿಗುಣಂ ಕೃತ್ವಾ ತ್ರಿಭಿನ್ಯೂನಂ ಚ ಕಾರಯೇತ್।

ಸಪ್ತಭಿಸ್ತು ಹರೇತ್ಭಾಗಂ ಶೇಷಾಂಕೇ ಫಲಮಾದಿಶೇತ್॥೯೮॥

ಏಕಂ ಚತ್ವಾರಿ ದುರ್ಭಿಕ್ಷಂ ಪಂಚದ್ವಾಭ್ಯಾಂ ಸುಭಿಕ್ಷಕಮ್।

ತ್ರಿಷಷ್ಠಂತು ಸಮಂ ಜ್ಞೇಯಂ ಶೂನ್ಯೇ ಪೀಡಾ ನ ಸಂಶಯಃ॥

ಪ್ರಸ್ತುತ ಪ್ರಭವಾದಿ ಸಂವತ್ಸರಸಂಖ್ಯೆಯನ್ನು ಎರಡರಿಂದ ಗುಣಿಸಿ ಮೂರು ಕಳೆದು ಏಳರಿಂದ ಭಾಗಿಸಿದಾಗ ಬರುವ ಶೇಷಕ್ಕೆ ಫಲಹೇಳಬೇಕು. ೧-೪ ಆದರೆ ದುರ್ಭಿಕ್ಷವು, ೫-೨ ಆದರೆ ಸುಭಿಕ್ಷವು, ೩-೬ ಆದರೆ ಸಮವೆಂದು ತಿಳಿಯಬೇಕು, ಸೊನ್ನೆ ಶೇಷವಾದರೆ ಪೀಡೆಯುಂಟಾಗುವುದು.

## ವಾರಾನುಸಾರ ಮಾಸಫಲ

ಪಂಚಾರ್ಕವಾಸರೆ ರೋಗಃ ಪಂಚಭೌಮೇ ಮಹದ್ಭಯಮ್।

ಪಂಚಾರ್ಕಿವಾರಾ ದುರ್ಭಿಕ್ಷಂ ಶೇಷಾವಾರಾಃ ಶುಭಪ್ರದಾಃ॥೧೦೦॥

ಚೈತ್ರಾದಿ ಮಾಸಗಳಲ್ಲಿ ಐದು ಭಾನುಬಂದರೆ ರೋಗ ಐದು ಮಂಗಳವಾರಬಂದರೆ ಮಹಾಭಯ, ಐದು ಶನಿವಾರಗಳು ಬಂದರೆ ದುರ್ಭಿಕ್ಷವು, ಉಳಿದವಾರಗಲು ಶುಭದ ಗಳಾಗವೆ.

## ಚಂದಗ್ರಹಣವಿಷಯ

ಭಾನೋಃ ಪಂಚದಶೇ ಋಕ್ಷೇ ಚಂದ್ರಮಾ ಯದಿ ತಿಷ್ಠತಿ।

ಪೌರ್ಣಮಾಸ್ಯಾ ನಿಶಾಶೇಷೇ ಚಂದ್ರಗ್ರಹಣಮಾದಿಶೇತ್॥೧೦೧॥

ರವಿಯಿಂದ ೧೫ ನೇ ನಕ್ಷತ್ರದಲ್ಲಿ ಚಂದ್ರನಿದ್ದು ಹುಣ್ಣಿಮೆ-ಕೃಷ್ಣಪಾಡ್ಯಗಳ ಸಂಧಿಯು ರಾತ್ರಿಯಲ್ಲಿ ಬಂದರೆ ಚಂದ್ರಗ್ರಹಣ ಬರುವುದು.

## ಸೂರ್ಯಗ್ರಹಣವಿಷಯ

ವಿಧೂನಗ್ರಹಸ್ತನಕ್ಷತ್ರಾತ್ಷೋಡಶಂ ಯದಿ ಸೂರ್ಯಭಮ್।

ಅಮಾವಾಸ್ಯಾ ದಿವಾಶೇಷೇ ಸೂರ್ಯಗ್ರಹಣಮಾದಿಶೇತ್॥೧೦೨॥

ಯಾವ ಚಾಂದ್ರಮಾಸದಲ್ಲಿ ಹುಣ್ಣಿಮೆಯದಿನದ ನಕ್ಷತ್ರದಿಂದ ೧೬ನೇ ನಕ್ಷತ್ರವು ಸೂರ್ಯನಿರುವ



ನಕ್ಷತ್ರವಾಗಿ ಅಲ್ಲಿ ಚಂದ್ರನು ಇದ್ದು ಅದು ಅಮಾವಾಸ್ಯಾ-ಪಾಡ್ಯಗಳ ಸಂಧಿಕಾಲವಾಗಿ ಹಗಲು ಆದರೆ ಸೂರ್ಯಗ್ರಹಣವಾಗುವುದು.

## ಘಾತಚಂದ್ರವಿಚಾರ

ಜನ್ಮಸ್ಥೋ ಮೇಷರಾಶೇ ಸ್ಯಾದ್ ವೃಷಭಸ್ಯ ತು ಪಂಚಮಃ।

ನವಮೋ ಮಿಥುನಸ್ಯೇಂದು ದ್ವಿತೀಯಃ ಕರ್ಕಟಸ್ಯ ಚ॥೧೦೩॥

ಷಷ್ಠಸ್ತು ಸಿಂಹರಾಶೇಶ್ಚ ಕನ್ಯಾಯಾಂ ದಶಮಃಸ್ಮೃತಃ।

ತೃತೀಯಸ್ತು ತುಲಾರಾಶೇರ್ವೃಶ್ಚಿಕಸ್ಯ ಚ ಸಪ್ತಮಃ॥೧೦೪॥

ಚತುರ್ಥೋ ಧನ್ವಿನೋ ಜ್ಞೇಯೋ ಮಕರಸ್ಯಾಷ್ಟಮಸ್ತಥಾ।

ಕುಂಭಸ್ಯೈಕಾದಶಃಪ್ರೋಕ್ತೋ ಮೀನಸ್ಯ ದ್ವಾದಶಸ್ಮೃತಃ॥೧೦೫॥

ಘಾತಚಂದ್ರಾ ಇಮೇ ವರ್ಜ್ಯಾ ಯಾತ್ರಾಯಾಂ ರಾಜದರ್ಶನೇ।

ವಿವಾಹೇ ವಾಹನಾರೋಹೇ ಯುದ್ಧೇ ಭೈಷಜ್ಯಸೇವನೇ॥೧೦೬॥

ಮೇಷರಾಶಿಯವರು ಜನ್ಮಚಂದ್ರನನ್ನು ವೃಷಭರಾಶಿಯವರು ೫ನೇ ಚಂದ್ರನನ್ನು,ಮಿಥುನರಾಶಿಯವರು ೯ನೇಯಚಂದ್ರನನ್ನು, ಕರ್ಕಟರಾಶಿ ಯವರು ೨ನೇ ಚಂದ್ರನನ್ನು, ಸಿಂಹರಾಶಿಯವರು ೬ನೇ ಚಂದ್ರನನ್ನು, ಕನ್ಯಾರಾಶಿಯವರು ೧೦ನೆಯ ಚಂದ್ರನನ್ನು, ತುಲಾರಾಶರಾಶಿಯವರು ೩ನೇ ಚಂದ್ರನನ್ನು, ವೃಶ್ಚಿಕರಾಶಿಯವರು ೭ನೇ ಚಂದ್ರನನ್ನು,ಧನುರ್ರಾಶಿ ಯವರು ೪ನೆಯ ಚಂದ್ರನನ್ನು,ಮಕರರಾಶಿಯವರು ೮ನೇಯ ಚಂದ್ರನನ್ನು, ಕುಂಭರಾಶಿಯವರು ೧೧ನೆಯ ಚಂದ್ರನನ್ನು, ಮೀನರಾಶಿಯವರು ೧೨ನೆಯ ಚಂದ್ರನನ್ನು ಘಾತಚಂದ್ರ ನೆಂದು ತಿಳಿದು ಯಾತ್ರಾರಂಭದಲ್ಲೂ, ಅಧಿಕಾರಿದರ್ಶನದಲ್ಲೂ, ವಿವಾಹದಲ್ಲೂ, ಹೊಸವಾಹನಾರೋಹಣ ದಲ್ಲೂ, ಯುದ್ಧದಲ್ಲೂ, ಔಷಧಸೇವನೆಯಲ್ಲೂ ಬಿಡಬೇಕು.

ತೀರ್ಥಯಾತ್ರಾವಿವಾಹಾನ್ನಪ್ರಾಶನೋಪನಯನಾದಿಷು।

ಮಾಂಗಲ್ಯಸರ್ವಕಾರ್ಯೇಷು ಘಾತಚಂದ್ರ ನ ಚಿಂತಯೇತ್॥೧೦೭॥

ತೀರ್ಥಯಾತ್ರಾ,ವಿವಾಹಾ,ಅನ್ನಪ್ರಾಶನ,ಉಪನಯನಾದಿ ಸರ್ವಮಂಗಳ ಕಾರ್ಯಗಳಲ್ಲಿ ಘಾತಚಂದ್ರನನ್ನು ನೋಡಬೇಕಾದ್ದಿಲ್ಲ.

## ಋಣಧನವಿಷಯ

ಸ್ವವರ್ಗಂ ದ್ವಿಗುಣಂ ಕೃತ್ವಾ ಪರವರ್ಗೇಣ ಯೋಜಯೇತ್।

ಅಷ್ಟಭಿಸ್ತು ಹರೇದ್ಭಾಗಂ ಯೋಧಿಕಃ ಸ ಋಣೀ ಭವೇತ್॥೧೦೮॥

ತನ್ನವರ್ಗವನ್ನು ಎರಡರಷ್ಟುಮಾಡಿ ಬೇರೆಯವರವರ್ಗದ ಜೊತೆಗೆ ಕೂಡಿಸಿ ೮ರಿಂದ ಭಾಗಿಸಿದಾಗ ಯಾವುದು ಅಧಿಕವೋ ಋಣವೆಂದು ತಿಳಿಯ ಬೇಕು.

## ಗುರ್ವಾದಿತ್ಯವಿಚಾರ

ಯದ್ಯೇಕರಾಶೌ ಗುರವ್ರೋರ್ಕಯೋಗೇ ನ ಕಾರಯೇತ್ಸರ್ವಶುಭಂ ವರಿಷ್ಠಮ್। ಋಕ್ಷಾಂತರೇರ್ಕೇಜ್ಯ ಯದೇಕರಾಶೌ ತದಾ ನ ದೋಷಃ ಕಥಿತೋ ಮುನೀಂದ್ರೈಃ॥೧೯॥

ಒಂದುವೇಳೆ ಗುರು–ರವಿಗಳು ಒಂದೇರಾಶಿಯಲ್ಲಿ ಬಂದಾಗ ಉತ್ತಮವಾದ ಶುಭಕಾರ್ಯಮಾಡಬಾರದು, ಒಂದುರಾಶಿಯಲ್ಲೂ ಬೇರೆ–ಬೇರೆ ನಕ್ಷತ್ರದಲ್ಲಿದ್ದರೆ ದೋಷವಿಲ್ಲವೆಂದು ಮುನಿಗಳು ಹೇಳಿದ್ದಾರೆ.

## ನಾಮರಾಶಿ ಉಪಯೋಗ

ದೇಶೇ ಜ್ವರೇ ಗ್ರಾಮಗೃಹಪ್ರವೇಶೇ ಸೇವಾಸು ಯುದ್ಧೇ ವ್ಯವಹಾರಕಾರ್ಯೇ।
ದ್ಯೂತೇ ಚ ದಾನಾದಿಷು ನಾಮರಾಶಿರ್ಯಾತ್ರಾವಿವಾಹಾದಿಷು ಜನ್ಮರಾಶಿಃ॥

ತಥಾ ಚ– ದೇಶೇ ಗ್ರಾಮೇ ಗೃಹೇ ಯುದ್ಧೇ ಸೇವಾಯಾಂ ವ್ಯವಹಾರಕೇ।
ನಾಮರಾಶಿಪ್ರಧಾನತ್ವಂ ಜನ್ಮರಾಶಿಂ ನ ಚಿಂತಯೇತ್॥೧೧೧॥

ದೇಶ, ಜ್ವರ, ಗ್ರಾಮಪ್ರವೇಶ,ಗೃಹಪ್ರವೇಶ, ಸೇವಾ, ಯುದ್ಧ, ವ್ಯವಹಾರಕಾರ್ಯ, ದ್ಯೂತ, ದಾನಾದಿಗಳಲ್ಲಿ ನಾಮರಾಶಿಯನ್ನು ಯಾತ್ರಾ,ವಿವಾಹಾದಿಗಳಲ್ಲಿ ಜನ್ಮರಾಶಿಯನ್ನು ನೋಡಬೇಕು. ಮತ್ತು– ದೇಶ, ಗ್ರಾಮ, ಗೃಹ, ಯುದ್ಧ, ಸೇವಾ, ವ್ಯವಹಾರಗಳಲ್ಲಿ ನಾಮರಾಶಿಗಾಪ್ರಾಧಾನ್ಯವು ಜನ್ಮರಾಶಿಯನ್ನು ನೋಡಬಾರದು.

## ಕಾರ್ಯಗಳಲ್ಲಿ ಪತ್ನಿಸ್ಥಿತಿ

ಸೀಮಂತೇ ಚ ವಿವಾಹೇ ಚ ಚತುರ್ಥೀಸಹಭೋಜನೇ।
ದಾನೇ ವ್ರತೇ ಮಖೇ ಶ್ರಾದ್ಧೇ ಪತ್ನೀ ತಿಷ್ಠತಿ ದಕ್ಷಿಣೇ॥೧೧೨॥

ಸೀಮಂತ,ವಿವಾಹಗಳಲ್ಲಿ ಚತುರ್ಥೀ ಮತ್ತು ಸಹಭೋಜನ ಕರ್ಮ, ದಾನ, ವ್ರತ,ಹೋಮ, ಶ್ರಾದ್ಧಕಾರ್ಯಗಳಲ್ಲಿ ಭಾರ್ಯೆಯು ಪತಿಯ ಬಲಭಾಗದಲ್ಲಿ ಕೂಡಬೇಕು.

## ದ್ವಾದಶಸ್ಥಚಂದ್ರಪರಿಹಾರ

ಪಟ್ಟಬಂಧಚೌಲಾನ್ನಪ್ರಾಶನೇ ಚೋಪನಾಯನೇ।
ಪಾಣಿಗ್ರಹಪ್ರಯಾಣೇ ಚ ಚಂದ್ರಮಾ ವ್ಯಯಗಃ ಶುಭಃ॥೧೧೩॥

ಪಟ್ಟಾಭಿಷೇಕ, ಚೌಲ, ಅನ್ನಪ್ರಾಶನ, ಉಪನಯನ,ವಿವಾಹ, ಪ್ರಯಾಣಗಳಲ್ಲಿ ದ್ವಾದಶಚಂದ್ರನು ಶುಭನಾಗಿದ್ದಾನೆ.

ಇತಿ ಶ್ರೀಕೃಷ್ಣಾರ್ಯಪುತ್ರೇಣ ಜ್ಯೋತಿರ್ವಿದಾವಿಜಯವಿಠಲಾಚಾರ್ಯೇಣ ವಿಲಿಖಿತೇ
ಸಮಗ್ರಜೋತಿಷ್ಯಸಂಗ್ರಹೇ ಪಂಚಮೋಧ್ಯಾಯಃ ಸಂಪೂರ್ಣಮ್॥



# ಷಷ್ಟಾಧ್ಯಾಯ

## ಪರಿಶಿಷ್ಟಸಂಗ್ರಹ

### ಜ್ವರಾದಿಗಳ ಕ್ರೂರತೆಗೆ ಶಾಂತಿ

ಕ್ರೂರನಕ್ಷತ್ರ–ವಾರ–ತಿಥ್ಯಾದಿಗಳಲ್ಲಿ ಜ್ವರಾದಿ ರೋಗಗಳು ಬಂದಾಗ ಅದರ ಶಾಂತಿಗಾಗಿ ಅಪಮೃತ್ಯುಭಯನಿವಾರಣೆಗಾಗಿ ಮೃತ್ಯುಂಜಯ ಜಪ, ಧನ್ವಂತರಿಜಪಗಳನ್ನು ಮಾಡಿಸಬೇಕು. ಮತ್ತು ಹೊಸದೊಂದು ಪ್ರಣತಿಯಲ್ಲಿ ಔಡಲಎಣ್ಣೆ,ಎಳ್ಳೆಣ್ಣೆ,ತುಪ್ಪಗಳನ್ನು ಸಮವಾಗಿ ಹಾಕಿ ಉತ್ತಮವಾದ ಬತ್ತಿಯನ್ನಿಟ್ಟು ಪ್ರಣತಿಯನ್ನು ನವಧಾನ್ಯಗಳಮೇಲಿಟ್ಟು ಒಂದುವಾರ ದೇವರಮುಂದೆ ದೀಪಹಚ್ಚಿದರೆ, ಅಪಮೃತ್ಯುಭಯ ದೀಪಾರಾಧನೆ ಯಾಗುವುದು. ಇದರಿಂದ ಖಚಿತವಾಗಿ ಅರಿಷ್ಟನಿವೃತ್ತಿಯಾಗಿ ರೋಗವು ಉಪಶಮನಹೊಂದುವುದು.

### ಶಾಂತಿಗಾಗಿ ಅಗ್ನಿ–ಆಹುತಿಗಳನ್ನು ನೋಡುವಿಕೆ

ಸೈಕಾತಿಥಿರ್ವಾರಯುತಾ ಯುಗಾಪ್ತಾಶೇಪೇ ಗುಣೇಭ್ರೇ ಭುವಿವಹ್ನಿವಾನಃ।
ಸೌಖ್ಯಾಯಿ ಹೋಮೇ ಶಶಿಯುಗ್ಮೇಶೇಷೇಪ್ರಾಣಾರ್ಥನಾಶೌ ದಿವಿಭೂತಲೇ ಚ॥

ಯಾವ ದಿನ ಶಾಂತಿ ಹೋಮಾದಿಗಳನ್ನು ಮಾಡಬೇಕಾಗಿದೆಯೊ ಆ ದಿನದ ತಿಥಿಸಂಖ್ಯೆಗೆ ಒಂದು ಸಂಖ್ಯೆಯನ್ನು ಸೇರಿಸಿ ಅದಿನ ವಾರಸಂಖ್ಯೆಯನ್ನೂ ಸೇರಿಸಿ ನಾಲ್ಕರಿಂದ ಭಾಗಿಸಿದಾಗ ಶೇಷವು ೦ ಅಥವಾ ೩ಬಂದರೆ ಅಗ್ನಿಯು ಮರ್ತ್ಯಲೋಕದಲ್ಲಿರುವುದು. ೧ ಶೇಷವು ಬಂದರೆ ಅಗ್ನಿಯು ಆಕಾಶಲೋಕದಲ್ಲಿರುವುದು. ಅದರಿಂದ ಪ್ರಾಣಹಾನಿ. ೨ ಬಂದರೆ ಅಗ್ನಿಯು ಪಾತಾಳ ಲೋಕದಲ್ಲಿರುವುದು. ಅದರಿಂದ ಅರ್ಥಹಾನಿ. ಆದ್ದರಿಂದ ೧–೨ ಶೇಷ ಉಳಿದರೆ ಶಾಂತಿ ಹೋಮಾದಿಗಳಿಗೆ ಯುಕ್ತವಲ್ಲವೆಂದು ತಿಳಿಯಬೇಕು.

ತರಣಿವಿಟ್ ಭೃಗುಭಾಸ್ಕರಚಂದ್ರಮಾ ಕುಜಸುರೇಜ್ಯವಿದುಂತುದಕೇತವಃ।
ಸೂರ್ಯಭಾದ್ಗಣನಂ ಕೃತ್ವಾ ಪ್ರತ್ಯೇಕಂ ಚ ತ್ರಯಂ ನ್ಯಸೇತ್॥
ಹೋಮಾಹುತಿಃ ಖಲೇನೇಷ್ಟಾ ಶುಭದಾ ಶುಭಖೇಚರೇ।

ಸೂರ್ಯ ನಕ್ಷತ್ರದಿಂದ ನಿತ್ಯನಕ್ಷತ್ರದ ವರೆಗೂ ಎಣಿಸಬೇಕು. ಮುಂದೆ ಹೇಳುವ ಕ್ರಮದಂತೆ ಪ್ರತಿಗ್ರಹಕ್ಕೂ ಮೂರುನಕ್ಷತ್ರಗಳನ್ನು ಎಣಿಸಿ ವಿಭಾಗಮಾಡಬೇಕು. ಸೂರ್ಯ,ಬುಧ,ಶುಕ್ರ, ಶನಿ, ಚಂದ್ರ,ಕುಜ,ಗುರು,ರಾಹು,ಕೇತು ಈ ಕ್ರಮದಿಂದ ಎಣಿಸಬೇಕು. ಪಾಪಗ್ರಹಗಳಾದ ರವಿ,ಕುಜ, ಶನಿ,ರಾಹು,ಕೇತು ಗಳ ಮುಖದಲ್ಲಿ ಆಹುತಿ ಬಿದ್ದರ ಆಶುಭ ಮಿಗಿಲಿನ ಶುಭರಾದ ಚಂದ್ರ,ಬುಧ, ಗುರು,ಶುಕ್ರರ ಮುಖದಲ್ಲಿ ಆಹುತಿಯು ಶುಭವೆಂದು ತಿಳಿಯಬೇಕು.

## ಗ್ರಹ ಶೀಲಗಳು

**ರವಿ** :–ಪಿತೃ,ಆತ್ಮಾ,ತನು,ರಾಜ್ಯ,,ಪ್ರಭಾವ,ಧೈರ್ಯ, ಅಧಿಕಾರ, ಬಲಗಣ್ಣು, ಪಿತ್ತ, ಜ್ವರ, ಇತ್ಯಾದಿಗಳಿಗೆ ಕಾರಕನು. ಕಳಿಂಗ ದೇಶಾಧಿಪತಿ.ಏಳು ಕುದುರೆಗಳುಳ್ಳ ರಥವನ್ನು ಆರೋಹಿಸಿದವನು, ಎರಡುಕೈಯಲ್ಲಿ ಕಮಲಗಳನ್ನು ಧರಿಸಿರುವವನು, ಕಾಶ್ಯಪಸಗೋತ್ರಜನು,ಪ್ರಭವ ಸಂವತ್ಸರ ಮಾಘ ಶುದ್ಧ ಸಪ್ತಮೂ ವಿಶಾಖಾ ನಕ್ಷತ್ರದಲ್ಲಿ ಜನಿಸಿದವನು, ವರ್ತುಲಾಕಾರಮಂಡಲ,ಭಾನುವಾರ, ಸಿಂಹರಾಶಿಗಧಿಪತಿ,ಅಗ್ನಿಆಧಿದೇ ವತೆ,ಪ್ರತ್ಯಧಿದೇವತೆ ರುದ್ರ,ಸಿಂಹಮೂಲತ್ರಿಕೋಣ,ಮೇಷ ಉಚ್ಚ ೧೦ ನೇ ಭಾಗ ಪರಮೋಚ್ಚ,ತುಲಾದಲ್ಲಿ ೧೦ ಭಾಗ ನೀಚ ಉಳಿದ್ದು ಶತ್ರುಕ್ಷೇತ್ರ,ಚಂದ್ರಕುಜಗುರುಗಳು ಮಿತ್ರರು,ಶುಕ್ರಶನು ಶತ್ರುಗಳು,ಬುಧ ಸಮ್,ಕ್ಷತ್ರಿಯ, ರಕ್ತಶ್ಯಾಮಲವರ್ಣ,ಗೋಧಿಧಾನ್ಯಪ್ರಿಯ, ಏಳು ಸಾ ವಿರಜಪ,ಅರ್ಕಸಮಿತ್ತು, ಸತ್ವಗುಣಾಧಿಕ,ಪುರುಷಗ್ರಹ, ಪೂರ್ವದಿ ಗಧಿಪತಿ, ಅಗ್ನಿಗೂ, ಬ್ರಾಹ್ಮಣವರ್ಣಕ್ಕೂ ಅಧಿಪತಿ,ನಾಲ್ಕುಮೂಲೆಗಳುಳ್ಳ ಚತುರಸ್ರಾಕಾರ,ಜೇನಿನಂತ ಪಿಂಗಳವರ್ಣದ ಕಣ್ಣುಗಳು, ಚಿಕ್ಕದಾದ ಕೂದಲುಗಳು,ಪೈತ್ಯಸ್ವಭಾವ,ದೇವಸ್ಥಾನಪೂಜಾಗೃಹಕ್ಕೆ ಅಧಿಪತಿ, ಸ್ಥೂಲವಸ್ತ್ರ,ತಾಮ್ರಲೋಹ,ಕಾರರುಚಿ ಪ್ರಿಯ,ಮಧ್ಯಾಹ್ನಕಾಲಾಭಿಮಾನಿ, ಅಸ್ಥಿಗಳಲ್ಲಿ ಬಲ,ಮುದುಕ.

**ಚಂದ್ರ** :–ಮಾತೃಸೌಖ್ಯ, ಮನಸ್ಸು,ಬುದ್ಧಿ, ಸೌಂದರ್ಯ,ಜನಸೌಖ್ಯ,ಬಲ,ಸಸ್ಯ, ರಜತ, ಯಾತ್ರೆ,ಅಶ್ವಸಂಚಾರ, ಸದಾವೇಗದಸಂಚಾರ,ಶ್ವೇತಗಂಧ, ಶ್ವೇತಪುಷ್ಪ, ಯಾಮುನದೇಶಾಧಿಪತಿ, ಹತ್ತುಕುದುರೆಗಳುಳ್ಳವಾಹನ, ದಂಡಾಯುಧ, ಆತ್ರೇಯಸಗೋತ್ರ, ನಂದನಸಂವತ್ಸರಕಾರ್ತಿಕಶುದ್ಧ, ಚತುರದಶಿ ಕೃತ್ತಿಕಾ ನಕ್ಷತ್ರದಲ್ಲಿ ಜನನ, ಸೋಮವಾರಾಧಿಪತಿ, ಕರ್ಕಾಟಕರಾಶಿ ಅಧಿಪತಿ, ವೃಷಭ ಮೂಲತ್ರಿಕೋಣ, ವೃಷಭದಲ್ಲಿ ೩ ಬಾಗಗಳು ಉಚ್ಚ, ವೃಶ್ಚಿಕ ದಲ್ಲಿ ೩ ಬಾಗಗಳು, ರವಿಬುಧರು ಮಿತ್ರರು,ಶತ್ರುಗಳು ಯಾರೂ ಇಲ್ಲ, ಕುಜ,ಗುರುಶುಕ್ರಶನಿ ಸಮರು, ಹನ್ನೊಂದು ಸಾವಿರಜಪ, ಶ್ವೇತ ವರ್ಣಾ ಭಿಮಾನಿ, ಮುತ್ತುಗಸಮಿತ್ತು, ಅಕ್ಕಿಧಾನ್ಯಪ್ರಿಯ, ವೈಶ್ಯಜಾತಿ, ಗೌರವರ್ಣ, ಮುತ್ತಿನಾಭರಣ, ಸ್ತ್ರೀಗ್ರಹ,ರಾಜ,ವಾಯುವ್ಯದಿಕ್ಕಿಗೆ ಅಧಿಪತಿ, ಗುಂಡಾದ ಶರೀರ, ಮೃದುವಾಕ್ಕು, ದಿವ್ಯದೃಷ್ಟಿ, ವಾತಶ್ಲೇಷ್ಮ ಮಿಶ್ರಗುಣ,ಜ್ಞಾನಿ, ಜಲಸಮೀಪ, ಸ್ನಾನಕಾಲಕೆ ಅಧಿಪತಿ,ನೂತನವಸ್ತ್ರಪ್ರಿಯ,ಉಪ್ಪು ರುಚಿ, ಅಪರಾಹ್ನಕಾಲಾಭಿಮಾನಿ,ರಕ್ತಪುಷ್ಟಿ ಉಳ್ಳವ.

**ಕುಜ** :–ಸಹೋದರಸಹೋದರಿಯರು,ಪರಾಕ್ರಮ,ವಾಹನ,ಸಿಟ್ಟು,ತರ್ಕಶಾಸ್ತ್ರ,ಶಸ್ತ್ರವಿದ್ಯೆ, ಶತ್ರುಗಳು,ಉಷ್ಣಪ್ರಕೃತಿ,ಸೇವಾಧಿಪತ್ಯ,ಸ್ಫೋಟಕಹುಣ್ಣು ಉಂಟು ಮಾಡುವಿಕೆ, ಕೆಂಪುಗಂಧ, ಕೆಂಪುಹೂವು,ಮೇಷವಾಹನ, ನಾಲಕ್ಕು ಭುಜಗಳು, ಶಕ್ತಿಗದಾಶೂಲಖಡ್ಗ ಆಯುಧಗಳು ಅವಂತಿದೇಶಾ ಧಿಪತಿ, ಭಾರದ್ವಾಜಗೋತ್ರ,ಅಕ್ಷಯಸಂವತ್ಸರ ವೈಶಾಖ ಬಹುಳ ದ್ವಿತೀಯಾ ಪೂರ್ವಫಲ್ಗುಣೀ ನಕ್ಷತ್ರದಲ್ಲಿ ಜನಿಸಿದವ, ಮಂಗಳವಾರಾಧಿಪತಿ, ಸೂರ್ಯಗ್ರಹದ ದಕ್ಷಿಣದಲ್ಲಿ ತ್ರಿಕೋಣಾಕಾರ ಮಂಡಲದಲ್ಲಿ ಅಧೀಷ್ಠಿತ ನಾದವ, ಪೃಥಿವೀ ಅಧಿದೇವತೆ,ಪ್ರತ್ಯಧಿದೇವತೆ



ಕ್ಷೇತ್ರಪಾಲ, ಕ್ರೂರಗ್ರಹ, ಮೇಷವೃಶ್ಚಿಕಗಳು ಸ್ವಕ್ಷೇತ್ರಗಳು, ಮೇಷಮೂಲತ್ರಿಕೋಣ, ಮಕರದಲ್ಲಿ ೨೮ ಭಾಗ ಪರಮೊಚ್ಚ, ಕರ್ಕದಲ್ಲಿ ೨೮ನೇ ಭಾಗ ಪರಮನೀಚ. ರವಿಚಂದ್ರಕುಜರು ಮಿತ್ರರು,ಬುಧ ಶತ್ರು,ಶುಕ್ರಶನಿ ಸಮರು,ಕಗ್ಗಲಿ(ಖಾದಿರ) ಸಮಿತ್ತು,ತೊಗರಿಧಾನ್ಯ,ಕ್ಷತ್ರಿಯವರ್ಣ, ರಕ್ತಗೌರವರ್ಣ, ಹವಳ, ತಮೋಗುಣಿ,ಪುರುಷಗ್ರಹ,ಶಸ್ತ್ರವೈದ್ಯ, ಶಸ್ತ್ರ ಚಿಕಿತ್ಸಾ,ಯಂತ್ರಗಳು, ಸೇನಾಧಿಪತಿ, ಅಧಿದೇವತಾ ಕುಮಾರ ಸ್ವಾಮಿ, ದಕ್ಷಿಣದಿಗಧಿಪತಿ,ಅಗ್ನಿಗೆ–ಕ್ಷತ್ರಿಯವರ್ಣಕ್ಕೆ ಅಧಿಪತಿ, ಸಣ್ಣದಾದ ನಡುಬಾಗ,ಚಪನಬುದ್ಧಿ, ಅಗ್ನಿ ಹತ್ತಿರಕ್ಕೂ,ಪಾಕಶಾಲೆಗೂ ಅಧಿಪತಿ, ಸುಟ್ಟಬಟ್ಟೆಧರಿಸಿದವ, ಸುವರ್ಣ, ತಾಮ್ರಗಳು, ಮಧ್ಯಾಹ್ನ ಕಾಲಾಭಿಮಾನಿ, ಅಸ್ಥಿಯಲ್ಲಿರುವ ಮಜ್ಜೆಯಲ್ಲಿ ಬಲವುಳ್ಳವ,ಯುವಕ.

**ಬುಧ** :–ಜೋತಿಷ್ಯವಿದ್ಯ,ಗಣಿತ,ವ್ಯವಹಾರ,ಯುಕ್ತಿ,ಶಿಲ್ಪವಿದ್ಯ,ಜ್ಞಾತಿ(ಬಂಧು) ಗಳು, ತಂತ್ರಗಳು, ವೇದಾಂತ,ವಿಷ್ಣುಭಕ್ತಿ,ಸೋದರಮಾವಂದಿರ ಅಭಿವೃದ್ಧಿ, ವೈದ್ಯ,ದಾಸದಾಸೀಜನರನ್ನು ಉಂಟುಮಾಡುವಿಕೆ, ಹಸಿರು ಗಂಧ,ಹಸಿರುಪುಷ್ಪ,ಹಸಿರುವಸ್ತ್ರಧರಿಸಿದವ, ಸಿಂಹವಾಹನ, ನಾಲ್ಕು ಭುಜಗಳು,ಖಡ್ಗ,ಚರ್ಮ,ದಂಡ,ಗದಾ ಆಯುಧಗಳು, ಉತ್ತರಾ ಭಿಮುಖ, ಮಗಧದೇಶಾಧಿಪತಿ, ಆತ್ರೇಯಸಗೋತ್ರ, ಸೌಮ್ಯಸಂವತ್ಸರ ಭಾದ್ರಪದ ಶುಕ್ಲ ಏಕಾದಶೀ ಉತ್ತರಫಲ್ಗಣೀ ನಕ್ಷತ್ರದಲ್ಲಿ ಜನಿಸಿದವ, ಬುಧವಾರಕ್ಕಧಿಪತಿ, ಸೂರ್ಯ ಗ್ರಹಕ್ಕೆ ಈಶಾನ್ಯದಿಕ್ಕಿನಲ್ಲಿ ಬಾಣಾಕಾರ ಮಂಡಲದಲ್ಲಿ ವಾಸಕರ್ತ, ವಿಷ್ಣು ಅಧಿದೇವತೆ, ನಾರಾಯಣ ಪ್ರತ್ಯಧಿದೇವತೆ,ಸೌಮ್ಯಗ್ರಹ,ಮಿಥುನ–ಕನ್ಯಾ ಸ್ವಕ್ಷೇತ್ರಗಳು, ಕನ್ಯಾಮೂಲ ತ್ರಿಕೋಣ,ಕನ್ಯಾದಲ್ಲಿ೧೫ ಭಾಗ ಪರಮೊಚ್ಚ, ಮೀನದಲ್ಲಿ ೧೫ನೇ ಭಾಗ ಪರಮನೀಚ. ರವಿ,ಶುಕ್ರರು ಮಿತ್ರರು,ಚಂದ್ರ ಶತ್ರು,ಕುಜಗುರುಶನಿ ಸಮರು, ನಾಲಕ್ಕುಸಾವಿರ ಜಪ,ಉತ್ತರಾಣಿ ಸಮಿತ್ತು,ಹೆಸರುಧಾನ್ಯ, ವೈಶ್ಯವರ್ಣ,ಪೀತಗೌರವರ್ಣ,ಮರಕತ ಮಣಿ, ರಜೋಗುಣಿ, ನಪುಂಸಕ,ಯುವರಾಜ,ಈಶಾನ್ಯದಿಕ್ಕಿಗೂ ಶೂದ್ರರಿಗೂ ಅಧಿಪತಿ, ಗುಂಡಾದ ಶರೀರ,ವಾತಪಿತ್ತಶ್ಲೇಷ್ಮಪ್ರಕೃತಿ,ಹಾಸ್ಯಪ್ರಿಯ,ಲೆಕ್ಕಪತ್ರಗಳಲ್ಲಿ ನಿಪುಣ, ಕವಿತಾಶಕ್ತ,ಶಿಲ್ಪಕಲೆಯಲ್ಲಿ ಸಮರ್ಥ,ಕ್ರೀಡಾಗೃಹಾಧಿಪ, ಒದ್ದೆಬಟ್ಟೆ ಧರಿಸಿದವ, ಹಿತ್ತಾಳಿ ಕಂಚುಗಳಲ್ಲಿ ಆಸೆ, ಷಡ್ರಸಪ್ರಿಯ, ಪ್ರಾತಃಕಾಲಾಭಿಮಾನಿ,ಚರ್ಮದಲ್ಲಿ ಬಲವುಳ್ಳವ, ಯುವಾವಸ್ಥ.

**ಗುರು** :– ಧನ,ವಿದ್ಯಾ,ಪುತ್ರ,ಜ್ಯೋತಿಷ್ಯ,ವೇದ,ಶಾಸ್ತ್ರ,ಬಂಗಾರ,ಮನೆ,ವಾಹನ,ಪಲ್ಲಕ್ಕಿ, ಮಠ,ಗಜಾಶ್ವಾದಿ ಐಷಾರಾಮಿ ವಾಹನಗಳು,ಯಜ್ಞಯಾಗಾದಿಗಳು, ಸತ್ಕರ್ಮ, ಆಚಾರ, ಸೌಜನ್ಯ,ಶಾಂತಿ, ಮಂತ್ರಿತ್ವ,ಐಶ್ವರ್ಯ, ಬಂಧು ವೃದ್ಧಿ, ದಯ ದಾಕ್ಷಿಣ್ಯ,ಧರ್ಮ, ಶುಭವಸ್ತ್ರ,ದೇಶಭಕ್ತಿ, ಸತ್ಯ ಇತ್ಯಾದಿ ಗಳಿಗೆ ಕಾರಕನಾಗಿರುವನು.ಕನಕವರ್ಣ,ಕನಕಗಂಧ,ಕನಕಪುಷ್ಪ, ಪೂರ್ವಾಭಿ ಮುಖ,ರಥವಾಹನ,ನಾಲಕ್ಕು ಭುಜ, ಖಡ್ಗದುಂಡಜಪಮಾಲ ಕಮಂಡಲ ಆಯಧ, ಸಿಂಧುದೇಶಾಧಿಪತಿ, ಆಂಗೀರಸಗೋತ್ರ, ಸೌಮ್ಯಸಂವತ್ಸರ ಆಶ್ವಯುಜ ಶುಕ್ಲ ದ್ವಾದಶೀ ಧನಿಷ್ಠಾನಕ್ಷತ್ರದಲ್ಲಿ ಜನಿಸಿದವ, ಗುರು ವಾರಾಧಿಪ, ಸೂರ್ಯನಿಗೆ ಉತ್ತರದಲ್ಲಿದೀರ್ಘ ಚತುರಸ್ರಮಂಡಲದಲ್ಲಿ ಇರುವವ.ಬ್ರಹ್ಮ

ಅಧಿದೈವ,ಇಂದ್ರ ಪ್ರತ್ಯಧಿದೈವ, ಸೌಮ್ಯಗ್ರಹ, ಧನುಸ್ಸು–ಮೀನಗಳು ಸ್ವಕ್ಷೇತ್ರಗಳು, ಕರ್ಕಾಟಕದ ೫ ಭಾಗಗಳು ಪರಮೋಚ್ಚ, ಧನುಸ್ಸುಮೂಲತ್ರಿಕೋಣ, ಮಕರದ ೫ಭಾಗಗಳು ಪರಮನೀಚ, ರವಿಚಂದ್ರಕುಜ ಮಿತ್ರರು, ಬುಧ,ಶುಕ್ರರು ಶತ್ರುಗಳು,ಶನಿ ಸಮ. ೧೯ಸಾವಿರಜಪ,ಅಶ್ವಥ ಸಮಿತ್ತು, ಕಡಲೆ ಧಾನ್ಯ, ಬ್ರಾಹ್ಮಣವರ್ಣ, ಗೋಮೇಧಿಕಮಣಿ, ಸತ್ವಗುಣ, ಪುರುಷಗ್ರಹ, ಗೌರವರ್ಣ, ಮಂತ್ರಿ,ಉತ್ತರ ದಿಗಧಿಪತಿ,ಆಕಾಶತತ್ವ, ಬ್ರಾಹ್ಮಣವರ್ಣಕ್ಕಧಿಪತಿ,ಸ್ಥೂಲಶರೀರ, ಬಂಗಾರದ ಬಣ್ಣದ ಕೇಶವುಳ್ಳವ,ದಿವ್ಯವಾದಬುದ್ಧಿ,ಶ್ಲೇಷ್ಮಸ್ವಭಾವ, ಶೌರ್ಯವಂತ, ಡೊಳ್ಳುಹೊಟ್ಟೆ, ಧನಾಗಾರಾಧಿಪತಿ, ಮಧ್ಯಮವಾದ ವಸ್ತ್ರ, ಸುವರ್ಣ–ರಜತದ್ರವ್ಯ,ಮಧುರರುಚಿ, ಪ್ರಾತಃಕಾಲಾಭಿಮಾನಿ, ಸಾರವುಳ್ಳ ಮೆದುಳು,ಪ್ರೌಢವಯಸ್ಕ.

**ಶುಕ್ರ** :–ಕಳತ್ರ,ವಿವಾಹ,ನೃತ್ಯ,ನಾಟ್ಯ–ನಟನಾಚತ್ಕೃತಿ,ಸಂಗೀತ,ಸಾಹಿತ್ಯ,ಕವಿತ್ವ ರಚನಾ ಕೌಶಲ್ಯ,ಸ್ತ್ರೀಸೌಖ್ಯ,ಕಾಮ,ಭೋಗ,ವ್ಯಭಿಚಾರ,ವಾಹನ, ಆಭರಣಗಳು,ಐಶ್ವರ್ಯ, ಮುದ್ರಾ ಅಧಿಕಾರ, ಪ್ರಭುತ್ವ,ಸುಂದರಿಯಾದ ಹೆಂಡತಿ,ವೇಶಾಭೋಗ,ಮೇಹರೋಗ, ಬಿಳೀಬಣ್ಣ,ಬಿಳಿಯಹೂವು, ಬಿಳಿಯರೇಷ್ಮೇವಸ್ತ್ರ, ರಥವಾಹನ,ನಾಲ್ಕುಭುಜಗಳು, ದಂಡಕಮಂಡಲು ಜಪಮಾಲೆ ಅಭಯಮುದ್ರೆ ಅಥವಾ ಕತ್ತಿಹಿಡಿದಿರುವಾತ, ಜಟಾ ಜೂಟಧಾರಿ, ಪೂರ್ವಾಭಿಮುಖಿ,ಕಾಂಭೋಜಾಧಿಪತಿ, ಭಾರ್ಗವಸಗೋತ್ರ, ಮನ್ಮಥ ಸಂವತ್ಸರ ಶ್ರಾವಣಶುದ್ಧದಶಮೀ ಪುಷ್ಯನಕ್ಷತ್ರದಲ್ಲಿ ಜನನ, ಶುಕ್ರವಾರಾಧಿಪತಿ, ಸೂರ್ಯಗ್ರಹಕ್ಕೆ ಪೂರ್ವಭಾಗದಲ್ಲಿಪಂಚಕೋಣಾಕಾರದಲ್ಲಿ ವಾಸಿಸುವವ. ಇಂದ್ರಾಣಿ ಅಧಿದೇವತೆ,ಇಂದ್ರಪ್ರತ್ಯಧಿದೇವತೆ,ಸೌಮ್ಯಗ್ರಹ,ವೃಷಭ–ತುಲಾಗಳು ಸ್ವಕ್ಷೇತ್ರಗಳು, ಮೀನದ ೨೭ ಭಾಗಗಳು ಪರಮೋಚ್ಚ, ತುಲಾಮೂಲತ್ರಿಕೋಣ,ಕನ್ಯಾದ ೨೭ಭಾಗಗಳು ಪರಮನೀಚ,ಬುಧಶನಿ ಮಿತ್ರರು, ರವಿಚಂದ್ರರು ಶತ್ರುಗಳು,ಕುಜಗುರು ಸಮರು, ಇಪ್ಪತ್ತುಸಾವಿರಜಪ, ಅತ್ತಿ(ಔದುಂಬರ)ಸಮಿತ್ತು,ಅವರೆಧಾನ್ಯ, ಬ್ರಾಹ್ಮನವರ್ಣ, ಪುಷ್ಯರಾಗಮಣಿ,ರಜೋಗುಣಿ, ಸ್ತ್ರೀಗ್ರಹ,ಮಂತ್ರಿ, ಆಗ್ನೇಯದಿಗಧಿಪತಿ, ಜಲಕ್ಕೆ– ಬ್ರಾಹ್ಮವರ್ಣಕ್ಕೆ ಅಧಿಪತಿ,ಸುಂದರವಾದ ಛಾಯೆ, ಸುಂದರನೇತ್ರಗಳು,ವಾತಶ್ಲೇಷ್ಮ ಮಿಶ್ರಪ್ರಕೃತಿ,ಗುಂಗುರಾದ ನಿಬಿಡ ನೀಳಾವಾದ ನೀಲಕುಂಚಿತ ಕೇಶರಾಶಿ,ಸುಖದಲ್ಲಿ ಆಸಕ್ತಿಉಳ್ಳವ, ಶಯನಗೃಹಾಧಿಪತಿ,ದೃಢವಾದ ಉತ್ತಮವಸ್ತ್ರ, ಸುವರ್ಣ–ಮುತ್ತುಗಳು, ಹುಳಿರುಚಿ,ಅಪರಾಹ್ನ ಕಾಲಾಧೀಶ, ಇಂದ್ರಿಯಗಳಲ್ಲಿ ಬಲವುಳ್ಳವ, ಪ್ರೌಢವಯಸ್ಕ.

**ಶನಿ** :–ಆಯುರ್ದಾಯ,ನೀಚವಿದ್ಯಾ,ಹೂಣ(ಇಂಗ್ಲೀಷ್)ವಿದ್ಯಾ,ನೀಚದೇವತೋ ಪಾಸನೆ, ಮರಣ,ದುಃಖ,ಸುಳ್ಳು,ಬಂಧನ,ಸ್ಫೋಟಕ,ಕುರೂಪ, ದುಷ್ಪ್ರವರ್ತನ,ಪಾಪ, ನೀಚಜೀವನ, ದಾಸ್ಯವೃತ್ತಿ, ವಿದ್ಯೆಯಿಂದ ಉದ್ಯೋಗ,ಹೂಣಲಿಪಿ ಇತ್ಯಾದಿಗಳಿಗೆ ಕಾರಕನಾಗಿರುವನು. ನೀಲವರ್ಣ,ನೀಲಗಂಧ, ನೀಲಪುಷ್ಪ,ಪಶ್ಚಿಮಾಭಿ ಮುಖಿ,ಹದ್ದಿನಿಂದ ಎಳೆಯಲ್ಪಡುವ ರಥಾರೂಢ,ಸೌರಾಷ್ಟದೇಶಾಧಿಪತಿ, ಧನುಸ್ಸುಬಾಣಶೂಲಗದ ಆಯುಧಗಳನ್ನು ಧರಿಸಿದ ನಾಲಕ್ಕು ಭುಜಗಳು,ಕಾಶ್ಯಪಸಗೋತ್ರ,



ವಿಕಾರಿಸಂವತ್ಸರ ಮಾರ್ಗಶಿರ ಬಹುಳ ನವಮೀ ರೋಹಿಣೀನಕ್ಷ ತ್ರದಲ್ಲಿ ಜನಿಸಿದವ,ಶನಿವಾರಾಧಿಪತಿ, ಸೂರ್ಯಗ್ರಹದ ಪಶ್ಚಿಮದಿಕ್ಕಿನಲ್ಲಿ ಧನುರಾಕಾರಮಂಡಲದಲ್ಲಿ ಅಧಿಷ್ಠಾತ,ಅಧಿದೇವತ ಯಮಧರ್ಮರಾಜ, ಪ್ರತ್ಯಧಿದೇವತೆ ಪ್ರಜಾಪತಿ,ಕ್ರೂರಗ್ರಹ, ಮಕರಕುಂಭಗಳು ಸ್ವಕ್ಷೇತ್ರಗಳು, ತುಲಾದ ೨೦ ಭಾಗಗಳು ಪರಮೋಚ್ಚ, ಕುಂಭಮೂಲತ್ರಿಕೋಣ,ತುಲಾದ ೨೦ಭಾಗಗಳು ಪರಮನೀಚ,ಬುಧಶುಕ್ರರು ಮಿತ್ರರು,ರವಿಚಂದ್ರಕುಜರು ಶತೃಗಳು,ಗುರು ಸಮ, ೨೩ಸಾವಿರಜಪ, ಬನ್ನಿಸಮಿತ್ತುಗಳು,ಕರೇಎಳ್ಳು, ಶೂದ್ರಜಾತಿ,ನೀಲಮಣಿ,ತಮೋಗುಣ, ನಪುಂಸಕ,ವಾಯುತತ್ವ, ಸಂಕರಜಾತಿಗೆ ಅಧಿಪ,ಕಪಿಲನೇತ್ರ,ಸಣಕಲಾದ ಉದ್ದವಾದ ಶರೀರ, ದೊಡ್ಡಹಲ್ಲುಗಳು, ಮುಳ್ಳಿನಂತೆ ಕಠಿನವಾದ ವರಟುಕೇಶಗಳು, ವಾತಪ್ರಕೃತಿ, ಸ್ಥಬ್ಧ,ಭಯಂಕರ,ದರಿದ್ರ, ಗೋಧೂಳಿಕಾಲಾಧಿಪತಿ, ಹರಿದವಸ್ತ್ರ ಧರಿಸಿದವ, ಕಬ್ಬಿಣಲೋಹ,ವಗುರುರುಚಿ, ಸಾಯಂಕಾಲಾಭಿಮಾನಿ,ನರಗಳಲ್ಲಿ ವಿಶೇಷಬಲವುಳ್ಳವ,ಮುದುಕ.

**ರಾಹು** :–ತಟಾಕ,ಆರಾಮ,ನಿರ್ಜನಪ್ರದೇಶ,ಮಾತಾಮಹಚಿಂತೆ,ಪಿತೃಚಿಂತೆ,ವಿಷವೈದ್ಯ, ನೀಚವಿದ್ಯ, ನೀಚಜೀವನ,ಧೂಮ್ರವರ್ಣ,ಧೂಮ್ರಗಂಧ,ಧೂಮ್ರಪುಷ್ಪ, ಅಧರ್ಮಪ್ರವೃತ್ತಿ,ಶೂಲಖಡ್ಗ ಚರ್ಮಕತಾರಿಆಯುಧಗಳುಳ್ಳ ನಾಲಕ್ಕು ಭುಜಗಳು,ಮೇರುವನ್ನು ಅಪಸವ್ಯವಾಗಿ ಪ್ರದಕ್ಷಿಣೆ ಮಾಡುವವ, ಕರಾಳಮುಖಿ, ಸಿಂಹವಾಹನ, ವಿಕಾರವಾದ ಆಕಾರ,ಪೈಠೀನಸ ಗೋತ್ರಜ, ಬರ್ಬರದೇಶಾಧಿಪ,ರಾಕ್ಷಸಸಂವತ್ಸರ ಮಾಘಬಹುಳ ಚತುರ್ದಶಿ ಅಶ್ಲೇಷಾದಲ್ಲಿ ಜನಿಸಿದವ.ಶುಕ್ರವಾರಾಭಿಮಾನಿ, ಸೂರ್ಯಗ್ರಹಕ್ಕೆ ನೈಋತ್ಯದಲ್ಲಿ ಶೂರ್ಪಾಕಾರ ಮಂಡಲದಲ್ಲಿ ವಾಸಮಾಡುವವ,ಅಧಿದೇವತಾಗೊವು, ಪ್ರತ್ಯದಿ, ದೇವತಾಸರ್ಪ, ಕ್ರೂರಗ್ರಹ, ಕನ್ಯಾಸ್ವಕ್ಷೇತ್ರ, ವೃಷಭ ಉಚ್ಚ, ಸಿಂಹಮೂಲತ್ರಿಕೋಣ, ವೃಶ್ಚಿಕ ನೀಚ, ಶುಕ್ರಶನಿ ಮಿತ್ರರು, ರವಿಚಂದ್ರಗುರು ಶತೃಗಳು,ಬುಧಕುಜ ಸಮರು, ೧೮ ಸಾವಿರಜಪ, ದೂರ್ವಾಸಮಿತ್ತು,ಉದ್ದುಧಾನ್ಯ, ಚಂಡಾಲಜಾತಿ, ಗೋಮೇಧಿಕ ಮಣಿ, ತಮೋಗುಣ, ನಪುಂಸಕ, ಧೂಮ್ರವರ್ಣ,ಸತುಲೋಹ,ಬೋವಿಕುಲ, ವಾಯುತತ್ವ,ಸಂಕರಜಾತಿ ತುರುಕನಡತೆ,ಸ್ತ್ರೀಜಾತಿ,ಕಪಿಲನೇತ್ರ,ಸಣಕಲಾದ ಉದ್ದವಾದ ಶರೀರ, ದೊಡ್ಡಹಲ್ಲುಗಳು,ಮುಳ್ಳಿನಂತೆ ಕಠಿನವಾದ ವರಟುಕೇಶಗಳು, ವಾತಪ್ರಕೃತಿ, ಸ್ಥಬ್ಧ,ಭಯಂಕರ,ದರಿದ್ರ, ರಾಹುಕಾಲಾಧಿಪತಿ, ಹರಿದವಸ್ತ್ರ ಧರಿಸಿದವ, ಕಹಿರುಚಿ,ಸಾಯಂಕಾಲಾಭಿಮಾನಿ, ನರಗಳಲ್ಲಿವಿಶೇಷ ಬಲವುಳ್ಳವ, ಮುದುಕ.

**ಕೇತು** :–ಮೋಕ್ಷ,ಪಿತಾಮಹಚಿಂತೆ,ವೇದಾಂತದೈವಭಕ್ತಿ,ವೈರಾಗ್ಯ,ತತ್ವಜ್ಞಾನ ಇವುಗಳನ್ನು ಕೊಡುವವ.ಧೂಮ್ರವರ್ಣ,ಚಿತ್ರಗಂಧ, ಚಿತ್ರಪುಷ್ಪ, ಗೃಧ್ರರಥವಾಹನ,ಗದಾಖಡ್ಗ ಆಯುಧಗಳುಳ್ಳ ಎರಡುಭುಜಗಳು, ಮೇರುವನ್ನು ಅಪಸವ್ಯವಾಗಿ ಪ್ರದಕ್ಷಿಣೆ ಮಾಡುವವ,ದಕ್ಶಿಣಾಭಿಮುಖಿ, ಕರಾಳಮುಖಿ, ಸಿಂಹವಾಹನ, ವಿಕಾರವಾದ ಆಕಾರ, ಪೈಠೀನಸ ಗೋತ್ರಜ, ಅಂತರ್ವೇದಿ

ದೇಶಾಧಿಪ,ಪಾರ್ಥಿವಸಂವತ್ಸರ ಫಲ್ಗುಣಶುದ್ಧ ಪೂರ್ಣಿಮಾ ಅಭಿಜಿನ್ ನಕ್ಷತ್ರದಲ್ಲಿ ಜನಿಸಿದವ.ಬುಧವಾರಾಭಿಮಾನಿ, ಸೂರ್ಯಗ್ರಹಕ್ಕೆ ವಯುವ್ಯದಲ್ಲಿ ಧ್ವಜಾಕಾರ ಮಂಡಲದಲ್ಲಿ ವಾಸಮಾಡುವವ,ಅಧಿದೇವತಾಬ್ರಹ್ಮ, ಪ್ರತ್ಯಧಿದೇವತಾಚಿತ್ರಗುಪ್ತ, ಕ್ರೂರಗ್ರಹ, ಕನ್ಯಾಸ್ವಕ್ಷೇತ್ರ, ವೃಶ್ಚಿಕ ಉಚ್ಚ, ಕುಂಭಮೂಲತ್ರಿಕೋಣ, ವೃಷಭ ನೀಚ, ಶುಕ್ರಶನಿ ಮಿತ್ರರು, ರವಿಚಂದ್ರಗುರು ಶತೃಗಳು,ಬುಧಕುಜ ಸಮರು, ೭ ಸಾವಿರಜಪ, ಕುಶ ಸಮಿತ್ತು,ಹುರುಳಿಧಾನ್ಯ, ಮ್ಲೇಚ್ಛಜಾತಿ, ಗೋಮೇಧಿಕಮಣಿ,ತಮೋಗುಣ, ನಪುಂಸಕ,ಧೂಮ್ರವರ್ಣ, ಸೀಸಲೋಹ, ಹಾವುಹಿಡಿಯುವವ, ವಾಯುತತ್ವ, ಬೈರಾಗಿ, ಭಿಕ್ಷುಕ, ಪಕ್ಷಿ ಶಕುನ(ಬುಡುಬುಡಿಕೆ)ನುಡಿಯುವಾತ, ಮಂತತಂತ್ರ ಕ್ರಿಯೆಗಳನ್ನು ಮಾಡುವಾತ,ಸಂಕರಜಾತಿವೈದ್ಯ, ಉಪಕಾರವನ್ನು ಮರೆಯದವ, ತೀರ್ಥಯಾತ್ರಮಾಡುವ ಅಪೇಕ್ಷೆ,ದೈವಿಕ ಬಲವುಳ್ಳವ,ಯೋಗಾಭ್ಯಾಸಿ.

**ಜನನಕಾಲ ನಕ್ಷತ್ರ ಶಾಂತ್ಯಾದಿ ವಿಷಯಗಳು.**

**ಅಶ್ವಿನೀ:–**ಅಶ್ವಿನಿಯಲ್ಲಿ ಎಲ್ಲ ವಿಧವಾದವಾಹನ ಖರೀದಿ, ಊರುಬಿಟ್ಟು ಸ್ಥಲಾಂತರ ಮಾಡುವುದು, ರೋಗಚಿಕಿತ್ಸೆ, ಮಂತ್ರೋಪದೇಶ, ಮನೆ, ಕೆರೆ–ಕಟ್ಟೆ ಕಟ್ಟುವಿಕೆ, ಪುಣ್ಯತೀರ್ಥಯಾತ್ರಾದಿ ಪ್ರಯಾಣ, ಯಜ್ಞದೀಕ್ಷ, ಶಾಂತಿಕರ್ಮಗಳು, ವ್ಯಾಯಾಮ ಮಾಡುವಿಕೆಗೆ ಒಳ್ಳೆಯದು. ಅಶ್ವಿನಿದೇವತೆಗಳು ಅಧಿಪತಿಗಳು,ಪೂಷಾ ಅಧಿದೇವತೆ, ಯಮ ಪ್ರತ್ಯಧಿದೇವತೆ. ಚುಚೇಚೋಲಾ ನಾಲ್ಕು ಅಕ್ಷರಗಳು, ಕುದುರೆತಲೆ ಆಕಾರದ ೩ ನಕ್ಷತ್ರ ಸಮೂಹ, ಕಪ್ಪುಬಣ್ಣ, ದೇವಗಣ, ವೈಶ್ಯಜಾತಿ, ಕ್ಷತ್ರಿಯಬೀಜ, ಆರೋಗ್ಯಕರವಾದ ನಾಲ್ಕುಪಾದಗಳು, ಅಡ್ಡವಾಗಿ ಅಗಲವಾದ ಮುಖ, ಮಂದದೃಷ್ಟಿ, ಕ್ಷಿಪ್ರಸಂಜ್ಞ, ಪಾರ್ಶ್ವನಾಡಿ, ಪಾದರಜ್ಜು, ಮೇಷರಾಶಿ, ಕುಜ ಅಧಿಪತಿ, ವಾಯುಮಂಡಲದಲ್ಲಿ ಪಟ್ಟಣಸ್ಥಾನ ಮುಷ್ಟಿವೃಕ್ಷ, ಬೇರುಂಡಪಕ್ಷಿ, ೫೦ ಘಟಿಯ ನಂತರ ವಿಷಘಟಿ, ೪೨ ಘಟಿಯ ನಂತರ ಅಮೃತಘಟಿ, ಯುದ್ಧ ಮತ್ತು ಪ್ರಯಾಣಕಾಲದಲ್ಲಿ ಉದ್ದುಪದಾರ್ಥವನ್ನು ತಿಂದು ಯಾವ ದಿಕ್ಕಿಗೆ ಹೋದರೂ ಜಯ. ಮಂಗಲವಾರ್ತೆ. ಒಂದನೆಯಪಾದ ಹುಟ್ಟಿದರೆ ತಂದೆಗೆ ಮೂರುತಿಂಗಳು ಅರಿಷ್ಠ, ಶಾಂತಿಗಾಗಿ ಮಹಾನ್ಯಾಸಪೂರ್ವಕ ರುದ್ರಾಭಿಷೇಕ,ನಕ್ಷತ್ರ ದೇವತಾಜಪ , ನವಗ್ರಹಜಪ–ಹೋಮ ಮತ್ತು ಸುವರ್ಣದಾನ ಮಾಡಬೇಕು. ಈ ನಕ್ಷತ್ರದ ೨–೩–೪ ಪಾದಗಳಿಗೆ ಸಮಾನ್ಯದೋಷ. ಅದಕ್ಕಾಗಿ ಶಿಶುವಿನ ಮುಖವನ್ನು ತಂದೆಯು ಮಂತ್ರಸಹಿತವಾಗಿ ತೈಲದಲ್ಲಿ ನೋಡಬೇಕು.

ಈ ನಕ್ಷತ್ರದಲ್ಲಿ ಗಂಡು ಹುಟ್ಟಿದರೆ ೯ದಿನಗಳ ವರೆಗೆ ದೋಷ, ಹೆಣ್ಣುಹುಟ್ಟಿದರೆ ದೋಷವಿಲ್ಲ, ರೋಗಬಂದರೆ ೯ ದಿನಗಳ ಮೇಲೆ ಗುಣವಾಗುವುದು,ಈ ನಕ್ಷತ್ರದಲ್ಲಿ ಭಾನುವಾರ ಅನಾರೋಗ್ಯವಾದರೆ ೧೫ ದಿನಗಳ ಮೇಲೆ ಗುಣವಾಗುವುದು, ಸೋಮವಾರ ೯, ಮಂಗಳವಾರ ೨೧, ಬುಧವಾರ ೧೧, ಗುರುವಾರ ೧೨, ಶುಕ್ರವಾರ ೩, ಶನಿವಾರ ೩೦ ದಿನಗಳ ಮೇಲೆ ಗುಣವಾಗುವುದು, ಈ ನಕ್ಷತ್ರಕ್ಕೆ ಕೈಯಲ್ಲಿ ಕಮಂಡಲು, ಅಮೃತಹಸ್ತ, ಯಮಳಾಕಾರ, ಎರಡುಭುಜಗಳುಳ್ಳ ಸುವರ್ಣಮಯ ಅಶ್ವಿನಿ ದೇವತೆಗಳ ಪ್ರತಿಮೆಯನ್ನು ಮಾಡಿ



ಬಿಳಿವಸ್ತ್ರಾಭರಣಗಳಿಂದ ಅಲಂಕರಿಸಿ, ಷೋಡಶೋಪಚಾರಪೂಜೆ ಮಾಡಿ ಹಾಲು ಅನ್ನ ನೇವೇದ್ಯಮಾಡಿ, **ಏಷ ಉಷಾ** ಎಂಬ ಮಂತ್ರವನ್ನು ೧೨೦೦ ಸಾರಿ ಜಪಿಸಬೇಕು. ಆದಿವಾರ ಅಶ್ವಿನಿ ನಕ್ಷತ್ರ ಬಂದರೆ ನಂದಯೋಗ, ಸೋಮವಾರ ಶುಭಯೋಗ, ಮಂಗಳವಾರ ಅಮೃತಸಿದ್ಧಿಯೋಗ, ಬುಧವಾರ ಮೃತ್ಯುಯೋಗ, ಗುರುವಾರ ಶೂಲಯೋಗ, ಶುಕ್ರವಾರ ಶುಭಯೋಗ, ಶನಿವಾರ ನಿರ್ಜೀವಯೋಗ, ಅಮಾವಾಸ್ಯದಿನ ಅಗ್ನಿ ಯೋಗ, ಸಪ್ತಮಿಯಲ್ಲಿ ದಾನಯೋಗ, ಚಂದ್ರ ಅಶ್ವಿನಿಯಲ್ಲಿದ್ದು ಪೂರ್ವಫಲ್ಗುಣಿಯಲ್ಲಿ ಕ್ರೂರಗ್ರಹರಿದ್ದರೆ ಮಹಾಶೂಲಯೋಗ, ಮಧ್ಯಾಹ್ನ ಕೆಂಪುಮೇಘ ಕಂಡರೆ ಸುವೃಷ್ಟಿಯು, ಚೈತ್ರಮಾಸದಲ್ಲಿ ಈ ನಕ್ಷತ್ರ ಶೂನ್ಯವಾಗುವುದು, ಉತ್ಪಾತವಾದರೆ ವಾಯುಹುಟ್ಟುವುದು, ಪಾಡ್ಯದಲ್ಲಿ ಸಂಕ್ರಮಣ ವಾದರೆ ಧಾನ್ಯಧರ ಮಧ್ಯಮ, ಪ್ರಥಮರಜಸ್ವಲೆಯಾದರೆ ಸೌಭಾಗ್ಯವತಿ, ಸುಪುತ್ರವತಿ ಆಗುವಳು.

ಸ್ತ್ರೀಸಂಭೋಗ, ನಾಮಕರಣ, ಅನ್ನಪ್ರಾಶನ, ಚೌಲ, ಶಿವದೀಕ್ಷ, ಅಕ್ಷರಾಭ್ಯಾಸ, ವೇದಪುರಾಣಾದಿ ಅಧ್ಯಯನಾರಂಭ, ತೈಲಾಭ್ಯಂಜನ, ನವವಸ್ತ್ರಾಭರಣಧಾರಣ, ಛತ್ರಚಾಮರಪಲ್ಲಕಿ, ಹೊಸವಾಹನಾರೋಹಣ, ವಾಸ್ತುಕರ್ಮ, ಚಿತ್ರಲೇಖನ, ಭೂಮಾಪನ, ಬೀಜಬಿತ್ತುವುದು, ತೆಂಗುನೆಡುವುದು, ತೀರ್ಥಯಾತ್ರೆ, ಯುದ್ಧ, ರಾಜದರ್ಶನ ಈ ಕಾರ್ಯಗಳಿಗೆ ಈ ನಕ್ಷತ್ರವು ಪ್ರಶಸ್ತವಾಗಿದೆ. ಅವಳಿ ಹೆಣ್ಣು ಹುಟ್ಟಿದರೆ ತಾಯಿಗೆ ಮೃತ್ಯು, ಅವಳಿ ಗಂಡು ಹುಟ್ಟಿದರೆ ತಂದೆಗೆ ಅರಿಷ್ಟ, ಒಂದುಗಂಡು ಒಂದು ಹೆಣ್ಣು ಹುಟ್ಟಿದರೆ ಶಿಶುಗಳಿಗೆ ಹಾನಿಯು. ಅಶ್ವಿನಿಯ ಮೊದಲಪಾದದಲ್ಲಿ ರೋಗಬಂದರೆ ೯ ದಿನಗಳು ಕ್ರೂರ, ೨ನೆಯ ಪಾದ ೧೧ದಿನಗಳು ಕ್ರೂರಂ, ೩ನೆಯ ಪಾದ ೨೭ದಿನಗಳು ಕ್ರೂರಂ, ೪ನೆಯ ಪಾದ ೨೦ ದಿನಗಳು ಕ್ರೂರ. ಸ್ವರ್ಣದಾನದಿಂದ ದೋಷಪರಿಹಾರ, ಈ ನಕ್ಷತ್ರದಲ್ಲಿ ಹೋದ ವಸ್ತು ದೊರಕುವುದು ಕಷ್ಟ.

ಅಶ್ವಿನಿನಕ್ಷತ್ರದಲ್ಲಿ ಹುಟ್ಟಿದವನು ದೀರ್ಘಭುಜಗಳು, ಅಗಲವಾದ ಕಣ್ಣುಗಳು, ರಾಜಪೂಜಿತನು, ವಾಗ್ಮಿ, ಸುಂದರ, ಸೌಭಗ್ಯಶಾಲಿ, ಮೃದುವಾದ ಉಗುರು, ಸಾಹಸಿ, ವೈದ್ಯ, ಕೆಲವುಸಾರಿ ಕಳ್ಳನು, ಅಚಾರಹೀನ, ಕಲಹದಿಂದ ಅನ್ನತಿನ್ನುವವ, ಕೃಪಾರಹಿತ, ಲೋಭಿ, ಡಾಂಭಿಕ, ಮೋಸ–ಸುಳ್ಳುಗಳನ್ನು ಗುಟ್ಟಾಗಿ ಮಾಡುವವ, ಖಂಡಿತವಾದಿ, ಪರೋಪಕಾರಿ, ಧೈರ್ಯಶಾಲಿ, ಬುದ್ಧಿವಂತ, ಪರೇಂಗಿತಜ್ಞ, ಪಾಪಕಾರ್ಯಾಸಕ್ತ, ಇದ್ದುದರಲ್ಲೆ ದಾನಮಾಡುವವ, ಚಪಲಚಿತ್ತ, ಪರದೇಶವಾಸಿ, ಸೊಂಟದಲ್ಲಿ ಮಚ್ಚೆ ಉಳ್ಳವ, ಕಾರ್ಯಗಳಲ್ಲಿಸ್ಥಿರ ಪ್ರಯತ್ನಶೀಲ, ವಿಚಾರಮಾಡಿ ದೂರದೃಷ್ಟಿಯಿಂದ ಕಾರ್ಯ ಸಾಧಿಸುವಾತ, ಪರಸ್ತ್ರೀವ್ಯಾಮೋಹಿ, ಪರಾಧೀನನಾದಾರೂ ಬಲಿಷ್ಟ, ಧನಿಕ, ಸುಂದರ,ಶೂರ, ಅತಿವಿನಯಿ, ಬುದ್ಧಿವಂತ, ಸಮರ್ಥ, ಕೀರ್ತಿಮಾನ್, ಉತ್ತಮಶರೀರಿ. ಹೆಣ್ಣಾದರೆ ವ್ಯವಹಾರಚತುರೆ, ಬಲವಂತೆ,ಅಹಂಕಾರಿ ಆಗುವಳು. ಮೊದಲ ಪಾದ ತಸ್ಕರಾಂಶ ಕುಜ ಅಧಿಪತಿ, ಕಬ್ಬಿಣ, ಅಗ್ನಿ, ಅಯುಧಗಳ ಚತುರ, ಸಾಹಸಿ, ಚಾಡಿಕೊರ, ಪರವನಿತಾ ಸಕ್ತ. ಎರಡನೆ ಪಾದ ಭೋಕ್ತಾಂಶ ಶುಕ್ರ ಅಧಿಪತಿ. ಧಾರ್ಮಿಕ, ತೇಜಸ್ವಿ, ಧನಧಾನ್ಯ ಸಮೃದ್ಧಿವಂತ. ಮೂರನೆಪಾದ ವಿದ್ಯಾಂಶ ಬುಧ ಅಧಿಪತಿ, ಸ್ವಯ ಸಂಪಾದನೆಯಿಂದ ಜೀವಿಸುವವ,

ಬಹುವಿದ್ಯಾವಂತ, ಭೋಗಿ, ನ್ಯಾಯದಲ್ಲಿ ಜಯವುಳ್ಳವ, ಶೂರ, ನಾಲ್ಕನೇಪಾದ ಧನಾಂಶ, ಚಂದ್ರ ಅಧಿಪತಿ, ದೇವತಾ ಪೂಜಕ, ಧರ್ಮಕಾರ್ಯನಿರತ, ಸ್ತ್ರೀ ವಶೀಕರಣದಲ್ಲಿ, ಪರ ಆಕರ್ಷಣದಲ್ಲಿ ಮುಂದು, ಬಲಿಷ್ಟ ಆಗುವನು.

ಈ ನಕ್ಷತ್ರಕ್ಕೆ ೭ ಸಂವತ್ಸರ ಕೇತುದಶ, ಅಶ್ವಿನಿ ಮೊದಲ ಎರಡು ಘಳಿಗೆಗಳಲ್ಲಿ ಹುಟ್ಟಿದರೆ ಅಭುಕ್ತಗಂಡವು, ಚಂದ್ರನು ಕೂಡಿದ್ದರೆ ಬಾಲಾರಿಷ್ಟ, ಅಶ್ವಿನಿ ನಕ್ಷತ್ರದಲ್ಲಿ ಹುಟ್ಟಿದವರಿಗೆ ೧ನೆ ಸಂವತ್ಸರ ಅಗ್ನಿಚಿಕಿತ್ಸ, ೨ನೆಯ ಸಂವತ್ಸರ ಜ್ವರ, ೪-೫ ನೇತ್ರಬಾಧೆ, ೬ ಹೊಟ್ಟೆನೋವು, ೬-೭ ಧನವ್ಯಯ,೧೦-೨೦ರಲ್ಲಿ ಅಪಮೃತ್ಯು, ೨೪ ಮೃಗಬಾಧೆ, ೪೧ ವ್ಯಾಧಿ, ೬೪ ಮಹಾವ್ಯಾಧಿ, ೮೬ ಸಂವತ್ಸರಗಳು ಪರಮಾಯುಷ್ಯ.

**ಭರಣಿ:**-೧-೨-೪ನೆಯ ಪಾದಗಳಲ್ಲಿ ಹುಟ್ಟಿದವರಿಗೆ ದೋಷವಿಲ್ಲಾ. ೩ನೇಪಾದದಲ್ಲಿಗಂಡುಹುಟ್ಟಿದರೆ ತಂದೆಗೆ ಹೆಣ್ಣು ಹುಟ್ಟಿದರೆ ತಾಯಿಗೆ ಅರಿಷ್ಟ. ಅದಕ್ಕೆ ಮಹಾನ್ಯಾಸಪೂರ್ವಕ ರುದ್ರಾಭಿಷೇಕ, ನಕ್ಷತ್ರ ದೇವತಾಜಪ, ನವಗ್ರಹಜಪ-ಹೋಮ ಮತ್ತು ಸುವರ್ಣದಾನಮಾಡಬೇಕು. ಈ ನಕ್ಷತ್ರದ ೧-೨-೪ ಪಾದಗಳಿಗೆ ಸಮಾನ್ಯದೋಷ. ಶಾಂತಿಗಾಗಿ ಕೂಸಿನ ಮುಖವನ್ನು ತಂದೆಯು ಮಂತ್ರಸಹಿತವಾಗಿ ತೈಲದಲ್ಲಿ ನೋಡಬೇಕು.

ಭರಣಿ ನಕ್ಷತ್ರದಲ್ಲಿ ಯುದ್ಧಾರಂಭ, ಅಯುಧಕರ್ಮ, ಪರರನ್ನು ಸೆರೆ ಹಿಡಿಯುವುದು, ವಿಷ, ಅಗ್ನಿ, ಅಪವಾದ, ಭಯ, ಸಾಹಸಕಾರ್ಯ, ದ್ಯೂತ, ಕೆಟ್ಟಕೆಲಸ, ಕೇಡುಬಗೆಯುವಿಕೆ, ಕಠಿಣವಾಕ್ಕು ಇಂತಹ ಕೆಲಸಗಳು ಸಿದ್ಧಿಸುವವು. ಲಿ ಲು ಲೆ ಲೊ ಅಕ್ಷರ, ತ್ರಿಕೋಣಾಕಾರವುಳ್ಳ ೩ ನಕ್ಷತ್ರಗಳು ಅಡ್ಡವಾಗಿ ಕೆಳಗಿಳಿದಂತೆ ಕಾಣುವವು, ಸ್ತ್ರೀಜಾತಿ, ಮನುಷ್ಯಗಣ, ಅರ್ಧತಾರಾಕಾರ, ನಿರ್ಮಲವಾಗಿ ಇರುವಿಕೆ, ಕ್ರೂರ, ಯಮ ಅಧಿಪತಿ, ಅಗ್ನಿ,ಅಸ್ತ್ರಗಳಂತೆ ಭಯಂಕರವಾಗಿರುವಿಕೆ. ಈ ನಕ್ಷತ್ರದಲ್ಲಿ ದುರ್ಯೋಧನ ಹುಟ್ಟಿದನು. ಆದ್ದರಿಂದ ಅವನ ಗುಣಗಳು ಇಲ್ಲಿ ತೆಗೆದುಕೊಳ್ಳಬಹುದು. ಹಾಗೆ ಯುಧಿಷ್ಟಿರ ಕೂಡ ಈ ನಕ್ಷತ್ರದಲ್ಲಿ ಅವತರಿಸಿದನು, ನೆಲ್ಲಿಮರ, ಕಾಕಪಕ್ಷಿ, ಪಿತೃದೇವತೆ, ಪಿಂಡಭೋಜನ, ಕಲಿಪುರುಷ, ಕೋಣನಮೇಲೆ ಕೂತು, ಪೂರ್ವದಿಕ್ಕು, ಭಯಂಕರಾಕಾರ, ಕರೆಕಂಬಳಿ, ವಿಷ, ಶೂರತೆ. ಈ ನಕ್ಷತ್ರದ ೨೪ನೆ ಘಳಿಗೆಯಿಂದ ಅಮೃತಘಟಿಗಳು ಈಸಮಯದಲ್ಲಿ ಹುಟ್ಟಿದವನು ಯುಧಿಷ್ಟಿರನಂತೆ ಧರ್ಮಾತ್ಮನಾಗುವನು, ೪೮ ನೆಯ ಘಟಿಯಿಂದ ವಿಷಘಟಿಗಳು ಈ ಸಮಯದಲ್ಲಿ ಹುಟ್ಟಿದವನು ದುರ್ಯೋಧನನಂತೆ ದುಷ್ಟನು, ಪೂರ್ವ-ಉತ್ತರ ಪ್ರಯಾಣ ಹೊರಟಾಗ ಅಕ್ಕಿ-ಎಳ್ಳು ತಿಂದು ಹೊರಡುವುದು ಒಳ್ಳೆಯದು, ಚಾಂಡಾಲಜಾತಿ, ಮಧ್ಯಲೋಚನ, ಜ್ವರಬಂದರೆ ೨೧ ದಿನ ಅರಿಷ್ಟ, ಶನಿವಾರ ಅಥವಾ ಮಂಗಳವಾರ ಈ ನಕ್ಷತ್ರ ಇದ್ದದಿನ ಪಾಶ ದಂಡಗಳನು ಧರಿಸಿದ ಕೋಣನಮೇಲೆ ಕುಳಿತ ಯಮಧರ್ಮ ಪ್ರತಿಮೆಮಾಡಿ ಪೂಜಿಸಿ, **ಯಮಾಯ ಸೋಮಂ** ಎಂಬ ಮಂತ್ರವನ್ನು ಒಂದುಸಾವಿರ ಜಪಿಸಿ, ಮತ್ತು ೧೦೮ ಅಹುತಿ ಹೋಮಮಾಡಿ, ಅಕ್ಕಿಎಳ್ಳುಗಳಿಂದ ಮಾಡಿದ ಅನ್ನವನ್ನು ನಿವೇದನಮಾಡಿ, ಗ್ರಾಮದಕ್ಷಿಣಕ್ಕೆ



ಬಲಿ ಹಾಕಬೇಕು, ಎಂಟು ಮಂದಿ ಬ್ರಾಹ್ಮಣರಿಗೆ ಅನ್ನಶಾಂತಿ ಮಾಡಬೇಕು, ಅದರಿಂದ ಮಹಾಶಾಂತಿ ಆಗಿ ಅರಿಷ್ಟವು ಹೋಗಿ ೧೧ ದಿನಗಳಲ್ಲಿ ಸುಖವಾಗುವುದು, ಈ ನಕ್ಷತ್ರದಲ್ಲಿ ಕಾರ್ಯಸಿದ್ಧಿ ಆಗುವುದು ಕಷ್ಟ, ಭರಣಿ ನಕ್ಷತ್ರ ಆದಿವಾರ ಬಂದಾಗ ರೋಗ ಬಂದರೆ ೩೦ದಿನ, ಸೋಮವಾರ ೨೦ದಿನ, ಮಂಗಳವಾರ ಮಹಾಶಾಂತಿಮಾಡಿಸಿದರೆ ೬೦ದಿನಗಳ ನಂತರ, ಬುಧವಾರ ೨೦ ದಿನ, ಗುರುವಾರ ೧೨ ದಿನ, ಶುಕ್ರವಾರ ೨೫ ದಿನ, ಶನಿವಾರ ಮಹಾಶಾಂತಿ ಮಾಡಿಸಿದರೆ ೩ತಿಂಗಳ ನಂತರ ಆರೋಗ್ಯಪ್ರಾಪ್ತಿಯು.

ಈ ನಕ್ಷತ್ರ ಆದಿವಾರ ಬಂದರೆ ರಂದ್ರಯೋಗ, ಸೋಮವಾರ ಗಂಡಯೋಗ, ಮಂಗಳವಾರ ಕರ್ಮಯೋಗ, ಬುಧವಾರ ನಾಶಯೋಗ, ಗುರುವಾರ ಮೃತ್ಯುಯೋಗ, ಶುಕ್ರವಾರ ಶೂಲಯೋಗ, ಶನಿವಾರ ಪೀಡಾಯೋಗ, ಅನುರಾಧನಕ್ಷತ್ರದಲ್ಲಿ ಕ್ರೂರಗ್ರಹರಿದ್ದರೆ ಮಹಾಶೂಲಯೋಗ. ಭರಣಿನಕ್ಷತ್ರ ಇದ್ದಾಗ ಮರಣಉಂಟಾದರೆ ಮತ್ತೆ ಸಂವತ್ಸರದೊಳಗೆ ಮೃತ್ಯು ಒದಗುವುದು. ಪ್ರಥಮರಜಸ್ವಲೆಯಾದರೆ ಪತಿ-ಪುತ್ರಹೀನಳಾಗುವಳು ಅದಕ್ಕೆ ಶಾಂತಿಮಾಡಿಸಿ ೬ತಿಂಗಳು ಸಂಭೋಗವನ್ನು ಬಿಡಬೇಕು. ಮಳೆ ಬಂದರೆ ಒಳ್ಳೆಯ ಧಾನ್ಯಾಭಿವೃದ್ಧಿಯು, ಪುಣ್ಯಕರ್ಮಾಚರಣೆಯಿಂದ ಪಾಪಕ್ಷಯವು.

ಗಂಡಾದರೆ ವಿದ್ಯಾವಂತ, ಆರೋಗ್ಯವಂತ, ಬುದ್ಧಿವಂತ, ಯತಾರ್ಥಮಾತುಗಳು, ದೃಢವ್ರತಿ, ಚಂಚಲ, ಶೌಚಾಚಾರರಹಿತ, ಮೇಹೋಷ್ಣಶರೀರಿ, ಅಹಂಕಾರಿ, ಭೋಗಿ, ಸ್ತ್ರೀಪ್ರಿಯ, ಅನೇಕವಿಧ ಕರಕರ್ಮ ಕುಶಲ, ಉದಾರಿ, ನಿದ್ರಾಪ್ರಿಯ, ವಕ್ರಕೇಶಿ, ಕೆಂಗಣ್ಣುಗಳು, ಹೊಕ್ಕಳಹತ್ತಿರ ಮಚ್ಚೆ ಇರುವವ. ತೊಡೆಯಲ್ಲಿ ನೋವು ಇರುವವನಾಗುವನು. ಹೆಣ್ಣಾದರೆ ವಿಶೇಷಸುಖವಂತೆ, ಹಾಸ್ಯಪ್ರವೃತ್ತಿ, ತಂದೆ-ತಾಯಿಯರನ್ನು ಗೌರವಿಸುವವಳು ಆಗುವಳು.

ಭರಣಿಪ್ರಥಮಪಾದಕ್ಕೆ ರವಿ ಅಧಿಪತಿ ರಾಜಾಂಶ, ಗುಣಶಾಲಿ, ಧೈರ್ಯಸಾಹಸಿ, ಯುದ್ಧ-ವಾದಗಳಲ್ಲಿ ಜಯಿ, ಸತಿ, ಸುತ, ಮಿತ್ರರ ಸುಖವುಳ್ಳವ, ಧನಧಾನ್ಯಾಸಮೃದ್ಧಿಯುಳ್ಳವ. ದ್ವಿತೀಯಪಾಕ್ಕೆ ಬುಧ ಅಧಿಪತಿ, ನಪುಂಸಕನಂತೆ ಪ್ರವರ್ತನ, ಲೋಭಿ, ಮೋಸ, ಸುಳ್ಳುಗಾರ, ಸ್ತ್ರೀ ಜಿತ, ವ್ಯಾಪಾರವ್ಯವಹಾರಗಳಲ್ಲಿ ಚತುರ. ೩ನೆ ಪಾದಕ್ಕೆ ಶುಕ್ರ ಅಧಿಪತಿ ಭಯರಹಿತ, ಉತ್ಸಾಹಿ, ಸಾಹಸಿ, ವಿದ್ಯಾವಂತ. ೪ ನೆ ಪಾದಕ್ಕೆ ಕುಜ ಅಧಿಪತಿ ನಿಷ್ಟುರವಾಕ್ಕು, ದರಿದ್ರ, ಕಷ್ಟಸಹಿಷ್ಣು, ಬಹುಸಂತಾನಿ, ಫಲಿಸುವಾಗ ಕರ್ಮ ಕೆಡಿಸುವಾತ. ಭರಣಿಯಲ್ಲಿ ರಾತ್ರಿ ಹುಟ್ಟಿದರೆ ರಾಜಯೋಗವು, ಹಗಲು ಹುಟ್ಟಿದರೆ ರಾಜಯೋಗಭಂಗವು. ಅಮಾವಾಸ್ಯ ಇದ್ದಾಗ ಹುಟ್ಟಿದರೆ ಭೂಪಾಲಯೋಗವು, ಹುಣ್ಣಿಮೆ ಹುಟ್ಟಿದರೆ ಕೆಟ್ಟಸ್ವಭಾವ ಮತ್ತು ಹೊಟ್ಟೆಬಾಕ ಸ್ವಭಾವ. ಭರಣಿಯ ೧ನೆ ಪಾದದಲ್ಲಿ ರೋಗಬಂದರೆ ೧೧ ದಿನ ಕ್ರೂರ, ೨ನೆ ಪಾದ ೪೧ ದಿನ ಕ್ರೂರ, ೩ ನೆಪಾದ ೭ ದಿನ ಕ್ರೂರ, ೪ ನೆ ಪಾದ ೧೬ದಿನ ಕ್ರೂರ. ನಕ್ಷತ್ರದಲ್ಲಿ ಕೇಳಿದ ಪ್ರಶ್ನೆಗೆ ನಿಧಾನವಾದರೂ ಕೆಲಸವು ಕಷ್ಟಸಾಧ್ಯ. ರೋಗ ಬಂದರೆ ೧೧ ದಿನ ಕ್ರೂರ. ಹೋದ ಪದಾರ್ಥ ನಿಧಾನವಾಗಿ ದೊರೆಯುವುದು.

ಭರಣಿ ನಕ್ಷತ್ರಕ್ಕೆ ೨೦ ಸಂವತ್ಸರ ಶುಕ್ರದಶ ೧ತಿಂಗಳು ೧ಸಂವತ್ಸರದಲ್ಲಿ ಅಪಮೃತ್ಯುವು, ೧೧–೧೨ ಸಂವತ್ಸರದಲ್ಲಿ ಅಗ್ನಿಭಯ, ೨೦ ಸಂವತ್ಸರ ಮಹಾವಿಚಿತ್ರ ರೋಗ, ೨೭ ಸಂವತ್ಸರ ಜಲಗಂಡಮು, ೩೭ ಸಂವತ್ಸರ ಶತ್ರುಭಯ, ೪೮ ಸಂವತ್ಸರ ಜ್ವರಾದಿ ಅಥವಾ ಗುಲ್ಮಾದಿ ರೋಗಬಾಧ, ೫೦ ಸಂವತ್ಸರ ಅಪಮೃತ್ಯುಭಯ, ೭೦ ಸಂವತ್ಸರ ಶತ್ರುಪೀಡಾ–ಗುಲ್ಮರೋಗ, ೭೬ ಸಂವತ್ಸರ ಮೃಗಭಯ, ಇವೆಲ್ಲಾ ದಾಟಿ ಶುಭಗ್ರಹಗಳಿಂದ ಕಂಟಗಳು ಪರಿಹಾರವಾದರೆ ೯೦ ಸಂವತ್ಸರ ಪರಮಾಯುವು.

**ಕೃತ್ತಿಕಾ:–**ಕೃತ್ತಿಕಾ ನಕ್ಷತ್ರವು ಕೆಂಬಣ್ಣದ ಕ್ಷುರಾಕಾರದ ೬ ನಕ್ಷತ್ರಗಳ ಸಮೂಹವು, ಅ,ಇ,ಉ,ಏ ನಾಲ್ಕುಅಕ್ಷರಗಳು, ಸ್ತ್ರೀರೂಪ, ಬ್ರಾಹ್ಮಣಜಾತಿ, ರಾಕ್ಷಸಗಣ, ಕೆಳಮುಖ, ಉತ್ತಮವಾದ ಕಣ್ಣು, ಸಾಧಾರಣಸಂಜ್ಞ, ಅಗ್ನಿ ಅಧಿಪತಿ, ಶೂನ್ಯಸ್ಥಾನ, ತ್ರಿಪಾದಿ, ಬನ್ನಿಮರ, ನವಿಲು, ಮೇಷಯೋನಿ, ಅಂತ್ಯನಾಡಿ, ೧ನೆ ಪಾದ ಕ್ಷತ್ರಿಯ ಮೇಷರಾಶಿ ಕುಜ ಅಧಿಪತಿ, ೨–೩–೪ನೆಯ ಪಾದಗಳು ಶುಕ್ರ ಅಧಿಪತಿ, ವೃಷಭರಾಶಿ, ವೈಶ್ಯಜಾತಿ, ಗರುಡಪಕ್ಷಿ, ವಾರಾಹಿ ದೇವತೆ, ಮರೀಚಿಗೋತ್ರ. ಈ ನಕ್ಷತ್ರದಲ್ಲಿ ಆಧಾನ, ಹೋಮ, ಯಜ್ಞ, ಪಾಕ, ಆಭರಣಗಳು, ಮಂತ್ರ, ಔಷದ, ರಸಾಯನ ಮೊದಲಾದ ಅಗ್ನಿಯಿಂದ ಮಾಡುವ ಕರ್ಮಗಳು ಸಿದ್ದಿಸುವವು. ಅನಿರುದ್ಧನು ಈ ನಕ್ಷತ್ರದಲ್ಲಿ ಅವತರಿಸಿದನು. ೩೦ ಘಟಿ ನಂತರ ವಿಷಘಟಿ ಪ್ರಯಾಣ ಮಾಡಬಾರದು, ೮ ಘಟಿ ಅನಂತರ ಅಮೃತ ಘಟಿ. ಅತ್ಯವಶ್ಯವಾಗಿ ಪ್ರಯಾಣಮಾಡಬೇಕಾಗಿ ಬಂದರೆ ಮೊಸರು ತಿಂದು ಉತ್ತರಕ್ಕೆ ಪ್ರಯಾಣಮಾಡಬಹುದು. ಈ ನಕ್ಷತ್ರದಲ್ಲಿ ಜ್ವರಂ ಬಂದರೆ ಪೈತ್ಯಜ್ವರ, ಆದಿವಾರ ಜ್ವರಂ ಬಂದರೆ ೨೦ ದಿನಕ್ರೂರ, ಸೋಮವಾರ ೧೨, ಮಂಗಳವಾರ ೧೭, ಬುಧವಾರ ೧೬, ಗುರುವಾರ ೨೦, ಶುಕ್ರವಾರ ೧೮, ಶನಿವಾರ ೪೫ ದಿನ ಅರಿಷ್ಟ. ಅದಕ್ಕೆ ಏಳುಭುಜಗಳ ಮೇಷವಾಹನನಾಗಿ ಕೆಂಪುವಸ್ತ್ರಧರಿಸಿದ, ಶಕ್ತ್ಯಾದಿ ಅಯುಧಗಳನ್ನು ಧರಿಸಿದ ಅಗ್ನಿಪ್ರತಿಮೆಯನ್ನು, ಕೆಂಪುಚಂದನಂ, ತುಪ್ಪಅನ್ನ ನೇವೈದ್ಯಮಾಡಿ ಪೂಜೆಮಾಡಿ **ಅಗ್ನಿಂದೂತಂ** ಎಂಬ ಮಂತ್ರದಿಂದ ೧೦೮ ತುಪ್ಪಅನ್ನ ಜೇನುತುಪ್ಪಸಹಿತ ಆಹುತಿ ಹಾಕಿ, ಬೆಲ್ಲಮೊಸರುಕೆಂಪುಕಲಿಸಿದ ಅನ್ನ ಬಲಿ ಹಾಕಬೇಕು. ಹೀಗೆ ಶಾಂತಿ ಮಾಡಿದರೆ ೧೨ ದಿನಗಳಲ್ಲಿ ಶಾಂತಿಯಾಗುವುದು. ಕೆಂದಾಕಳನ್ನು ಉತ್ತಮ ವೇದವೇತ್ತರಿಗೆ ದಾನಕೊಡಬೇಕು. ನಂದಾತಿಥಿಯಲ್ಲಿ ನಿರ್ಜೀವಯೋಗ, ಆದಿವಾರ ಧೂಮ್ರಯೋಗ, ಸೋಮವಾರ ನಾಶಯೋಗ, ಮಂಗಳವಾರ ಯಮಕಂಟಕಯೋಗ, ಬುಧವಾರ ನಷ್ಟಯೋಗ, ಗುರುವಾರ ನಾಶಯೋಗ, ಶುಕ್ರವಾರ ಶೂಲಯೋಗ, ಶನಿವಾರ ಶುಭಯೋಗ, ಈ ನಕ್ಷತ್ರದಲ್ಲಿ ಶನಿವಾರ ಪಂಚಮೀ ಕೂಡಿದರೆ ಮರಣಯೋಗ, ವೈಶಾಖದಲ್ಲಿ ಶೂನ್ಯಯೋಗ, ಉತ್ಪಾತವಾದರೆ ದುರ್ಭಿಕ್ಷ, ಜ್ವರಭಯ. ಪ್ರಥಮರಜೋದರ್ಶನವಾದರೆ ದಾರಿದ್ರ್ಯದುಃಖ, ೩ತಿಂಗಳು ಸಂಭೋಗವರ್ಜ್ಯ. ಇಟ್ಟಿಗೆ ಸುಡುವುದು, ಲೋಹ ಕರಗಿಸುವುದು, ಬಂಗಾರ ಪುಟಹಾಕುವುದು, ಋಣತೀರಿಸುವುದು, ಅಗ್ನಿ ಸಂಬಂಧದ ವಸ್ತುಗಳ ಕೊಳ್ಳುವುದು, ಪಶುಗಳ ಮಾರಾಟ, ಮುಳ್ಳುಮರಗಳ ನೆಡುವಿಕೆ, ಕ್ರೂರಮಂತ್ರ–ಯಂತ್ರ–ತಂತ್ರಜಪಾದಿ ಯಜ್ಞಗಳಿಗೆ ಪ್ರಶಸ್ತ, ನಿಷೇಕ, ಅನ್ನಪ್ರಾಶನ,



ಚೌಲ, ಅಕ್ಷರಾಭ್ಯಾಸ, ವೇದಶಾಸ್ತ್ರಪುರಾಣಗ್ರಂಥಗಳ ಅಭ್ಯಾಸ, ತೈಲಾಭ್ಯಂಗ ಶುಭ. ನವವಸ್ತ್ರ ಆಭರಣ ಅಲಂಕಾರಗಳಿಗೆ ಅರಿಷ್ಟಕರ. ಈ ನಕ್ಷತ್ರದಲ್ಲಿ ಮರಣವಾದರೆ ೩ತಿಂಗಳು ದೋಷ ಅದಕ್ಕೆ ನಕ್ಷತ್ರಶಾಂತಿ ಮಾಡಬೇಕು. ಶನಿ–ಮಂಗಳವಾರಗಳಲ್ಲಿ ಮರಣವಾದರೆ ಸಂವತ್ಸರದೊಳಗೆ ಇನ್ನೊಂದು ಮರಣ ಆಗುವುದು. ಶಾಂತಿ ಮಾಡುವುದರಿಂದ ಶುಭವಾಗುವುದು. ೧–೨–೪ ಪಾದಗಳಲ್ಲಿ ಹುಟ್ಟಿದವರಿಗೆ ದೋಷಇಲ್ಲ. ೩ನೆಯ ಪಾದದಲ್ಲಿ ಗಂಡು ಹುಟ್ಟಿದರೆ ತಂದೆಗೆ, ಹೆಣ್ಣಾದರೆ ತಾಯಿಗೆ ಅರಿಷ್ಟ. ಅದಕ್ಕಾಗಿ ಶಾಂತಿ:–ಮಹಾನ್ಯಾಸಪೂರ್ವಕ ರುದ್ರಾಭಿಷೇಕ, ನಕ್ಷತ್ರ ಅಧಿದೇವತಾ ಯಮ, ದೇವತಾ**ಅಗ್ನಿ**, ಪ್ರತ್ಯಧಿದೇವತಾ ಬ್ರಹ್ಮ. ಜಪ, ನವಗ್ರಹಜಪ–ಹೋಮ ಮತ್ತು ಸುವರ್ಣದಾನ ಮಾಡಬೇಕು. ಈ ನಕ್ಷತ್ರದ ೧–೨–೪ ಪಾದಗಳಿಗೆ ಸಮಾನ್ಯದೋಷ. ಶಾಂತಿಗಾಗಿ ಕೂಸಿನ ಮುಖವನ್ನು ತಂದೆ ಮಂತ್ರಸಹಿತವಾಗಿ ತೈಲದಲ್ಲಿ ನೋಡಬೇಕು.

ಗಂಡಾದರೆ ಗಂಭೀರಸ್ವಭಾವ, ನ್ಯಾಯಪಂಡಿತ,ಪ್ರಜಾಪಾಲಕ, ಸಮರ್ಥ,ಕೀರ್ತಿವಂತ, ಸ್ತ್ರೀಯರಿಗೆ ಪ್ರೀತಿಪಾತ್ರನು, ಭೋಜನಪ್ರಿಯ,ಕೋಪಿ, ಸ್ವಯಾರ್ಜಿತಜೀವಿ, ಬಿಳಿಕೂದಲು, ವಾತರೋಗಿ, ಮಚ್ಚಗಳಿರುವವ. ಹೆಣ್ಣಾದರೆ ಕೀರ್ತಿವಂತೆ,ತೇಜಸ್ವಿನಿ,ಅತಿ ಕೋಪ, ಶ್ಲೇಷ್ಮಶರೀರಿ ಆಗುವಳು.ಕೃತ್ತಿಕಾದಲ್ಲಿ ರೋಗವು ಉಷ್ಣಪೈತ್ಯದಿಂದ ಬರುವುದು, ೧ಪಾದದಲ್ಲಿ ರೋಗ ಬಂದರೆ ೯ ದಿನ ಕ್ರೂರ, ೨ ನೆ ಪಾದದಲ್ಲಿ ೨೨ ದಿನ ಕ್ರೂರ, ೩ನೆ ಪಾದ ೬ ದಿನ ಕ್ರೂರ, ೪ ನೆ ಪಾದ ೭ ದಿನ ಕ್ರೂರ. ಹೋದ ವಸ್ತು ದೊರಕುವುದು ಕಷ್ಟ.

೧ನೆ ಪಾದಕ್ಕೆ ಗುರು ಅಧಿಪುತಿ ಕಾರ್ಯದಕ್ಷಾಂಶ,ಕುಶಲ, ಬಂದುಪ್ರೀಯ ಪರೋಪಕಾರಿ, ತೇಜಸ್ವಿ. ೨ನೆ ಪಾದ ಶನಿ ಅಧಿಪತಿ ಕರ್ಮಕರ್ತ, ಅಸಂಸ್ಕೃತ, ಪುಷ್ಟಶರೀರಿ, ಅಲ್ಪಭಾಷಿ, ಲೋಭಿ, ಸ್ವಜನದ್ವೇಷಿ, ಅಲಂಕಾರವಸ್ತುಪ್ರಿಯ. ೩ನೆ ಪಾದ ಶನಿ ಅಧಿಪತಿ ಕ್ರೂರಾಂಶ, ಕೋಪಿ, ವ್ಯಸನಿ, ದುಷ್ಟಬುದ್ಧಿ, ಮಾರಕ, ಪಾಪಕರ್ಮರತ, ಅಶುಚಿ, ಹಿಂಸಕ. ೪ನೆಪಾದಂ ಗುರುಅಧಿಪತಿ ವಿದ್ಯಾವಂತ,ಬುದ್ಧಿವಂತ, ತೇಜೋವಂತ, ಗುರುದೇವತಾ ಭಕ್ತ, ಹಿರಿಯರನು ಗೌರವಿಸುವವ, ಸದಾಚಾರವಂತ ಆಗುವನು.

ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ೬ಸಂವತ್ಸರ ರವಿದಶ. ೧೮ನೆ ದಿನ, ೩ನೆ ತಿಂಗಳು, ೨ನೆ ಸಂವತ್ಸರಗಳಲ್ಲಿ ವಿಷಜಂತು, ಜ್ವರ, ಶೀತಜ್ವರಭಯ. ೫,೭,೧೨ ನೆ ಸಂವತ್ಸರಗಳಲ್ಲಿ ವಾತಪಿತ್ತಜ್ವರ. ೨೦ ಅಪಮೃತ್ಯುಭಯ, ೬೦ ಶತ್ರುಗಳಿಂದ ಕಷ್ಟ, ೭೦ ನೇತ್ರರೋಗ, ಶಸ್ತ್ರಭಯ ಇದೆಲ್ಲಾ ದೈವ ಕೃಪೆಯಿಂದ ದಾಟಿದರೆ ೮೦ ಸಂವತ್ಸರಗಳು ಪರಮಾಯುಷ್ಯವು, ರುದ್ರೋಪಾಸನ ಅಗ್ನಿ ಉಪಾಸನ, ಯೋಗಸಾಧನೆಗಳನ್ನು ಮಾಡಿದರೆ ಅಮಿತಾಯುವು ಪ್ರಾಪ್ತವಾಗುವುದು.

**ರೋಹಿಣಿ:–** ರೋಹಿಣಿ ನಕ್ಷತ್ರ ಕಪ್ಪುಬಣ್ಣದ್ದು, ದೇವತೆ ಬ್ರಹ್ಮ, ಅಧಿದೇವತೆ ಅಗ್ನಿ, ಪ್ರತ್ಯಧಿದೇವತೆ ಚಂದ್ರ, ಚಕ್ರಾಕಾರದ ೫ ನಕ್ಷತ್ರಗಳು, ಓವವಿವು ನಾಲ್ಕುಅಕ್ಷರಗಳು, ಪುರುಷಾಕೃತಿ, ಊರ್ಧ್ವಮುಖ, ಅಂಧಲೋಚನ, ಇಂದ್ರಮಂಡಲ, ಮಧ್ಯತಾರಾ, ಪಟ್ಟಣವಾಸ, ಸ್ಥಿರಸಂಜ್ಞಕ, ಮನುಷ್ಯಗಣ, ಸರ್ಪಯೋನಿ, ವೃಷಭರಾಶಿ, ಶುಕ್ರಾದಿಪತ್ಯ,

ಕಂಠರಜ್ಜುವು, ವೈಶ್ಯವರ್ಣ, ಅಂತ್ಯನಾಡಿ, ಶೂದರಜಾತಿ, ಮರೀಚಿ ಗೋತ್ರ, ಪೃಥ್ವಿತತ್ವ, ನೈಋುತ್ಯದಿಕ್ಕು, ಸಿದ್ಧಯೋಗಿನಿ, ನೇರಳೆಮರ, ಅತ್ಯರ್ಘತಾರ, ಗರ್ಗರಧ್ವನಿ, ಕುಟಜಪಕ್ಷಿ, ಶ್ರೀಕೃಷ್ಣ ಮತ್ತು ಭೀಮಸೇನರು ಈ ನಕ್ಷತ್ರದಲ್ಲಿ ಅವತರಿಸಿದರು, ೨೪ ಘಟಿ ತರುವಾಯ ವಿಷಘಟಿ, ೧೦ ಘಟಿ ತರುವಾಯ ಅಮೃತಘಟಿ, ರಾಜಾಭಿಷೇಕ, ಪುರಪ್ರವೇಶ, ಹೊಮ, ಶಾಂತಿ, ವಿವಾಹಾದಿ ಶುಭಕಾರ್ಯಗಳು, ನೆಲ್ಲು-ಕಬ್ಬು, ಸಾಸಿವೆ ಬಿತ್ತುವುದು, ಒಳ್ಳೆಯ ವಸ್ತ್ರಾಭರಣಗಳ ಖರೀದಿಗೆ ಒಳ್ಳೆಯದು, ಪರಮಾನ್ನ ತಿಂದು ಪೂರ್ವ ಅಥವಾ ಉತ್ತರದಿಕ್ಕಿಗೆ ಪ್ರಯಾಣದಿಂದ ಕಾರ್ಯಸಿದ್ಧಿ, ಆದಿವಾರ ರೋಹಿಣಿ ಇರಲು ಜ್ವರಬಂದ್ರೆ ೧೦ದಿನ ಕ್ರೂರ, ಸೋಮವಾರ ೭, ಮಂಗಳವಾರ ೧೨, ಬುಧವಾರ ೮, ಗುರುವಾರ ೬, ಶುಕ್ರವಾರ ೧೦, ಶನಿವಾರ ೨೦ದಿನಗಳ ನಂತರ ಆರೋಗ್ಯಪ್ರಾಪ್ತಿಯು. ಈ ನಕ್ಷತ್ರಶಾಂತಿಕ್ರಮ ಕಪ್ಪುಬಣ್ಣದ, ಚತುರ್ಭುಜದ,ಹಂಸವಾಹನದ ಮೇಲೆ ಬ್ರಹ್ಮದೇವಪ್ರತಿಮೆ ನಿರ್ಮಿಸಿ ಕಪ್ಪುಗಂಧ, ಕಮಲ, ಸರ್ಜಧೂಪ, ಹಾಲನ್ನನೈವೇದ್ಯ ಮಾಡಿ <u>**ಬ್ರಹ್ಮಾದೇವಾನಾಂ**</u> ಎಂಬ ಮಂತ್ರದಿಂದ ೧೦೮ ಸಾರಿ ಬಿಳಿಸಾಸಿವೆ ಅಹುತಿಕೊಟ್ಟು, ಗಂಧಹೂವು ಹಾಲನ್ನ ಬಲಿಕೊಟ್ಟರೆ ೭ ದಿನಗಳಲ್ಲಿ ನಯವಾಗುವುದು. ಆದಿವಾರ ಈ ನಕ್ಷತ್ರಬಂದರೆ ಶುಭಯೋಗ, ಸೋಮವಾರ ಸ್ಥಿರಯೋಗ, ಮಂಗಳವಾರ ಮಂದಯೋಗ, ಬುಧವಾರ ಸಿದ್ಧಿಯೋಗ, ಗುರುವಾರ ಮೃತ್ಯುಯೋಗ, ಶುಕ್ರವಾರ ಯಮಘಂಟಯೋಗ, ಶನಿವಾರ ಅಪಮೃತ್ಯುಯೋಗ, ಅಷ್ಟಮೀ ಬುಧವಾರ ಮಹಾಸಿದ್ಧಿ ಯೋಗ, ಷಷ್ಟೀಬುಧವಾರ ಋಣಯೋಗ, ಹುಣ್ಣಿಮೆ ಸೋಮವಾರ ಅಗ್ನಿಯೋಗ, ಏಕಾದಶಿ ವಿಷಯೋಗ, ನಂದಾತಿಥಿ ನಿರ್ಜೀವಯೋಗ, ಚೈತ್ರಮಾಸದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ಸುಭಿಕ್ಷ. ಪ್ರಥಮರಜೋದರ್ಶನವಾದರೆ ಪತಿವ್ರತೆ, ಸುಗುಣಿ ಆಗುವಳು. ಮಳೆಬಂದರೆ ಒಳ್ಳೆಯ ಫಸಲು. ಪುಣ್ಯಕಾರ್ಯ ಮಾಡಿದರೆ ಸಿದ್ಧಿಯು. ಅವಳಿಮಕ್ಕಳು ಹುಟ್ಟಿದರೆ ಮಹಾಶಾಂತಿಮಾಡಬೇಕು. ೧ಪಾದದಲ್ಲಿ ಗಂಡುಹುಟ್ಟಿದರೆ ತಾಯಿಗೆ-ಸೋದರಮಾವನಿಗೆ ಅರಿಷ್ಟ, ೨ನೆಯಪಾದದಲ್ಲಿ ತಂದೆಗೆ-ತಾಯಿಗೆ-ಸೋದರಮಾವನಿಗೆ ಅರಿಷ್ಟ, ೩ನೆಯ ಪಾದದಲ್ಲಿ ಗಂಡುಹುಟ್ಟಿದರೆ ತಾಯಿಗೆ-ಸೋದರಮಾವನಿಗೆ ಅರಿಷ್ಟ, ೪ ಗಂಡುಹುಟ್ಟಿದರೆ ಸೋದರಮಾವನಿಗೆ ಅರಿಷ್ಟ, ಈ ನಕ್ಷತ್ರ ಯಾವ ಪಾದದಲ್ಲಿ ಹುಟ್ಟಿದರೂ ಶಾಂತಿ ಮಹಾನ್ಯಾಸಪೂರ್ವಕ ರುದ್ರಾಭಿಷೇಕ, ನಕ್ಷತ್ರ ದೇವತಾಜಪ, ನವಗ್ರಹಜಪ-ಹೋಮ ಮತ್ತು ಸುವರ್ಣದಾನ ಮಾಡಬೇಕು ಮತ್ತು ಶಿಶುಮುಖವನ್ನು ತಂದೆಯು ಮಂತ್ರಸಹಿತವಾಗಿ ತೈಲದಲ್ಲಿ ನೋಡಬೆಕು.

ಈ ನಕ್ಷತ್ರದಲ್ಲಿ ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ವೇದವ್ರತ, ವಿವಾಹ, ನೂತನವಸ್ತ್ರಧಾರಣ, ಗೃಹಗ್ರಾಮಪ್ರವೇಶನ, ದೇವತಾಪ್ರತಿಷ್ಟ, ಅಗ್ನ್ಯಾಧಾನ, ಹೊಮ, ಶಾಂತಿ, ಪೌಷ್ಟಿಕ, ಧನಧಾನ್ಯಸಂಗ್ರಹ,



ಕೆರೆಕಟ್ಟೆಗಳಸ್ಥಾಪನೆ, ಸಂಗೀತ-ಸಾಹಿತ್ಯ-ಶಿಲ್ಪಕಲಾಕಾರ್ಯಗಳು, ಗೋಕ್ರಯ-ವಿಕ್ರಯ, ಕೃಷಿಸಂಗ್ರಹ, ರತ್ನವಜ್ರಗಳಸಂಗ್ರಹಕ್ಕೆ ಪ್ರಶಸ್ತ.

ಗಂಡಾದರೆ ರೂಪವಂತ, ಸ್ಥಿರಮತಿ,ತೇಜಸ್ವೀ, ರತಿಪ್ರಿಯ, ಭೋಗಿಯಾಗುವನು, ಶುಭವಾದಹಸ್ತ, ವಿಶಾಲಹಣೆ, ಧನಧಾನ್ಯಸಂಗ್ರಹಿ, ನೂತನವಸ್ತ್ರದಲ್ಲಿ ಪ್ರೀತಿ, ಅಲ್ಪಭಯ, ಸ್ತ್ರೀ ಅನುರಾಗಿ. ಹೆಣ್ಣಾದರೆ ಹೆಣ್ಣುಸಂತಾನದವಳು, ಕೀರ್ತಿ-ಪ್ರತಿಷ್ಟವುಳ್ಳವಳು, ದೀರ್ಘಾಯುವು ಆಗುವಳು. ರೋಹಿಣೀ ಮೊದಲಪಾದದಲ್ಲಿ ರೋಗ ಬಂದರೆ ೩ ದಿನಕ್ರೂರ, ೨ನೆ ಪಾದ ೯ , ೩ನೆ ಪಾದ ೧೮, ೪ನೆ ಪಾದ ೩೦ ದಿನಕ್ರೂರ. ಕಳೆದ ವಸ್ತು ಬೇಗಸಿಗುವುದು. ೧ಪಾದ ಕುಜ ಅಧಿಪತಿ ತಸ್ಕರಾಂಶ ಕೆಂಗೂದಲು, ನಿಷ್ಟುರಿ. ೨ ಪಾದ ಶುಕ್ರಾಧಿಪತಿ ಭೋಕ್ತಾಂಶ, ಎತ್ತರವಾದಶರೀರ, ಇಂದ್ರಿಯನಿಗ್ರಹಿ, ಸುಶೀಲ, ಗುರುದೇವತಾ ಭಕ್ತ, ಪಶುಸಂಗ್ರಹಿ. ೩ ಪಾದ ಬುಧಾಧಿಪತಿ ಪಂಡಿತಾಂಶ, ವಿದ್ಯಾವಂತ, ಕವಿ, ಧೈರ್ಯಶಾಲಿ, ಶ್ರೀಮಂತ, ಎಲ್ಲಾ ಶುಭಕಾರ್ಯಗಳಲ್ಲಿ ಪ್ರೀತಿ. ೪ ಪಾದ ಚಂದ್ರ ಅಧಿಪತಿ ಧನಾಂಶ ಬಂಧು ಪ್ರೀತಿ, ಪರೊಪಕಾರಿ, ಬುದ್ಧಿವಂತ, ಪುಣ್ಯಕಾರ್ಯ ನಿರತನು.

ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ೧೦ ಸಂವತ್ಸರ ಚಂದ್ರದಶ, ಹುಟ್ಟಿದ ೧೦ ಘಳಿಗೆಗಳಿಗೆ, ೧೦ ದಿನಗಳಿಗೆ ಮತ್ತು ೧ಸಂವತ್ಸರ ದೊಳಗೆ ಭಯ, ೨-೪-೬-೮ ಸಂವತ್ಸರಗಳಲ್ಲಿ ನೇತ್ರರೋಗ, ೨೭ ಅಪಮೃತ್ಯುಭಯ, ೩೨ ಶತ್ರುಭಯ, ೪೨ ನೀಚಜನಬಾಧೆ, ೫೨ ಅಪಮೃತ್ಯು, ಇವೆಲ್ಲಾ ದಾಟಿದರೆ ೮೦ ಸಂವತ್ಸರಗಳು ಪರಮಾಯುಷ್ಯ.

**ಮೃಗಶಿರ:-**ಮೃಗಶಿರನಕ್ಷತ್ರ ಬಿಳಿಬಣ್ಣದ್ದು, ಜಿಂಕೆತಲೆಯ ಆಕಾರ ೩ನಕ್ಷತ್ರಗಳು. ವೆವೊಕಾಕಿ ನಾಲ್ಕು ಅಕ್ಷರಗಳು, ನಪುಂಸಕ, ದೇವಗಣ, ಅಡ್ಡದೃಷ್ಟಿಯುಳ್ಳ ಮಿಂಚುಗಣ್ಣುಗಳು, ಮಂದಲೋಚನ, ಮೃದು, ವಾಯುಮಂಡಲ, ಪುರವಾಸ, ದ್ವಿಪಾದಿ, ಸರ್ಪಯೋನಿ, ೧-೨ ಪಾದ ವೃಷಭರಾಶಿ ಅಧಿಪತಿ ಶುಕ್ರ, ೩-೪ಪಾದ ಮಿಥುನರಾಶಿ ಅಧಿಪತಿ ಬುಧ. ವೈಶ್ಯಜಾತಿ, ಖದಿರವೃಕ್ಷ, ಓಂಕಾರಸ್ವರ. ೧೪ ಘಟಿ ನಂತರ ವಿಷಘಟಿ, ೩೮ ಘಟಿ ನಂತರ ಅಮೃತಘಟಿ. ವಿವಾಹಾದಿ ಷೋಡಶಕರ್ಮಗಳಿಗೆ ಶುಭ, ಜಪ, ಹೋಮ, ದಾನ, ಯಜ್ಞ, ಕೃಷಿ, ಗೃಹಗ್ರಾಮಪ್ರವೇಶ, ಕ್ಷೌರ ಮೊದಲಾದ ಕರ್ಮಗಳಿಗೆ ಪ್ರಶಸ್ತ. ಜಿಂಕೆ ತಿಂದು ಪೂರ್ವ-ಉತ್ತರದಿಕ್ಕುಗಳಿಗೆ ಪ್ರಯಾಣ ಪ್ರಶಸ್ತ. ಅಧಿಪತಿ ಚಂದ್ರ, ಅಧಿದೇವತೆ ಬ್ರಹ್ಮ, ಪ್ರತ್ಯಧಿದೇವತೆ ರುದ್ರ. ಈ ನಕ್ಷತ್ರದಲ್ಲಿ ರೋಗಬಂದರೆ ಪ್ರಾಣಭಯ ಅಥವಾ ಒಂದುಮಾಸ ಅರಿಷ್ಟ. ಆದಿವಾರ ರೋಗ ಬಂದರೆ ೧೨ ದಿನಗಳು, ಸೋಮವಾರ ೧೬, ಮಂಗಳವಾರ ೩೫, ಬುಧವಾರ ೧೬, ಗುರುವಾರ ೧೨, ಶುಕ್ರವಾರ ೮, ಶನಿವಾರ ೩೦ ದಿನಗಳ ನಂತರ ಆರೋಗ್ಯಪ್ರಾಪ್ತಿಯು. ಶಾಂತಿಕ್ರಮ-ಬಿಳಿಯಬಣ್ಣದ ಹತ್ತುಭುಜಗಳು, ಕುದುರೆ ವಾಹನದಮೇಲೆ ಚಂದ್ರನಿಗೆ ಬಿಳಿವಸ್ತ್ರ,ಬಿಳಿಗಂಧಾದಿಗಳಿಂದ ಪೂಜಿಸಿ

**<u>ಅಪ್ಯಾಯಸ್ವಸಮೇತುತೇ</u>** ಎಂಬ ಮಂತ್ರದಿಂದ ೧೦ಲ ಹಾಲನ್ನವನ್ನು ಆಹುತಿ ಕೊಟ್ಟು ೧೦ಸಾವಿರ ಜಪಿಸಿ, ಹಾಲನ್ನ ಬಲಿಕೊಟ್ಟರೆ ೧ಮಾಸದೊಳಗೆ ನಯವಾಗುವುದು. ಆದಿವಾರ ದಗ್ದಯೋಗ, ಸೋಮವಾರ ಮೃತ್ಯುಯೋಗ, ಮಂಗಳವಾರ ಆನಂದಯೋಗ, ಬುಧವಾರ ಸ್ಥಿರಯೋಗ, ಗುರುವಾರ ನಾಶಯೋಗ, ಶುಕ್ರವಾರ ಅಮೃತಸಿದ್ಧಿಯೋಗ, ಶನಿವಾರ ನಿರ್ಜೀವಯೋಗ, ಉತ್ರಾಷಾಢಾನಕ್ಷತ್ರದಲ್ಲಿ ಪಾಪಿಗಳಿದ್ದರೆ ಮಹಾಶೂಲಯೋಗ, ಉತ್ಪಾತವಾದರೆ ಪಿತ್ತಾದಿಜ್ವರಭಯ, ಕಾರ್ತಿಕಮಾಸದಲ್ಲಿ ಶೂನ್ಯನಕ್ಷತ್ರ, ಪರಿವೇಷಕಂಡರೆ ಸುವೃಷ್ಟಿಯು. ಸಂಕ್ರಮಣವಾದರೆ ಮಧ್ಯವೃಷ್ಟಿ, ಪ್ರಥಮರಜೋದರ್ಶನವಾದರೆ ಧನವತಿ, ಸುಪುತ್ರವತಿ ಆಗುವಳು, ಮಳೆಬಂದರೆ ಸರ್ವಸಸ್ಯವೃದ್ಧಿಯು, ಪುಣ್ಯಕಾರ್ಯಗಳನ್ನು ಪ್ರಾರಂಬಿಸಿದರೆ ಶುಭವಾಗುವುದು. ಈ ನಕ್ಷತ್ರದ ಯಾವ ಪಾದದಲ್ಲಿ ಹುಟ್ಟಿದರೂ ಗಂಡಾದರೆ ತಂದೆಯ ಸೊದರವರ್ಗಕ್ಕೆ ಅರಿಷ್ಟ, ಹೆಣ್ಣಾದರೆ ತಾಯಿಯ ಸೊದರವರ್ಗಕ್ಕೆ ಅರಿಷ್ಟ. ನಿಷೇಕ, ಪುಂಸವನ, ಸೀಮಂತ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ವೇದಶಾಸ್ತ್ರಾಭ್ಯಾಸ, ವೇದವ್ರತಗಳು, ಸಮಾವರ್ತನ, ವಿವಾಹ, ಕ್ಷೌರ, ಅಭ್ಯಂಗ, ಹೊಸವಸ್ತ್ರ, ಮುತ್ತು, ರತ್ನಾಭರಣಗಳು ಧರಿಸಲು, ಪಟ್ಟಾಭಿಷೇಕ, ನೂತನವಾಹನಾರೋಹಣ, ಗೃಹಗ್ರಾಮಪ್ರವೇಶನ, ಕೃಷಿಪ್ರಾರಂಭ, ಬೀಜಬಿತ್ತುವುದು, ಯಾತ್ರ, ಚಿಕಿತ್ಸ, ಶ್ರಾದ್ಧ, ಸಂಗೀತ, ವಾದ್ಯ, ಪ್ರತಿಷ್ಟ, ಗೋಖರೀದಿ, ಜಲಶಿಲ್ಪ, ನೃತ್ಯ, ಸೇವಕ, ಸಕಲಧಾನ್ಯ, ವಜ್ರ, ರತ್ನಗಳ ಸಂಗ್ರಹ, ವಾದವಿವಾದ, ಶಾಂತಿಕರ್ಮಗಳಿಗೆ ಪ್ರಶಸ್ತವಾಗಿದೆ.

ಗಂಡಾದರೆ ಧನಿಕ, ಉತ್ಸಾಹಿ,ದೊಡ್ಡಕಾರ್ಯಗಳನ್ನು ಮಾಡುವಾತ, ವೇದಗಳನ್ನು ತಿಳಿದವ,ಪಾಪಕಾರ್ಯಕ್ಕೆ ಭಯಪಡುವಾತ, ತಾಯಿತಂದಯರಲ್ಲಿ ಭಕ್ತಿ, ಸ್ವತಂತ್ರಜೀವಿ, ದೀರ್ಘಾಯುವು, ಹರವಾದ ಎದೆ, ನಿಷ್ಠುರವಾಕ್ಕು, ದೀರ್ಘಭುಜಗಳು, ಏಕಸಂತಾಗ್ರಾಹಿಯು ಅಗುವನು. ಸ್ತ್ರೀಜನ್ಮಿಸಿದರೆ ಸುಂದರಿ, ಸಂತೋಷಿ, ಗೌರವ–ಪ್ರತಿಷ್ಠೆವುಳ್ಳವಳು, ಧಾರ್ಮಿಕ ಕಾರ್ಯಾಸಕ್ತೆ, ಪುತ್ರಸಂತಾನವುಳ್ಳವಳು ಆಗುವಳು. ಮೃಗಶಿರದಲ್ಲಿ ಶೀತವಾತದಿಂದ ರೋಗ ಬರುತ್ತದೆ. ೧ನೆ ಪಾದದಲ್ಲಿ ರೋಗ ಬಂದರೆ ೩೦ ದಿನಗಳು ಕ್ರೂರ, ೨ ಪಾದ ೧೬ ದಿನಕ್ರೂರ, ೩ಪಾದ ೨೧ದಿನಕ್ರೂರ, ೪ಪಾದ ೨೦ ದಿನಕ್ರೂರ. ಕಳೆದ ವಸ್ತು ೩ದಿನಗಳ ಮೇಲೆ ದೊರಯುವುದು.

೧ಪಾದ ರವಿ ಅಧಿಪತಿ, ಚರಾಂಶ ಸ್ಥೂಲದೇಹ, ಧನಿ, ಶತ್ರುಜಯಿ, ತಂದೆಗೆ ವಿರೋಧಮಾಡುವವ ಆಗುವನು. ೨ಪಾದ ಬುಧಾಧಿಪತಿ, ನಪುಂಸಕಾಂಶ, ಯಜ್ಞಕರ್ಯಾಸಕ್ತಿ, ಜ್ಞಾನಿ, ಬುದ್ಧಿವಂತ, ಭೋಗಿ, ಪುತ್ರ–ಪುತ್ರಿಯರಿಂದ ಕೂಡಿದವ, ಧೀರ, ದೀರ್ಘಾಯುವು ಆಗುವನು. ೩ಪಾದ ಶುಕ್ರಾಧಿಪತಿ, ಅಭಯಾಂಶ, ಉದಾರಿ, ಸುಲಕ್ಷಣಿ, ಮೇಧಾವಿ, ವೇದಶಾಸ್ತ್ರಪುರಾಣಗಳಲ್ಲಿ ಅಭಿರುಚಿ, ಸತ್ಯವಾದಿ, ಗರ್ನಮೆಂಟ್ ಅಧಿಕಾರಿ ಆಗುವನು. ೪ಪಾದ ಕುಜಾಧಿಪತಿ, ದರಿದ್ರಾಂಶ, ಪರದ್ವೇಷಿ, ಕಾಮುಕ, ಅಧಿಕಸಂತತಿವುಳ್ಳವ, ತಲೆಯಲ್ಲಿ ವ್ರಣವುಳ್ಳವ, ಧರ್ಮಕಾರ್ಯಾಸಕ್ತ, ಬಂಧುದ್ವೇಷಿ ಆಗುವನು. ೭ ಸಂವತ್ಸರ ಕುಜದಶ. ತಿಂಗಳಲ್ಲಿ ಗ್ರಹವಿಕಾರ,೩ ನೆಯ ಸಂವತ್ಸರದಲ್ಲಿ ಮೃಗಬಾಧ ಇಲ್ಲವೆ ಕುಕ್ಷಿರೋಗ, ೧೦ ಮಹಾವ್ಯಾಧಿ ಇಲ್ಲವೆ ಸ್ಥಾನಭ್ರಂಶ,



೧೨ ಸರ್ಪಭಯ, ೧೫ ಜಲಭಯ, ೨೯ ಮರ ಇಲ್ಲವೆ ಎತ್ತರದ ಸ್ಥಳದಿಂದ ಬೀಳುವಿಕೆ, ೩೦ ಸ್ಥಾನನಾಶ, ೫೦ ಹೆಂಡತಿಮಕ್ಕಳಿಂದ ತೊಂದರೆ, ೬೦ ಸ್ವಬಂಧುಗಳಿಂದ ಮರಣಾಂತಿಕ ಸಂಕಷ್ಟ, ೬೪ ಸೋದರರಿಂದ ಮರಣಾಂತಿಕ ಸಂಕಷ್ಟ, ಗಂಡಗಳು ತಪ್ಪಿದರೆ ೮೪ ಸಂವತ್ಸರಪರಮಾಯುವು.

**ಆರ್ದ್ರಾ:–**ಈ ನಕ್ಷತ್ರದ ಯಾವ ಪಾದದಲ್ಲಿ ಹುಟ್ಟಿದರೂ ದೋಷವಿಲ್ಲ. ಶುಭವಾಗಿದೆ. ಆರ್ದ್ರಾನಕ್ಷತ್ರ ಕೆಂಬಣ್ಣ ಹವಳದಂತೆ ಮಿನುಗುವ ಒಂದು ನಕ್ಷತ್ರ, ಕೂಘಙಛ ಎಂಬ ನಾಲ್ಕುವರ್ಣಗಳು, ಸ್ತ್ರೀರೂಪ, ಕ್ಷತ್ರಿಯಜಾತಿ, ಮನುಷ್ಯಗಣ, ಆದಿನಾಡಿ, ಮಧ್ಯಲೋಚನ, ಉಗ್ರ, ವರುಣಮಂಡಲ, ಶೂನ್ಯಸ್ಥಾನ, ೪ಪಾದಗಳು, ಶ್ವಾನ ಯೋನಿ. ಯುದ್ಧ, ಕೊಲ್ಲುವುದು, ಅಗ್ನಿಕರ್ಮ, ವೈರಾಗ್ಯ, ಶತ್ರುನಿಗ್ರಹ, ಪಿಶಾಚ ಉಚ್ಚಾಟನ, ಲಂಚ, ಕಳ್ಳತನ, ಜೂಜು, ವಾದವಿವಾದ, ಕಲ್ಲು ಒಡೆಯುವುಕೆ, ಮರ ಕಡಿಯುವುದು, ಇಟ್ಟಿಗೆ ಸುಡುವುದು ಇತ್ಯಾದಿಗಳಿಗೆ ಇದು ಒಳ್ಳೆಯದು. ದಾರುಣ, ಮಧ್ಯದೃಷ್ಟಿ, ಕೆಂಪುತರೆಮರ, ಕ್ರೌಂಚಪಕ್ಷಿ ಸ್ವರ, ರುದ್ರ ದೇವತೆ, ಬ್ರಹ್ಮಾ ಅಧಿದೇವತೆ, ಚಂದ್ರಪ್ರತ್ಯಧಿದೇವತೆ, ಮಿಥುನರಾಶಿ, ಬುಧಾಧಿಪತಿ, ಕಂಠರಜ್ಜು, ಸಂಕರಜಾತಿ, ಅತ್ರಿಗೋತ್ರ, ಪಿಂಗಳಪಕ್ಷಿ, ೨೧ ಘಟಿ ನಂತರ ವಿಷನಾಡಿ, ಪ್ರಯಾಣನಿಷೇಧ, ಈ ನಕ್ಷತ್ರದಲ್ಲಿ ನಕುಲ–ಸಹದೇವರು ಮಾದ್ರಿಯಲ್ಲಿ ಹುಟ್ಟಿದರು. ರೋಗಬಂದರೆ ಪ್ರಾಣಭಯ ೧ಮಾಸ ಅರಿಷ್ಟ, ಪಿತ್ತ–ವಾತ ಅಧಿಕ. ಜಯತಿಥಿಯಲ್ಲಿ ಈ ನಕ್ಷತ್ರ ಬಂದರೆ ನಿರ್ಜೀವಯೋಗ. ಇದಕ್ಕೆ ಶಾಂತಿ–ಬಿಳಿಬಣ್ಣದ, ೩ಕಣ್ಣು, ೨ಭುಜಗಳ, ತ್ರಿಶೂಲಹಿಡಿದಿರುವ ರುದ್ರನನ್ನು ಕಪ್ಪು, ಕೆಂಪುಚಂದನ, ದತ್ತೂರಹೂಗಳಿಂದ ಪೂಜಿಸಿ, **<u>ಕದ್ರುದ್ರಾಯ</u>** ಎಂಬ ಮಂತ್ರದಿಂದ ೧೦ಸಾವಿರ ಜಪೆಸಿ, ಜೇನುತುಪ್ಪ–ತುಪ್ಪಗಳಿಂದ ೧೦ಲ ಅಹುತಿ ಹೋಮಮಾಡಿ ಕೆಂಪನ್ನ ಬಲಿಹಾಕಿ ಬಿಳಿಗೋವನ್ನು ದಾನಮಾಡಬೇಕು. ಆದಿವಾರ ರೋಗಬಂದರೆ ೩೦ ದಿನಗಳು, ಸೋಮವಾರ ೨೦, ಮಂಗಳವಾರ ಮಹಾಶಾಂತಿ ಮಾಡಿಸಿದರೆ ೨ ತಿಂಗಳ ನಂತರ ಗುಣವಾಗುವುದು, ಬುಧವಾರ ೧೫, ಗುರುವಾರ ೧೦, ಶುಕ್ರವಾರ ೧೨, ಶನಿವಾರ ೨೨ ದಿನಗಳ ನಂತರ ಆರೋಗ್ಯಪ್ರಾಪ್ತಿಯು. ಆದಿವಾರ ಮರಣಯೋಗ, ಸೋಮವಾರ ವಿಷಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ಯಮಘಂಟಯೋಗ, ಗುರುವಾರ ರಂಧ್ರಯೋಗ, ಶುಕ್ರವಾರ ಶುಭಯೋಗ, ಶನಿವಾರ ನಾಶಯೋಗ, ಪೂರ್ವಾಷಾಢನಕ್ಷತ್ರದಲ್ಲಿ ಪಾಪರಿದ್ದರೆ ಮಹಾಶೂಲಯೋಗ, ಉತ್ಪಾತದರ್ಶನವಾದರೆ ಧನ–ಧಾನ್ಯಸಮೃದ್ಧಿಯು, ಸಂಕ್ರಮಣವಾದರೆ ಮಧ್ಯಮಧಾನ್ಯ, ಪ್ರಥಮರಜೋದರ್ಶನವಾದರೆ ದುಃಖಿ, ದಾರಿದ್ರ್ಯವತಿ– ಶಾಂತಿ ಮಾಡಿಸಬೇಕು. ಕಾಮನಬಿಲ್ಲು ಕಂಡರೆ ವೃಷ್ಟಿಹಾನಿ, ದ್ರವ್ಯಸಂಗ್ರಹ, ವಿದ್ಯಾರಂಭ, ಕರ್ಣವೇಧನ, ಪಿತೃಪೂಜೆಗೆ ಪ್ರಶಸ್ತ, ಔಷಧಿ ಮಾಡಿದರೆ ಸಾವಕಾಶವಾಗಿ ಸಿದ್ಧಿ, ಚಿಕಿತ್ಸೆ ಪ್ರಾರಂಭಿಸಿದರೆ ಎದುರಾಗುವುದು, ಮಣಿಮಂತ್ರಾದಿಗಳು ಅನರ್ಥಕ, ವಿದ್ಯಾರಂಭದಿಂದ ಮಂದಬುದ್ಧಿ, ಯೋಗಸಾಧನೆಗೆ ಅತ್ಯಾಲಸ್ಯ, ನಿಷೇಕದಿಂದ ಮನೋವೈಕಲ್ಯ, ಅನ್ಯಜನವಾರ್ತೆಯಿಂದ ಸಂಶಯ, ನಿದ್ಯಂಜನೌಷಧಗ್ರಹಣವೂ ಸಂಶಯ, ಮಂತ್ರಜಪಾದಿಗಳಿಗೆ ವಿಘ್ನ, ಕಳ್ಳತನಕ್ಕೂ ನಿಷ್ಫಲ, ನಷ್ಟಪ್ರಶ್ನೆಗೆ ಕಾಲಾಂತರಪ್ರಾಪ್ತಿ. ಆರ್ದ್ರಾ ೧ ಪಾದ ರೋಗಬಂದರೆ ೦ ದಿನಂ ಕ್ರೂರ, ೨ ಪಾದ ೧೫ ದಿನಕ್ರೂರ, ೩ಪಾದ೨೨ದಿನಕ್ರೂರ,

೪ಪಾದ ೧ ದಿನಕ್ರೂರ. ಕಳೆದ ವಸ್ತು ಸಿಗುವುದು. ಗಂಡಾದರೆ ಶೂರ, ವ್ಯವಹಾರಚತುರ,ಉಪಕಾರ ಸ್ಮರಣೆಯಿಲ್ಲದವ, ಕ್ರೂರಕಾರ್ಯಕರ್ತ, ಚಿಂತೆಇಲ್ಲದವ, ಆಚಾರನಿಷ್ಟ, ಕವಿ, ಹಿಂಸ್ರಕ, ಕೃತಘ್ನ, ಅಲ್ಪಶತ್ರುಗಳು, ಸ್ಥಿರಾಯು, ಅಲ್ಪಶ್ರದ್ಧಾಲು, ಕುಶಲ, ಪಾಪಕರ್ಮಿ. ಸ್ತ್ರೀಯಾದರೆ ಕಲಹಪ್ರಿಯಳು, ಪಾಪಕಾರ್ಯ ಮಾಡಲು ಹಿಂಜರಿಯದವಳು ಆಗುವಳು. ೧ಪಾದ ಗುರು ಅಧಿಪತಿ ಕೃಪಾಕರ, ಪ್ರಸನ್ನಮುಖಿ, ಚತುರ, ಸುಗುಣಿ,ವೀರ. ೨ಪಾದ ಶನಿ ಅಧಿಪತಿ ಸಂಸ್ಕಾರಹೀನ, ಅಹಂಕಾರಿ, ಸ್ಪಷ್ಟವಾಕ್ಕು, ಸದಾದುಃಖಿ, ಗುರುದೇವದೂಷಿ, ನಿತ್ಯಭೋಗಪಿಪಾಸು, ಜನದ್ವೇಷಿಯು. ೩ಪಾದ ಶನಿ ಅಧಿಪತಿ ಶೂರಾಂಶ, ಮತಿಹೀನ, ಉಗ್ರ, ಮಲಿನ, ದುರ್ಮಾರ್ಗಿ, ಕ್ರೂರಿ, ಸಾಹಸಪ್ರಿಯ, ಉತ್ತಮವಾದದ್ದು ತಿನ್ನುವವ, ನಿರ್ದಯಿ, ಚಪಲಚಿತ್ತ. ೪ ಪಾದ ಗುರು ಅಧಿಪತಿ ಉತ್ತಮಬುದ್ಧಿ, ಭೋಗೀ, ಗುಣದ್ವೇಷಿ, ಧನಾಢ್ಯ, ವೇದಪಂಡಿತ, ಕರ್ಮಿಷ್ಟ, ಸುಖೀ, ದೀರ್ಘಾಯುಷಿ, ಬಹುಸಂತತಿವುಳ್ಳವ, ಬಂಧುಮಿತ್ರಪ್ರಿಯ, ಸತ್ಯವಾದಿ, ಧರ್ಮಿಷ್ಟ, ತಾಯಿಗೆ ಸುಖವುಂಟುಮಾಡುವವ ಆಗುವನು. ಈ ನಕ್ಷತ್ರದಲ್ಲಿ ಯಾವ ಶುಭಕಾರ್ಯವೂ ಮಾಡಬಾರದು, ಪಿಶಾಚಿ ಬೇಗನೇ ನಿವೃತ್ತಿ ಅಗುವುದು. ಈ ನಕ್ಷತ್ರದಲ್ಲಿ ಜನಿಸಿದವರಿಗೆ ೧೮ ಸಂವತ್ಸರ ರಾಹುದಶಾ. ೫ದಿನಗಳ ವರೆಗೆ ಅಪಮೃತ್ಯುವು, ೭ನೆ ಸಂವತ್ಸರದಲ್ಲಿ ಮಹಾವ್ಯಾಧಿ ಇಲ್ಲವೆ ಶತ್ರುಭಯ, ೧೫ನೆ ಸಂವತ್ಸರದಲ್ಲಿ ಚೋರಾಗ್ನಿಶತ್ರುಭಯಗಳು ಇವೆಲ್ಲ ದಾಟಿದರೆ ೮೭ ಸಂವತ್ಸರ ಪರಮಾಯುವು.

**ಪುನರ್ವಸು:**–ಈ ನಕ್ಷತ್ರದ ಯಾವ ಪಾದದಲ್ಲಿಎಂತಹ ಮಗು ಹುಟ್ಟಿದರೂ ದೋಷವಿಲ್ಲ. ಶುಭವಾಗಿದೆ. ಪುನರ್ವಸು ನಕ್ಷತ್ರವು ಕೃಷ್ಣವರ್ಣ, ೫ ನಕ್ಷತ್ರಗಳ ತಟಾಕಾಕೃತಿಯು, ಕೆಕೊಹಾಹಿ ನಾಲ್ಕುಅಕ್ಷರಗಳು, ಪುರುಷರೂಪ, ದೇವಗಣ, ಚರ, ತಿರಿಗಿನೋಡುವ ಮುಖ, ಸಲೋಚನ, ವಾಯುಮಂಡಲಸಂಚಾರ, ಪಟ್ಟಣಸ್ಥಾನ, ತ್ರಿಪಾದಿ, ಓಂಕಾರಸ್ವರಗಳು, ಬಿದುರು, ಹಂಸಪಕ್ಷಿ, ಅದಿತಿದೇವತಾ, ಪ್ರತ್ಯಧಿದೇವತಾ ಬೃಹಸ್ಪತಿ, ಅಧಿದೇವತಾ ರುದ್ರ. ಬೆಕ್ಕುಯೋನಿ, ಆದಿನಾಡಿ, ಮಾನವಶ್ಯ, ದೇವಗಣ. ೩ಪಾದಗಳು ಮಿಥುನ ಬುಧ ಅಧಿಪತಿ, ಶೂದ್ರವರ್ಣ, ೪ನೆ ಪಾದ ಕರ್ಕಾಟಕ ಚಂದ್ರಾಧಿಪತ್ಯ, ಬ್ರಾಹ್ಮಣವರ್ಣ. ೩೦ ಘಟಿ ನಂತರ ವಿಷನಾಡಿ, ೪೫ ಘಟಿ ನಂತರ ಅಮೃತನಾಡಿ, ಪ್ರಯಾಣಕ್ಕೆ ಹಾಲನ್ನ ತಿಂದು ಹೊರಡುವುದು ಶುಭಕರ. ಪುನರ್ವಸುನಕ್ಷತ್ರದಲ್ಲಿ ಶ್ರೀರಾಮಚಂದ್ರನು ಅವತರಿಸಿದನು. ಆದಿವಾರ ಮಹಾಯೋಗ, ಸೋಮವಾರ ಶುಭಯೋಗ, ಮಂಗಳವಾರ ಮರಣಯೋಗ, ಬುಧವಾರ ನಂದಾತಿಥಿ ಇದ್ದರೆ ನಿರ್ಜೀವಯೋಗ, ಗುರುವಾರ ಸಿದ್ಧಯೋಗ, ಶುಕ್ರವಾರ ನಾಶಯೋಗ, ಶನಿವಾರ ಸಪ್ತಮಿ ಇದ್ದರೆ ಶೂಲಯೋಗ, ಮೂಲಾದಲ್ಲಿ ಪಾಪಿ ಇದ್ದರೆ ಮಹಾಶೂಲಯೋಗ, ಉತ್ಪಾತವಾದರೆ ವಾಯುಭಯ, ಕಾಮನಬಿಲ್ಲು ಕಂಡರೆ ವೃಷ್ಟಿಪ್ರಾರಂಭ, ಸಂಕ್ರಮಣವಾದರೆ ಮಧ್ಯಮ ವೃದ್ಧಿಯು, ಆದಿವಾರ ರೋಗ ಬಂದರೆ ೧೨ದಿನ, ಸೋಮವಾರ ಮಹಾಕಷ್ಟ, ಮಂಗಳವಾರ ೧೬, ಬುಧವಾರ ೯, ಗುರುವಾರ ೫, ಶುಕ್ರವಾರ ೭, ಶನಿವಾರ ೨೧ ದಿನಗಳ ನಂತರ ಗುಣವಾಗುವುದು. ಹಳದಿವಸ್ತ್ರ, ಸ್ಪಟಿಕಮಾಲಾ, ಕಮಂಡಲು ಧರಿಸಿದ ದೇವಗುರುವನ್ನು ಪೂಜಿಸಿ ಬೆಲ್ಲಾನ್ನ



ನೈವೇದ್ಯಮಾಡಬೇಕು. ಅದಿತಿರ್ದ್ಯೌ ಎಂಬಮಂತ್ರ ೧೦ಸಾವಿರ ಜಪ ಮಾಡಿ, ೧೦೮ ಬೆಲ್ಲಾನ್ನಾಹುತಿ ಮತ್ತು ಔದುಂಬರಮರದ ಕೆಳಗೆ ಅರ್ಧರಾತ್ರಿಯಲ್ಲಿ ಬಲಿ ಹಾಕಲು ೭ ದಿನಗಳ ನಂತರ ಗುಣವು. ಈ ನಕ್ಷತ್ರದಲ್ಲಿ ಅವಳಿ ಹುಟ್ಟಿದರೆ ತಾಯಿಗೆ ಅರಿಷ್ಟ, ಗಂಡು ಅವಳಿಯಾದರೆ ತಂದೆಯಸೋದರ–ಸೋದರಿಯರಿಗೆ ಅರಿಷ್ಟ, ಹೆಣ್ಣು ಅವಳಿಯಾದರೆ ತಾಯಿ ಸೋದರ–ಸೋದರಿಯರಿಗೆ ಅರಿಷ್ಟ. ರಜೋದರ್ಶನ, ಪುಂಸವನ, ಸೀಮಂತ, ನಾಮಕರಣ, ಡೋಲಾರೋಹಣ, ಅನ್ನಪ್ರಾಶನ, ಚೌಲ, ಉಪನಯನ, ವೇದವ್ರತಗಳು, ವಿವಾಹ, ಕ್ಷೌರ, ಅಭ್ಯಂಜನ, ಹೊಸಬಟ್ಟೆಧಾರಣ, ಮುತ್ತುಧರಿಸುವಿಕೆ, ಪಟ್ಟಾಭಿಷೇಕ, ನೂತನವಾಹನಾರೋಹಣ, ಗೃಹಗ್ರಾಮಪ್ರವೇಶನ, ಬಿತ್ತುವಿಕೆ, ಸಕಲಧಾನ್ಯ–ಮುತ್ತುಗಳ ಸಂಗ್ರಹ, ಶ್ರಾದ್ಧ, ಪ್ರಯಾಣ, ಸಂಗೀತ, ಶ್ರವಣ, ವಾದ–ವಿವಾದದಿಂದ ಶಾಂತಿ, ಗೋಸಂಗ್ರಹಕ್ಕೆ ಶುಭ. ಗಂಡಾದರೆ ಸುಂದರ, ಪರಸ್ತ್ರೀಯರ ಕಾರ್ಯ ಮಾಡಿ ಪ್ರಶಂಸೆಹೊಂದುವವ, ಶ್ರಮಜೀವಿ, ಅಲ್ಪ ಸಂತೋಷಿ, ಶೀಘ್ರ ಗಾಮಿ, ದೀರ್ಘಾಯು, ವೈಭವಶಾಲಿ, ಬುದ್ಧಿವಂತ, ಗರ್ಗರಧ್ವನಿ, ದೀರ್ಘಾಲೋಚನಿ, ಹೊಟ್ಟೆಯಲ್ಲಿ ಮಚ್ಚೆಉಳ್ಳವ. ಹೆಣ್ಣಾದರೆ ಶಾಂತಸ್ವಭಾವಿ, ಬಂಧು ಪ್ರೀತಿ, ಕ್ಷಮಾಗುಣಿ, ಧರ್ಮಕಾರ್ಯಗಳಲ್ಲಿ ಆಸಕ್ತಳು, ಧನವತಿ ಆಗುವಳು. ಪುನರ್ವಸು ಮೊದಲ ಪಾದದಲ್ಲಿ ರೋಗಬಂದರೆ ೭ ದಿನಕ್ರೂರ, ೨ ನೆ ಪಾದ ೧೪ ದಿನಕ್ರೂರ, ೩ನೆ ಪಾದ ೭ ದಿನಕ್ರೂರ, ೪ ನೆ ಪಾದ ೨೧ ದಿನಕ್ರೂರ. ಕಳೆದವಸ್ತು ದೊರಕುವುದು ಕಷ್ಟ.

೧ನೆ ಪಾದ ಕುಜಾಧಿಪತಿ ತಸ್ಕರಾಂಶ, ವೃದ್ಧಾಚಾರ ವಳ್ಳವ, ಚಂಚಲದೃಷ್ಟಿ, ಅಸ್ಥಿರಬುದ್ಧಿ, ಕ್ರೂರಿ, ಸ್ವಜನದ್ವೇಷಿ. ೨ನೆ ಪಾದ ಶುಕ್ರ ಅಧಿಪತಿ ಭೋಕ್ತಾಂಶ, ಕೀರ್ತಿಶಾಲಿ, ಹಾಸ್ಯಪ್ರಿಯ, ವಿಶಾಲದೃಷ್ಟಿ, ಪರೋಪಕಾರಿ, ಬುದ್ಧಿಶಾಲಿ, ವಾಕ್ಚತುರ, ದೇವಭಕ್ತ. ೩ನೆ ಪಾದ ಬುಧಾಧಿಪತಿ ಮರ್ತ್ಯಾಂಶ, ವಸ್ತ್ರಾಲಂಕಾರಭೋಜನಪ್ರಿಯ, ಕವಿ, ಲೋಭಿ, ಮಂದಬುದ್ಧಿ, ದೀರ್ಘಾಯು, ಕೋಪಿ, ಬಂಧುಪೂಜಿತ. ೪ನೆ ಪಾದ ಚಂದ್ರಾಧಿಪತಿ ಧನಾಂಶ, ತೇಜಸ್ವಿ, ಕೀರ್ತಿಶಾಲಿ, ಸ್ತ್ರೀ ಅನುರಾಗಿ, ಪರೋಪಕಾರಿ, ಪಂಡಿತ, ಮಕ್ಕಳಿಂದ ಸುಖಿ ಆಗುವನು.

ಈನಕ್ಷತ್ರಕ್ಕೆ ಗುರುದಶಾ ೧೬ ಸಂವತ್ಸರಗಳು. ಹುಟ್ಟಿದಾಗ ಉಷ್ಣವಾತಪ್ರಕೃತಿ, ೧ನೆ ಸಂವತ್ಸರದಲ್ಲಿ ಪಕ್ಷಿದೋಷ, ಕುಕ್ಷಿರೋಗ, ೨–೩ ಶೀತವಾತಭಯ, ೬–೭ ನಾನಾವಿಧ ಅನಿಷ್ಟ, ೧೨ ಜಲಭಯ, ೧೬ ಬಂಡೆಯಿಂದ–ಮರದಿಂದ ಬೀಳುವಿಕೆ. ೨೦ ಪ್ರಯಾಣದಲ್ಲಿ ಕಳ್ಳರಿಂದ ಹಾನಿ, ೩೨ ಜಲಗಂಡ, ೩೫ ಕೀರ್ತಿಲಾಭ, ೪೮ ಸ್ವಜನಾರಿಷ್ಟ, ೫೨ ಹೆಂಡತಿಮಕ್ಕಳ ನಾಶ, ೭೦ ದೊಡ್ಡಕಂಟಕ, ದಾಟಿದರೆ ೮೦ ಸಂವತ್ಸರಗಳು ಪರಮಾಯುವು.

**ಪುಷ್ಯ:**–೧ನೆ ಪಾದದಲ್ಲಿ ಎಂತಹ ಶಿಶು ಹುಟ್ಟಿದರೂ ಸೋದರಮಾವನಿಗೆ ಅರಿಷ್ಟ, ೨–೩ನೆ ಪಾದದಲ್ಲಿ ಎಂತಹ ಶಿಶು ಹುಟ್ಟಿದರೂ ತಂದೆ–ತಾಯಿಯರಿಗೆ ಅರಿಷ್ಟ, ೩ತಿಂಗಳು ದೋಷ, ೪ನೆ ಎಂತಹ ಶಿಶು ಹುಟ್ಟಿದರೂ ದೋಷವಿಲ್ಲ. ಅದಕ್ಕೆ ಗೋಮುಖಪ್ರಸವಶಾಂತಿ ಮಹಾನ್ಯಾಸಪೂರ್ವಕ ರುದ್ರಾಭಿಷೇಕ, ನಕ್ಷತ್ರ ದೇವತಾಜಪ, ಧನ್ವಂತರಿ ಜಪ, ಮೃತ್ಯುಂಜಯ

ಜಪ–ನವಗ್ರಹಜಪ–ಹೋಮ ಮತ್ತು ಸುವರ್ಣ ದಾನ–ಗಂಧದಚಕ್ಕೆ ದಾನ ಮಾಡಬೇಕು. ೪ನೆ ಪಾದದಲ್ಲಿ ಶಾಂತಿನಕ್ಷತ್ರಪ್ರಯುಕ್ತ ಸಮಾನ್ಯ ದೋಷ ಇರುವುದು. ಅದಕ್ಕೆ ಶಿಶುಮುಖವನ್ನು ತಂದೆಯು ಮಂತ್ರಸಹಿತವಾಗಿ ಎಣ್ಣೆಯಲ್ಲಿ ನೋಡಬೇಕು. ಪುಷ್ಯನಕ್ಷತ್ರ ಬಿಳಿಬಣ್ಣದ್ದು, ಬಾಣಾಕಾರದ ಮೂರುನಕ್ಷತ್ರಗಳು, ಹುಹೆಹೊಡ ಅಕ್ಷರಗಳು, ಊರ್ಧ್ವಮುಖ, ಅಂಧಲೋಚನ, ಕ್ಷಿಪ್ರ, ಅಗ್ನಿಮಂಡಲ, ಚತುಷ್ಪದ, ಬೃಹಸ್ಪತಿ ದೇವತೆ, ಅಧಿದೇವತೆ ಅದಿತಿ, ಪ್ರತ್ಯಧಿದೇವತೆ ಸರ್ಪರಾಜ, ಅಶ್ವತ್ಥಮರ, ಜಲಕಾಕಪಕ್ಷಿ, ೨೦ ಘಟಿ ನಂತರ ವಿಷನಾಡಿ, ಕರ್ಕಾಟಕರಾಶಿ, ಅಧಿಪತಿ ಚಂದ್ರ, ಊರುರಜ್ಜು, ಬ್ರಾಹ್ಮಣವರ್ಣ, ಮಧ್ಯನಾಡಿ,ಅತ್ರಿಗೋತ್ರ, ಜಲತತ್ವ, ಈಶಾನ್ಯದಿಕ್ಕು, ಇದರಲ್ಲಿ ಪಾಪರು ಕೂಡಿದರೆ ಮಹಾವೇಧ ಆಗುವುದು. ವೇದಶಾಸ್ತ್ರಭ್ಯಾಸ, ಮಂತ್ರಾರಾಧನ, ದೇವತಾರ್ಚನ, ರಾಜಕೀಯಕಾರ್ಯ, ವಿವಿಧಾಲಂಕಾರಗಳಿಗೆ ಯೋಗ್ಯವಾದುದು, ಪರಮಾನ್ನ ತಿಂದು ಎಲ್ಲಾದಿಕ್ಕಗಳಿಗೆ ಪ್ರಯಾಣ ಶುಭ. ಆದಿವಾರ ರೋಗಬಂದರೆ ೧೨ದಿನ, ಸೋಮವಾರ ೬, ಮಂಗಳವಾರ ೧೬, ಬುಧವಾರ ೯, ಗುರುವಾರ ೩, ಶುಕ್ರವಾರ ೧೦, ಶನಿವಾರ ೨೦ ದಿನಗಳ ನಂತರ ಗುಣವಾಗುವುದು. ಶಾಂತಿಗಾಗಿ ಹಳದಿವಸ್ತ್ರ ಧರಿಸಿದ, ನಾಲ್ಕುಭುಜಗಳ ಅಕ್ಷಸೂತ್ರ, ಕಮಂಡಲು, ವರ, ಅಭಯಹಸ್ತಗಳುಳ್ಳ ಬೃಹಸ್ಪತಿಯನ್ನು ಹಳದಿಹೂ, ಖಾದಿರಧೂಪ, ಹುಗ್ಗಿ ನೈವೇದ್ಯದಿಂದ ಪೂಜಿಸಿ ಬೃಹಸ್ಪತೇ ಎಂಬ ಮಂತ್ರದಿಂದ ೧೦೮ ಅಹುತಿಕೊಟ್ಟು, ಹಾಲನ್ನ ಬಲಿಹಾಕಿದರೆ ೭ದಿನಗಳಲ್ಲಿ ಗುಣವಾಗುವುದು. ಆದಿವಾರ ಸಿದ್ಧಿಯೋಗ, ಸೋಮವಾರ ಯಮಘಂಟಯೋಗ, ಮಂಗಳವಾರ ದಗ್ಧಯೋಗ, ಬುಧವಾರ ದೇವಯೋಗ, ಗುರುವಾರ ಅಮೃತಸಿದ್ಧಿಯೋಗ, ಶುಕ್ರವಾರ ನಾಶಯೋಗ, ಶನಿವಾರ ಮೃತ್ಯುಯೋಗ, ನವಮೀತಿಥಿಯಲ್ಲಿ ವಿಷಯೋಗ, ಜ್ಯೇಷ್ಠದಲ್ಲಿ ಪಾಪರಿದ್ದರೆ ಮಹಾಶೂಲಯೋಗ, ವೈಶಾಖದಲ್ಲಿ ಶೂನ್ಯಯೋಗ, ಉತ್ಪಾತವಾದರೆ ವೃಷ್ಟಿಯು, ಸಂಕ್ರಮಣ ವಾದರೆ ಮಧ್ಯಾರ್ಘವು, ಪ್ರಥಮರಜೋದರ್ಶನವಾದರೆ ಸೌಭಾಗ್ಯಶಾಲಿ, ಪುತ್ರವತಿ ಆಗುವಳು, ನಿಷೇಕ, ಪುಂಸವನ, ಸೀಮಂತ, ನಾಮಕರಣ, ಅನ್ನಪ್ರಾಶನ, ಕರ್ಣವೇಧ, ಚೌಲೋಪನಯನಗಳು, ವೇಧಶಾಸ್ತ್ರಾಭ್ಯಾಸ, ತೈಲಾಭ್ಯಂಗ, ಕ್ಷೌರ, ರಾಜ್ಯಾಭಿಷೇಕ, ವಾಹನಾರೋಹಣ, ಗೃಹಗ್ರಾಮಪ್ರವೇಶನ, ಯಜ್ಞದೀಕ್ಷೆ, ಗುರೂಪದೇಶ, ಶಾಂತಿ ಮಹೋತ್ಸವ, ನೃತ್ಯ, ಗೋಕ್ರಯವಿಕ್ರಯ, ಕೃಷಿ, ಬಿತ್ತುವಿಕೆ, ಪ್ರಯಾಣಕ್ಕೆ ಶುಭಕರವಾಗಿದೆ. ೧ನೆ ಪಾದದಲ್ಲಿ ರೋಗಬಂದರೆ ೭ ದಿನಕ್ರೂರ, ೨ನೆ ಪಾದ ೧೪ ದಿನಕ್ರೂರ, ೩ನೆ ಪಾದ ೭ ದಿನಕ್ರೂರ, ೪ನೆ ಪಾದ ೨೧ ದಿನಕ್ರೂರ. ಕಳೆದ ವಸ್ತುವು ಬೇಗನೆ ಸಿಗುವುದು.

ಈ ನಕ್ಷತ್ರದಲ್ಲಿ ಹುಟ್ಟಿದವ ಸುಗುಣಿ, ಬುದ್ಧಿವಂತ, ಶೀಘ್ರಕೋಪಿ, ಹಸ್ತಪಾದಗಳಲ್ಲಿ ಮಚ್ಚೆವುಳ್ಳವ, ಸ್ವಧರ್ಮಕಾರ್ಯನಿರತ, ೧ನೆ ಪಾದ ರವಿ ಅಧಿಪತಿ ಭೂತಾಂಶ, ದೊಡ್ಡಕಣ್ಣುಗಳು, ಪುತ್ರಕರ್ಮಿ, ಶೂಲರೋಗಿ, ಕೆಟ್ಟಸಾಹಸಕಾರ್ಯಾಸಕ್ತ, ಪರದೇಶದಲ್ಲಿ ಧನಿ, ಬಂಧುಪೂಜ್ಯ. ೨ನೆ ಪಾದ ಬುಧ ನಪುಂಕಾಂಶ ದುಃಖಿ, ಪರಧನಾಪೇಕ್ಷಿ, ಚಾಡಿಕೋರ, ಬುದ್ಧಿಶಾಲಿ, ಧ್ಯಾನಾಸಕ್ತ, ಧೈರ್ಯಶಾಲಿ, ೩ನೆ ಪಾದಂ ಶುಕ್ರಾದಿಪತಿ ಚೋರಾಂಶ, ನಗುಮುಖ, ರಸವತ್ತಾಗಿ, ಅರ್ಥಗರ್ಭಿತ



ಮಾತುಗಳು, ಭಾಗ್ಯಶಾಲಿ, ಪುಣ್ಯಕಾರ್ಯಗಳನ್ನು ಮಾಡುವಾತ. ೪ನೆ ಪಾದ ಕುಜಾಧಿಪತಿ ದರಿದ್ರಾಂಶ ಪರವಿತ್ತಾಪಹಾರಿ, ಮೂರ್ಖ, ಜನದ್ವೇಷಿ, ಪರಾಕ್ರಮಿ, ನಿಷ್ಟುರಭಾಷಿ ಆಗುವನು. ಶನಿದಶ ೧೯ ಸಂವತ್ಸರಗಳು ೩ನೆ ಸಂವತ್ಸರದಲ್ಲಿ ವಾತಾದಿಭಯ, ೫ ಅಜೀರ್ಣವಾಯುಪ್ರಕೋಪ, ೮ ಜ್ವರ, ೧೨ ಜಲಗಂಡ, ೧೬ ಶತ್ರುಪೀಡ, ೨೦ ಸೋದರರಿಂದ ನಷ್ಟ, ೬೪ ಅಪಮೃತ್ಯುಭಯ ತಪ್ಪಿದರೆ ೯೦ ಸಂವತ್ಸರ ಪರಮಾಯುವು.

ಆಶ್ಲೇಷಾ:–೧ನೆ ಪಾದದಲ್ಲಿ ಎಂತಹ ಶಿಶುವು ಜನಿಸಿದರೂ ದೋಷವಿಲ್ಲ. ೨ ಪಾದದಲ್ಲಿ ಎಂತಹ ಶಿಶುವು ಜನಿಸಿದರೂ ತಂದೆಗೆ–ಧನಕ್ಕೆ ಅರಿಷ್ಟ. ೩ನೆ ಪಾದದಲ್ಲಿ ಎಂತಹ ಶಿಶುವು ಜನಿಸಿದರೂ ತಾಯಿಗೆ ಅರಿಷ್ಟ. ೪ ಪಾದದಲ್ಲಿ ಎಂತಹ ಶಿಶುವು ಜನಿಸಿದರೂ ತಂದೆಗೆ–ಶಿಶುವಿಗೆ ಅರಿಷ್ಟ. ಅದಕ್ಕೆ ಗೋಮುಖಪ್ರಸವಶಾಂತಿ ಮಹಾನ್ಯಾಸಪೂರ್ವಕ ರುದ್ರಾಭಿಷೇಕ, ನಕ್ಷತ್ರದೇವತಾಜಪ, ಧನ್ವಂತರಿಜಪ, ಮೃತ್ಯುಂಜಯಜಪ–ನವಗ್ರಹಜಪ–ಹೋಮ ಮತ್ತು ಸುವರ್ಣ ದಾನಮಾಡಬೇಕು. ಈ ನಕ್ಷತ್ರದ ೧ನೆ ಪಾದದಲ್ಲಿ ಶಾಂತಿನಕ್ಷತ್ರಪ್ರಯುಕ್ತ ಸಮಾನ್ಯ ದೋಷವಿರುವುದು. ಅದಕ್ಕೆ ಶಿಶುಮುಖವನ್ನು ತಂದೆಯು ಮಂತ್ರಸಹಿತವಾಗಿ ತೈಲದಲ್ಲಿ ನೋಡಬೇಕು. ಆಶ್ಲೇಷಾ ನಕ್ಷತ್ರ ಕೆಂಬಣ್ಣದ್ದು, ಸರ್ಪಾಕಾರವಾಗಿ ಇರುವ ೬ನಕ್ಷತ್ರಗಳು, ಡಿಡುಡೆಡೊ ನಾಲ್ಕು ಅಕ್ಷರಗಳು, ಸ್ತ್ರೀರೂಪ, ಚಾಂಡಾಲಜಾತಿ, ರಾಕ್ಷಸಗಣ, ಅಧೋಮುಖ, ಮಂದಲೋಚನ, ದಾರುಣ, ವರುಣಮಂಡಲ, ಶೂನ್ಯಸ್ಥಾನ, ಮಾರ್ಜಾಲಯೋನಿ, ಚಂದ್ರಾಧಿಪತ್ಯ, ಕರ್ಕಾಟಕರಾಶಿ, ಪಾದರಜ್ಜು, ಬ್ರಾಹ್ಮಣವರ್ಣ, ಅಂತ್ಯನಾಡಿ, ವೈಶ್ಯಜಾತಿ, ವಸಿಷ್ಟಗೋತ್ರ, ಟಿಟ್ಟಿಭಪಕ್ಷಿ, ಜಲತತ್ವ, ಯೋಗಿನಿ ಬ್ರಾಹ್ಮೀ, ದೇವತೆ ಸರ್ಪರಾಜ, ಅಧಿದೇವತೆಗಳು ಪಿತೃಗಳು, ಪ್ರತ್ಯಧಿದೇವತೆ ದೇವಗುರು. ೩೨ ಘಟಿ ನಂತರ ವಿಷನಾಡಿ, ೫೬ ಘಟಿ ನಂತರ ಅಮೃತನಾಡಿ. ಪರಮಾನ್ನ ತಿಂದು ಪೂರ್ವ ಅಥವಾ ಉತ್ತರಕ್ಕೆ ಪ್ರಯಾಣ ಶುಭ. ಪ್ರಥಮರಜೋದರ್ಶನದಿಂದ ಪತಿಗೆ ಆಪತ್ತು, ಅಸೌಭ್ಯಾಗ್ಯ. ಗಂಡು ಹುಟ್ಟಿದರೆ ತಾಯಿಗೆ ಅರಿಷ್ಟ, ಅವಳಿ ಹೆಣ್ಣು ಹುಟ್ಟಿದರೆ ಇಬ್ಬರಿಗೂ ಅಪಮೃತ್ಯು. ಅವಳಿಗಂಡು ಜನಿಸಿದರೆ ತಂದೆಗೆ ಅರಿಷ್ಟ, ನಕ್ಷತ್ರಾಂತ್ಯವು ಅತ್ಯಂತಕ್ರೂರವಾದದ್ದು. ಉತ್ಪಾತ ದರ್ಶನವಾದರೆ ಕೃಷಿ–ಹೈನು ಚೆನ್ನಾಗಿ ಅಭಿವೃದ್ಧಿಹೊಂದಿದರೂ ಪ್ರಜರಿಗೆ ನಾನಾ ಉಪದ್ರವಗಳು ಉಂಟಾಗುವವು. ಮಧ್ಯಾಹ್ನದಲ್ಲಿ ಕೆಂಪುಮೇಘ ಕಂಡರೆ ಸಾಧಾರಣವೃಷ್ಟಿಯು, ಸಂಕ್ರಮಣವಾದರೆ ಮಧ್ಯಾರ್ಘವು, ಈ ನಕ್ಷತ್ರದಲ್ಲಿ ರೋಗಬಂದರೆ ಪ್ರಾಣಭಯ. ಆದಿವಾರ ರೋಗ ಬಂದರೆ ೨೫ ದಿನಗಳು, ಸೋಮವಾರ ೧೦, ಮಂಗಳವಾರ ೨೭, ಬುಧವಾರ ೧೨, ಗುರುವಾರ ೧೬, ಶುಕ್ರವಾರ ೧೮, ಶನಿವಾರ ೩೦ ದಿನಗಳ ನಂತರ ಗುಣವಾಗುವುದು. ಶಾಂತಿಗೆ– ಕೆಮ್ಮಣ್ಣಿನಿಂದ ಕುಂಡಲಾಕೃತಿಯಾದ ಸರ್ಪರಾಜನನ್ನು ಮಾಡಿ ಗುಲಾಬಿಬಣ್ಣದ ವಸ್ತ್ರ, ಅಗಸಿಹೂಗಳಿಂದ ಪೂಜಿಸಿ ಪರಮಾನ್ನವನ್ನು ನೈವೇದ್ಯಮಾಡಿ, ನಮೋಸ್ತು ಸರ್ಪೇಭ್ಯೋ ಎಂಬ ಮಂತ್ರದಿಂದ ೧೦೮ ಅಹುತಿ ಕೊಟ್ಟು ಗಂಧ,ಹೂವು, ಹಿಟ್ಟು,ತುಪ್ಪ,ಹಾಲುಗಳಿಂದ ಪೂರ್ವದಿಕ್ಕಿಗೆ ಬಲಿ ಇಟ್ಟರೆ ಒಂದು ತಿಂಗಳ ನಂತರ ಗುಣವಾಗುವುದು. ಆದಿವಾರ ನಂದಯೋಗ, ಸೋಮವಾರ ವಿಷಯೋಗ,

ಮಂಗಳವಾರ ನಂದಾತಿಥಿ ಬಂದರೆ ಮರಣಯೋಗ, ಬುಧವಾರ ಯಮಘಂಟಯೋಗ, ಗುರುವಾರ ಅಮೃತಾರ್ಣಯೋಗ, ಶುಕ್ರವಾರಂ ಕ್ಷೀಣಯೋಗ, ಶನಿವಾರ ಮೃತ್ಯುಯೋಗ, ಧನಿಷ್ಟದಲ್ಲಿ ಕುಜ ಇದ್ದರೆ ಮಹಾಶೂಲಯೋಗ, ಆಶ್ವೀಜದಲ್ಲಿ ಶೂನ್ಯನಕ್ಷತ್ರ, ಈ ನಕ್ಷತ್ರ ಇರುವ ದಿನ ಮೇಷಲಗ್ನದಲ್ಲಿ ಮೇಘೋದಯವಾದರೆ ೭ ದಿನಗಳು ವೃಷ್ಟಿಯು. ಆಶ್ಲೇಷಾ ೧ನೆ ಪಾದದಲ್ಲಿ ರೋಗಬಂದರೆ ೦ ದಿನ ಕ್ರೂರ, ೨ನೆ ಪಾದ ಅಸಾಧ್ಯವು, ೩ನೆ ಪಾದ ೦ ದಿನಕ್ರೂರ, ೪ನೆ ಪಾದ ಅಸಾಧ್ಯವು. ಕಳೆದ ವಸ್ತು ದೊರಕುವುದು ಕಷ್ಟ. ಅಶ್ಲೇಷಾ ನಕ್ಷತ್ರದಲ್ಲಿ ಜನಿಸಿದವನು ದುಷ್ಟಸ್ವಭಾವಿ, ವಿಶಾಲನೇತ್ರಗಳಲ್ಲಿ ಮಚ್ಚೆಉಳ್ಳವ, ಸದಾದುಃಖಿ, ಪರೋಪಕಾರಿ, ಹಿತಶತೃಗಳು, ಲೋಭಿಯು. ೧ನೆ ಪಾದ ಗುರುಅಧಿಪತಿ ಉತ್ಕೃಷ್ಟಾಂಶ, ಸಮಸ್ತವಿದ್ಯೆಗಳನ್ನು ಬಲ್ಲವ, ಧೈರ್ಯ–ಬುದ್ಧಿವಂತ, ವಾಕ್ಚಾತುರಿ, ಸ್ವತಂತ್ರಜೀವಿ, ಅಧಿಕಾರಿ. ೨ನೆ ಪಾದ ಶನಿ ಅಧಿಪತಿ ಶಿಥಿಲಾಂಶ, ಮಂದಬುದ್ಧಿ, ಪಾಪಕಾರ್ಯಾಸಕ್ತಿ, ಚಪಲಚಿತ್ತ, ಉಷ್ಣಪ್ರಕೃತಿಯವ. ೩ನೆ ಪಾದ ಶನಿ ಅಧಿಪತಿ ಉಗ್ರಾಂಶ, ನೀಚಬುದ್ಧಿ, ಅನೇಕಭಾಷಾಪ್ರವೀಣ, ಅಲಸಿ, ಸೇವಕ, ಮಂದಬುದ್ಧಿ, ವಾತರೋಗಿ. ೪ನೆ ಪಾದ ಗುರು ಅಧಿಪತಿ, ಪಂಡಿತಾಂಶ, ಜ್ಞಾನಿ, ಮೃದುಭಾಷಿ, ಶತ್ರುರಹಿತ, ಎಲ್ಲರಿಂದ ಸಮ್ಮಾನಿತ, ಸ್ತ್ರೀಯರಿಗೆ ಪ್ರಿಯ. ೧೭ ಸಂವತ್ಸರಗಳು ಬುಧದಶ. ೧ನೆ ಸಂವತ್ಸರದಲ್ಲಿ ಚತುಷ್ಪಾದಗಂಡ, ೫ ಅಪಮೃತ್ಯು, ೮–೧೧ ಕ್ಲೇಶ, ೨೫–೨೭ ಅಪಮೃತ್ಯು, ೩೦ ದೇಶಪ್ರವಾಸ, ೫೨ ಮರಣಸಮಾನ ಕಷ್ಟ, ಇವೆಲ್ಲ ದಾಟಿದರೆ ೯೬ ಸಂವತ್ಸಗಳು ಪರಮಾಯುವು.

**ಮಘಾ:**–೧ನೆ ಪಾದದಲ್ಲಿ ಗಂಡು ಹುಟ್ಟಿದರೆ ಶಿಶುವಿಗೆ–ತಂದೆಗೆ ಹೆಣ್ಣಾದರೆ ತಾಯಿಗೆ ಅರಿಷ್ಟ. ಅವಳಿ ಜನಿಸಿದರೆ ಇಬ್ಬರಿಗೆ ಅರಿಷ್ಟ, ೨ ನೆ ಪಾದದಲ್ಲಿ ಜನಿಸಿದವರಿಗೆ ದೋಷವಿಲ್ಲ. ೩ನೆ ಪಾದದಲ್ಲಿ ಗಂಡು ಜನಿಸಿದರೆ ತಂದೆಗೆ, ಹೆಣ್ಣಾದರೆ ತಾಯಿಗೆ ಅರಿಷ್ಟ. ೪ನೆ ಪಾದದಲ್ಲಿ ಜನಿಸಿದವರಿಗೆ ದೋಷವಿಲ್ಲ. ೧–೩ ಪಾದದಲ್ಲಿ ಜನಿಸಿದವರಿಗೆ ಗೋಮುಖ ಪ್ರಸವಶಾಂತಿ, ಏಕಾದಶವಾರ ರುದ್ರಾಭಿಷೇಕ, ಧನ್ವಂತರಿ ಜಪ, ಮೃತ್ಯುಂಜಯಜಪ, ನಕ್ಷತ್ರಜಪ,ನವಗ್ರಹ ಜಪಹೋಮ–ಸುವರ್ಣದಾನಗಳನ್ನು ಮಾಡಿದರೆ ಅರಿಷ್ಟ ಶಮನ. ಮಿಗಿಲಿನ ೨–೪ ಪಾದಗಳಿಗೆ ನಕ್ಷತ್ರದ ಸಾಮಾನ್ಯದೋಷ ಕಾರಣ ತೈಲದಲ್ಲಿ ಶಿಶುಮುಖದರ್ಶನಮಾಡಿದರೆ ಶುಭವಾಗುವುದು. ಮಘಾ ನಕ್ಷತ್ರ ಕಪ್ಪುಬಣ್ಣದ್ದು, ಪಲ್ಲಕಿಬೊಂಬಿನ ಆಕಾರವುಳ್ಳ ೫ ನಕ್ಷತ್ರಗಳು, ಮಮಿಮುಮೆ ನಾಲ್ಕು ಅಕ್ಷರಗಳು, ಪುರುಷರೂಪ, ಶೂದ್ರಜಾತಿ, ರಾಕ್ಷಸಗಣ, ಅಧೋಮುಖ, ಮಧ್ಯಲೋಚನ, ದಾರುಣ, ಮೂಷಕಯೋನಿ, ಸೂರ್ಯಾಧಿಪತ್ಯ ಸಿಂಹರಾಶಿ, ಕ್ಷತ್ರಿಯವರ್ಣ, ಅಂತ್ಯನಾಡಿ, ಅತ್ರಿಗೋತ್ರ, ಪಿಂಗಳಪಕ್ಷಿ, ಅಗ್ನಿತತ್ವ, ಯೋಗಿನಿ ಕುಮಾರಿ, ಧೂಮ್ರಾಯ, ಅಗ್ನಿಮಂಡಲ, ಪಟ್ಟಣಸ್ಥಾನ, ದೇವತಾ ಪಿತೃಗಳು, ಅಧಿದೇವತೆ ಭಗ, ಪ್ರತ್ಯಧಿದೇವತೆ ಸರ್ಪರಾಜ. ೨೦ಘಟಿ ನಂತರ ವಿಷನಾಡಿ, ೫೦ ಘಟಿ ನಂತರ ಅಮೃತನಾಡಿ. ಎಳ್ಳು ತಿಂದು ಪಶ್ಚಿಮ ಇಲ್ಲವೆ ದಕ್ಷಿಣಕ್ಕೆ ಪ್ರಯಾಣ ಶುಭಕರ. ಈ ನಕ್ಷತ್ರದಲ್ಲಿ ಯಮಧರ್ಮರಾಜನು ಅವತರಿಸಿದನು. ಪ್ರಥಮರಜೋದರ್ಶನವು ೧ಪಾದ ಶುಭ, ೨ ಪುತ್ರಗಂಡ, ೩ ದಾರಿದ್ರ್ಯ, ೪ ಪತಿಗೆ ಗಂಡ.



ಸರ್ವಮಂತ್ರಪ್ರಯೋಗ,ವೈದ್ಯಕ, ದ್ಯೂತಾರಂಭ, ಹವ್ಯ–ಕವ್ಯಾದಿ ಮಾಡಲು ಶುಭ. ಈ ನಕ್ಷತ್ರದಲ್ಲಿ ರೋಗಬಂದರೆ ಪ್ರಾಣಭಯ ೪೦ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೨೦ ದಿನಗಳು, ಸೋಮವಾರ ೧೬, ಮಂಗಳವಾರ ೨೦, ಬುಧವಾರ ೧೪, ಗುರುವಾರ ೧೪, ಶುಕ್ರವಾರ ೧೮, ಶನಿವಾರ ೩೦ ದಿನಗಳ ನಂತರ ಗುಣವಾಗುವುದು. ಶಾಂತಿಗೆ– ಕಪ್ಪುಮಣ್ಣಿನಿಂದ ನಾಲ್ಕುಭುಜಗಳಲ್ಲಿ ಜಪಮಾಲೆ, ಕಮಂಡಲು, ಅಭಯ, ವರದಹಸ್ತವುಳ್ಳ ಪಿತೃಪ್ರತಿಮೆಯನ್ನು ಮಾಡಿ ಕಪ್ಪುವಸ್ತ್ರ, ಸಂಪಿಗೆಹೂಗಳಿಂದ ಪೂಜಿಸಿ ಪರಮಾನ್ನವನ್ನು ನೈವೇದ್ಯಮಾಡಿ ಉದೀತಾಮರ ಎಂಬ ಮಂತ್ರದಿಂದ ೧೦೮ ಎಳ್ಳುಅಕ್ಕಿತುಪ್ಪಗಳ ಅಹುತಿ ಕೊಟ್ಟು ಗಂಧ,ಹೂಗಳು, ತುಪ್ಪ,ಎಳ್ಳು ಅನ್ನಗಳನ್ನು ದಕ್ಷಿಣದಿಕ್ಕಿಗೆ ಬಲಿ ಕೊಟ್ಟು ಕಪ್ಪುಗೋವನ್ನು ದಾನಕೊಟ್ಟರೆ ಒಂದು ತಿಂಗಳಾದಮೇಲೆ ಗುಣವಾಗುವುದು. ಆದಿವಾರ ದಗ್ಧಯೋಗ, ಸೋಮವಾರ ಮೃತ್ಯುಯೋಗ, ಮಂಗಳವಾರ ಶುಭಯೋಗ, ಬುಧವಾರ ವರಯೋಗ, ಗುರುವಾರ ಸಿದ್ಧಿಯೋಗ, ಶುಕ್ರವಾರ ರೌದ್ರಯೋಗ, ಶನಿವಾರ ವಿಷಯೋಗ, ರಿಕ್ತತಿಥಿ ಇದ್ದರೆ ನಿರ್ಜೀವಯೋಗ, ಶ್ರವಣದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಕಾರ್ತಿಕದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ದುರ್ಭಿಕ್ಷವು, ಅಗ್ನಿಭಯ. ಸಂಕ್ರಮಣವಾದರೆ ಮಧ್ಯಾರ್ಘವು, ವಿವಾಹಾದಿಗಳು, ಸರ್ವಮಂತ್ರಪಯೋಗಗಳು, ದಾಸ್ಯ, ಕ್ರಯವಿಕ್ರಯ, ಬಿತ್ತುವಿಕೆ, ನಿಧಿನಿಕ್ಷೇಪಗಳು, ಅಂಜನ, ಭಾವಿ, ಬೋರು, ಕೆರೆ ಕಟ್ಟುವುದಕ್ಕೆ ಪ್ರಾರಂಬಿಸುವಿಕೆ, ಪಿತೃಕರ್ಮಮೊದಲಾದವುಗಳಿಗೆ ಶುಭ. ಗಂಡಾದರೆ ವಿದ್ಯಾ,ವಿನಯ,ಗಾಂಭೀರ್ಯ, ದೀರ್ಘಾಯುವು, ತಾಯಿ_ತಂದೆಗಳ ಭಕ್ತ, ಸುಗುಣಿ, ಶತ್ರುಗಳನ್ನು ವಶಮಾಡಿಕೊಳ್ಳುವವ, ಶೀಘ್ರಕೋಪಿ, ಕೆಂಗಣ್ಣುಗಳು, ಹೃದಯದಲ್ಲಿ ಮಚ್ಚೆ ಇರುವವ, ಕ್ರೂರಿ, ತೇಜಸ್ವಿ, ವಾದದಲ್ಲಿ ಸಮರ್ಥ. ಹೆಣ್ಣಾದರೆ ಗೌರವಾನ್ವಿತೆ,ಧನವತಿ, ಗುರುದೇವತಾಭಕ್ತೆ, ಸುಖಿ ಆಗುವಳು.ಮಘಾ ಮೊದಲಪಾದದಲ್ಲಿ ರೋಗಬಂದರೆ ೨೦ ದಿನಗಳು ಕ್ರೂರ, ೨ನೆ ಪಾದ ೭ , ೩ನೆ ಪಾದಂ ೪೬, ೪ನೆ ಪಾದ ೧೮. ಕಳೆದ ವಸ್ತು ಸ್ವಸ್ಥಾನದಲ್ಲಿ ಇರುತ್ತದೆ.

೧ನೆ ಪಾದ ಕುಜ ಅಧಿಪತಿ ತಸ್ಕರಾಂಶ, ಅನ್ಯಾಯಿ, ಏಕಾಂಗಿ, ಕಿವಿಪೋಟುಳ್ಳವ, ಕಲಹದಲ್ಲಿ ಜಯಿ. ೨ನೆ ಪಾದ ಶುಕ್ರ ಅಧಿಪತಿ ಧನಾಂಶ, ಧನವಂತ, ದೀರ್ಘಾಯುವು, ಚತುರ, ನಿಪುಣ, ಬಹುಸಂತಾನಿ, ಉತ್ತಮವಾಗಿ ವ್ಯಾಸಂಗಮಾಡುವವ. ೩ನೆ ಪಾದ ಬುಧ ಅಧಿಪತಿ ಪಂಡಿತಾಂಶ, ಜ್ಞಾನಿ, ಸತ್ಯವಾದಿ, ವೇದಶಾಸ್ತ್ರಗಳ ಜ್ಞಾನವುಳ್ಳವ, ದೀರ್ಘಾಯುವು. ೪ನೆ ಪಾದ ಚಂದ್ರ ಅಧಿಪತಿ, ಅದ್ರಾರ್ಂಶ, ಸ್ತ್ರೀಯರಿಂದ ಜೀವಿಸುವವ, ದುಷ್ಟ,ರೋಗಿ, ಗುರುದೇವತಾಕಾರ್ಯ ನಿರತ. ೭ಸಂವತ್ಸರಗಳು ಕೇತುದಶ. ೧೨ನೆ ಸಂವತ್ಸರದಲ್ಲಿ ಆಯುಧಭಯ, ೩೩ ಜಠರಾಗ್ನಿಭಯ, ೬೦ ವಿಷಭಯ, ೮೦ ಜ್ವರಭಯ ಇವೆಲ್ಲಾ ದಾಟಿದರೆ ೯೧ ಸಂವತ್ಸಗಳು ಪರಮಾಯುವು.

**ಪೂರ್ವಫಲ್ಗುಣೀ:**–ಈ ನಕ್ಷತ್ರದ ಯಾವ ಪಾದದಲ್ಲಿ ಎಂತಹಮಗು ಹುಟ್ಟಿದರೂ ಸಾಮಾನ್ಯದೋಷಪ್ರಯುಕ್ತ ತೈಲದಲ್ಲಿ ಶಿಶುಮುಖದರ್ಶನಮಾಡಿದರೆ ಶುಭವಾಗುವುದು. ಪುಬ್ಬಾ(ಪೂರ್ವಫಲ್ಗುನಿ) ನಕ್ಷತ್ರ ಬಿಳಿಬಣ್ಣದ್ದು, ದಂಡ ಆಕಾರದ ೨ ನಕ್ಷತ್ರಗಳು, ಮೊಟಟಿಟು

ನಾಲ್ಕು ಅಕ್ಷರಗಳು, ಸ್ತ್ರೀರೂಪ, ವಿಪ್ರಜಾತಿ, ಮನುಷ್ಯಗಣ, ಅಧೋಮುಖ, ಸುಲೋಚನವ, ಉಗ್ರ, ಅಗ್ನಿಮಂಡಲ, ಅಂತ್ಯಸಮಯ, ಗ್ರಾಮಸ್ಥಾನ, ಚತುಷ್ಪಾತ್, ಪಲಾಶವೃಕ್ಷ, ಮೂಷಿಕಯೋನಿ, ಸೂರ್ಯಾಧಿಪತ್ಯ, ಸಿಂಹರಾಶಿ, ಕ್ಷತ್ರಿಯವರ್ಣ, ಮಧನಾಡಿ, ಅತ್ರಿಗೋತ್ರ, ಗೃದ್ರಪಕ್ಷಿ, ಅಗ್ನಿತತ್ವ, ಯೋಗಿನಿ ವಾರಾಹಿ, ಸಿಂಹಾಯ, ದೇವತಾ ಭಗ, ಅಧಿದೇವತಾ ಪಿತೃಗಳು, ಪ್ರತ್ಯಧಿದೇವತಾ ಅರ್ಯಮ. ೨೦ಘಟಿ ನಂತರ ವಿಷನಾಡಿ, ೨೪ ಘಟಿ ನಂತರ ಅಮೃತನಾಡಿ. ಬೆಲ್ಲ ತಿಂದು ಪಶ್ಚಿಮ ಅಥವಾ ದಕ್ಷಿಣಕ್ಕೆ ಪ್ರಯಾಣ ಶುಭ. ಪ್ರಥಮರಜೋದರ್ಶನದಿಂದ ೬ಮಾಸ ದೋಷ, ಪತಿಗೆ ಅರಿಷ್ಟ, ಶಾಂತಿ ಮಾಡಿಕೊಳ್ಳಬೇಕು. ಪುರಪ್ರಭೇಧ, ಖಾತ, ವಿಷಪ್ರಯೋಗ, ಭಯ, ರೋಗ ದುಃಖ, ಮಂತ್ರೌಷಧಿ, ಕೂಪತಡಾಗಾದಿಗಳಿಗೆ ಶುಭಕರ.

ಈ ನಕ್ಷತ್ರದಲ್ಲಿ ರೋಗಬಂದರೆ ಪ್ರಾಣಭಯ ೩೦ ದಿನಗಳು ಅರಿಷ್ಟ. ಆದಿವಾರ ರೋಗಬಂದರೆ ೨೫ ದಿನಗಳು, ಸೋಮವಾರ ೧೮, ಮಂಗಳವಾರ ೨೭, ಬುಧವಾರ ೧೨, ಗುರುವಾರ ೧೪, ಶುಕ್ರವಾರ ೨೨, ಶನಿವಾರ ೩೦ ದಿನಗಳ ನಂತರ ಗುಣವಾಗುವುದು. ಶಾಂತಿಗೆ– ಕೆಮ್ಮಣ್ಣಿನಿಂದ ಎರಡುಭುಜಗಳಲ್ಲಿ ಕಮಲಅಭಯವುಳ್ಳ ಭಗಪ್ರತಿಮೆಯನ್ನು ಮಾಡಿ ಕೆಂಪುವಸ್ತ್ರ, ಕೆಂಪುಹೂಗಳಿಂದ ಪೂಜಿಸಿ ಎಳ್ಳನ್ನ ನೈವೇದ್ಯಮಾಡಿ, ಭಗಪ್ರಣೀತಿ ಎಂಬ ಮಂತ್ರದಿಂದ ೧೦೮ ತುಪ್ಪದ ಅಹುತಿ ಕೊಟ್ಟು ಗಂಧ,ಹೂವು,ತುಪ್ಪ,ಹೆಸರನ್ನ ದಕ್ಷಿಣದಿಕ್ಕಿನಲ್ಲಿ ಬಲಿ ಕೊಟ್ಟು ಕೆಂಪುಗೋವನ್ನು ದಾನಕೊಟ್ಟರೆ ಒಂದುತಿಂಗಳು ನಂತರ ಗುಣವಾಗುವುದು. ಆದಿವಾರ ವಿಷಯೋಗ, ಸೋಮವಾರ ನಾಶಯೋಗ, ಮಂಗಳವಾರ ಶುಭಯೋಗ, ಬುಧವಾರ ವರಯೋಗ, ಗುರುವಾರ ಮೃತ್ಯುಯೋಗ, ಶುಕ್ರವಾರ ಸಿದ್ಧಯೋಗ, ಶನಿವಾರ ನಾಶಯೋಗ, ತ್ರಯೋದಶಿಯಲ್ಲಿ ಇದ್ದರೆ ಉಗ್ರಯೋಗ, ಭದ್ರಾತಿಥಿ ನಿರ್ಜೀವಯೋಗ, ಅಶ್ವಿನಿಯಲ್ಲಿ ಕ್ರೂರರು ಇದ್ದರೆ ಮಹಾಶೂಲಯೋಗ, ಆಷಾಢದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ದುರ್ಭಿಕ್ಷವು, ಅಗ್ನಿಭಯ, ಸಂಕ್ರಮಣವಾದರೆ ಮಧ್ಯಾರ್ಘವು, ಗಂಡಾದರೆ ಧರ್ಮಾತ್ಮ, ಕಾರ್ಯಾಕಾರ್ಯವಿಚಕ್ಷಣ, ನರ್ತನಪ್ರಿಯ, ಸುಂದರ, ಪರೋಪಕಾರಿ,ಭ್ರಾತೃಪ್ರೇಮಿ, ವ್ಯಾಪಾರನಿಪುಣ, ಚಪಲಚಿತ್ತ, ಅಲಸಿ, ಸಂಪನ್ನ. ಹೆಣ್ಣಾದರೆ ಉತ್ತಮಸಂತಾನ ಹೊಂದುವಳು, ಧನವತಿ,ಶತೃಜಯವುಳ್ಳವಳು ಆಗುವಳು. ಪುಬ್ಬ ಮೊದಲ ಪಾದದಲ್ಲಿ ರೋಗ ಬಂದರೆ ೫ ದಿನಗಳು ಕ್ರೂರ, ೨ನೆ ಪಾದ ೭ ೫ ದಿನಗಳು ಕ್ರೂರ, ೩ನೆ ಪಾದ ೧೦ ೫ ದಿನಗಳು ಕ್ರೂರ, ೪ನೆ ಪಾದ ೩೦ ೫ ದಿನಗಳು ಕ್ರೂರ. ಕಳೆದ ವಸ್ತು ದೊರಯದು.

೧ನೆ ಪಾದ ರವಿ ಅಧಿಪತಿ ರಾಜಾಂಶ, ಸರ್ವಗುಣಸಂಪನ್ನ, ಬಹುಪುತ್ರಸಂತತಿ ಉಳ್ಳವ, ಕರುಣಿ,ಭೋಗಿ,ತ್ಯಾಗೀ, ಪರಹಿಂಸಿ, ವಿಶ್ವಾಸಘಾತುಕ, ಕ್ರೂರ,ಮೃದುಭಾಷಿ,ಜನಪ್ರಿಯ. ೨ನೆ ಪಾದ ಬುಧ ಅಧಿಪತಿ ನಪುಂಶಕಾಂಶ, ಖ್ಯಾತಿವಂತ, ಉತ್ಸಾಹಿ, ವೈಭವ,ಸ್ತ್ರೀದ್ವೇಷೀ,ದುಃಖಿ, ಅಧಿಕಾರಮಾಡುವವ, ಸರ್ವಶಾಸ್ತ್ರ ತಿಳಿದವ, ರಾಜಪೂಜಿತ. ೩ನೆ ಪಾದ ಶುಕ್ರ ಅಧಿಪತಿ ಭಯಾಂಶ, ಬಂಧುಪ್ರಿಯ, ಶಿಲ್ಪಶಾಸ್ತ್ರತಿಳಿದವ, ಗಣಿತಜ್ಞ, ಸದ್ವಿದ್ಯಾ ನಿರತ, ಖ್ಯಾತ, ದಾನಿ, ಸರ್ವಕಲಾಭಿಜ್ಞ, ಸುಖೀ, ಸ್ತ್ರೀಯರಿಗೆ ಪ್ರೀತಿಪಾತ್ರ, ೪ನೆ ಪಾದ ಕುಜ ಅಧಿಪತಿ, ದರಿದ್ರಾಂಶ,



ಧನ–ಧಾನ್ಯರಹಿತ, ಕಾರ್ಯಸಿದ್ಧಿ ಇಲ್ಲದವ, ಪರನಿಂದಕ, ವಂಚನಚತುರ. ೨೦ಸಂವತ್ಸರಗಳು ಶುಕ್ರದಶ. ೬ನೆ ಮಾಸದಲ್ಲಿ ವಿಷಗಂಡ, ೫ ಸಂವತ್ಸರ ಮಹಾಭಯ, ೭ ಶೀತವಾತಬಾಧ, ೧೨ ಸಮಾನರಿಂದ ಬಾಧೆ, ೧೬ ಜಲಗಂಡ, ೨೦ ಮರದಿಂದ ಬೀಳುವಿಕೆ, ೩೦ ಸ್ಫೋಟಕ ಪದಾರ್ಥದಿಂದ ಭಯ, ೪೦ ಶತ್ರುಗಳಿಂದ ಹಾನಿ, ೫೦ ಪ್ರತಿಕೂಲ, ೬೮ ಅಪಮೃತ್ಯು, ಇವೆಲ್ಲ ಪರಿಹಾರವಾದರೆ ೮೯ ಸಂವತ್ಸಗಳು ಪರಮಾಯು.

**ಉತ್ತರಾಫಲ್ಗುಣೀ:**–ಮೊದಲಪಾದದಲ್ಲಿ ಎಂತಹ ಮಗು ಜನಿಸಿದರೂ ತಾಯಿ – ತಂದೆಯರಿಗೆ ಅರಿಷ್ಟ. ೨–೩ ಪಾದಗಳಲ್ಲಿ ಸಾಮಾನ್ಯದೋಷ. ೪ನೆ ಪಾದದಲ್ಲಿ ಎಂತಹ ಮಗು ಜನಿಸಿದರೂ ಸಹೋದರಾರಿಷ್ಟವು. ಅದಕ್ಕೆ ಗೋಮುಖಪ್ರಸವಶಾಂತಿ, ಏಕಾದಶವಾರ ರುದ್ರಾಭಿಷೇಕ, ಧನ್ವಂತರಿ ಜಪ, ಮೃತ್ಯುಂಜಯಜಪ, ನಕ್ಷತ್ರಜಪ, ನವಗ್ರಹಜಪ, ಹೋಮ–ಸುವರ್ಣದಾನ ಮಾಡಿದರೆ ಅರಿಷ್ಟನಿವಾರಣ. ೨–೩ ಪಾದಗಳಿಗೆ ಸಾಮಾನ್ಯದೋಷಪ್ರಯುಕ್ತ ತೈಲದಲ್ಲಿ ಶಿಶುಮುಖ ದರ್ಶನ ಮಾಡಬೇಕು.

ಉತ್ತರಾ ನಕ್ಷತ್ರ ಕೆಂಪುಬಣ್ಣದ್ದು, ದಂಡ ಆಕಾರವುಳ್ಳ ೨ ನಕ್ಷತ್ರಗಳು, ಟೆಟೋಪಪಿ ನಾಲ್ಕು ಅಕ್ಷರಗಳು, ಸ್ತ್ರೀರೂಪ, ವಿಪ್ರಜಾತಿ, ಮನುಷ್ಯಗಣ, ಊರ್ಧ್ವಮುಖ, ಅಂಧಲೋಚನ, ಉಗ್ರ,ಅಗ್ನಿಮಂಡಲ, ಶೂನ್ಯಸ್ಥಾನ, ತ್ರಿಪಾದಿ, ಬದರೀವೃಕ್ಷ, ಗೋಯೋನಿ, ೧ನೆ ಪಾದಕ್ಕೆ ಸೂರ್ಯಾಧಿಪತ್ಯ ಸಿಂಹರಾಶಿ, ಕ್ಷತ್ರಿಯವರ್ಣ, ಆದಿನಾಡಿ, ಸಂಕರ, ಅತ್ರಿಗೋತ್ರ, ಕಾಕಪಕ್ಷಿ, ಅಗ್ನಿತತ್ವ, ಯೋಗಿನಿ ಸಿದ್ಧಾ, ಸಿಂಹಾಯು, ೨–೩–೪ಪಾದಗಳಿಗೆ ಕನ್ಯಾರಾಶಿ ಬುಧಾಧಿಪತಿ, ವೈಶ್ಯವರ್ಣ, ದೇವತಾ ಅರ್ಯಮ, ಅಧಿದೇವತಾ ಸವಿತೃ, ಪ್ರತ್ಯಧಿದೇವತೆ ಭಗ. ೧೮ ಘಟಿ ನಂತರ ವಿಷನಾಡಿ, ೨೨ ಘಟಿ ನಂತರ ಅಮೃತನಾಡಿ. ಪ್ರಯಾಣ ವರ್ಜ್ಯ ೭ ಘಟಿ ನಂತರ ಉದ್ದುಪದಾರ್ಥತಿಂದು ಪಶ್ಚಿಮ ಅಥವಾ ದಕ್ಷಿಣಕ್ಕೆ ಪ್ರಯಾಣ ಶುಭ. ಪ್ರಥಮರಜೋದರ್ಶನ ಶುಭ, ಸುಪುತ್ರವತಿ,ಭಾಗ್ಯವತಿ, ಗುಣವತಿ ಆಗುವಳು. ಬಾವಿ,ಕೆರೆ–ಕಟ್ಟೆಗಳಾರಂಭ,ಶಯ್ಯಾ,ರತ್ನಾದಿ ಅಭರಣಗಳು, ಪಟ್ಟಾಬಿಷೇಕ, ಶುಭಕಾರ್ಯಗಳು, ದೇವತಾರಾಧನ, ಕೃಷ್ಯಾರಂಭ, ಗೃಹ– ಗ್ರಾಮಪ್ರವೇಶ ಶುಭ, ಋತುಶಾಂತಿ, ಪುಂಸವನಾಗಳಿಗೆ ಪ್ರಶಸ್ಥವಾದದ್ದು.

ಈ ನಕ್ಷತ್ರದಲ್ಲಿ ರೋಗಬಂದರೆ ಪ್ರಾಣಭಯ ೭ ದಿನಗಳು ಅರಿಷ್ಟ. ಆದಿವಾರ ರೋಗಬಂದರೆ ೧೦ ದಿನಗಳು, ಸೋಮವಾರ ೭, ಮಂಗಳವಾರ ೭, ಬುಧವಾರ ೯, ಗುರುವಾರ ೮, ಶುಕ್ರವಾರ ೧೪, ಶನಿವಾರ ೧೭ ದಿನಗಳ ನಂತರ ಗುಣವಾಗುವುದು. ಶಾಂತಿಗೆ– ಕೆಮ್ಮಣ್ಣಿನಿಂದ ೨ಭುಜದಲ್ಲಿ ಶಂಖ–ಚಕ್ರ ಉಳ್ಳ ಅರ್ಯಮಪ್ರತಿಮೆಯನ್ನು ಮಾಡಿ ಕೆಂಪುವಸ್ತ್ರ, ಕೆಂಪುಹೂವಿನಿಂದ ಪೂಜಿಸಿ ಎಳ್ಳನ್ನ ನೈವೇದ್ಯಮಾಡಿ, ಅರ್ಯಮ್ಣಂ ಸ್ವ ಎಂಬ ಮಂತ್ರದಿಂದ ೧೦೮ ತುಪ್ಪದ ಅಹುತಿ ಕೊಟ್ಟು ಗಂಧ,ಹೂವು, ತುಪ್ಪ,ಕೆಂಪನ್ನವನ್ನು ಉತ್ತರದಿಕ್ಕಿನಲ್ಲಿ ಬಲಿ ಹಾಕಿ ಬಿಳಿಗೋವನ್ನು ದಾನಕೊಟ್ಟರೆ ೭ ದಿನಗಳ ನಂತರ ಗುಣವಾಗುವುದು. ಆದಿವಾರ ಸಮಾನ್ಯಯೋಗ, ಸೋಮವಾರ ದಗ್ಧಯೋಗ, ಮಂಗಳವಾರ ಸಿದ್ಧಿಯೋಗ, ಬುಧವಾರ ಯಮಕಂಟಕಯೋಗ, ಗುರುವಾರ ಉಗ್ರಯೋಗ,

ಶುಕ್ರವಾರ ಶುಭಯೋಗ, ಶನಿವಾರ ವಿಷಯೋಗ, ಚೌತಿ ಜ್ವಾಲಾಮುಖೀಯೋಗ, ಭದ್ರತಿಥಿಯಲ್ಲಿ ನಿರ್ಜೀವಯೋಗ, ರೇವತಿಯಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಮಾರ್ಗಶಿರದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ವಾತಪಿತ್ತಾದಿಗಳಿಂದ ಹೊಟ್ಟೆರೋಗವು, ಅಗ್ನಿಭಯ, ಸಂಕ್ರಮಣವಾದರೆ ಮಧ್ಯಾರ್ಘವು, ಗಂಡಾದರೆ ಧರ್ಮಾತ್ಮ, ಕಾರ್ಯಾಕಾರ್ಯವಿಚಕ್ಷಣ, ಅಭಿಮಾನಿ, ಕುಲಶ್ರೇಷ್ಟ, ಸ್ತ್ರೀಯರ ಪ್ರೀತಿಪಾತ್ರ, ಉಷ್ಣದೇಹಿ, ವಿನಯಶಾಲಿ, ಸುಖಿ, ಪಂಡಿತ, ದೇಹದಲ್ಲಿ ಮಚ್ಚೆ ಉಳ್ಳವ. ಶತೃಜಯಿ, ಧನಿಕ, ಸುಖೀಭೋಗೀ, ಸ್ತ್ರೀಯರಲ್ಲಿ ಅತ್ಯಾದರವುಳ್ಳವ, ಯತಾರ್ಥವಾದಿ, ಪಂಡಿತ ಆಗುವನು. ಹೆಣ್ಣಾದರೆ ಸ್ಥಿರಬುದ್ಧಿ, ಗೃಹ ಕಾರ್ಯಚತುರೆ, ಸುಗುಣವತಿ, ಧನವತಿ ಆಗುವಳು. ಉತ್ತರ ೧ನೆ ಪಾದದಲ್ಲಿ ರೋಗಬಂದರೆ ೭ ದಿನಗಳು ಕ್ರೂರ, ೨ನೆ ಪಾದ ೧೪ ದಿನಗಳು ಕ್ರೂರ, ೩ನೆ ಪಾದ ೭ ದಿನಗಳು ಕ್ರೂರ, ೪ನೆ ಪಾದ ೬೦ ದಿನಗಳು ಕ್ರೂರ. ಕಳೆದ ವಸ್ತು ೩ ದಿನದಲ್ಲಿ ದೊರೆಯುವುದು.

೧ನೆ ಪಾದ ಗುರು ಅಧಿಪತಿ ಬಲಾಂಶ, ವಿದ್ಯಾವಂತ, ಧೈರ್ಯಶಾಲಿ, ಪರೋಪಕಾರಿ, ಸಂತೋಷಚಿತ್ತ, ಧರ್ಮಿಷ್ಟ, ಗುರುದೇವತಾಪೂಜಕ. ೨ನೆ ಪಾದ ಶನಿ ಅಧಿಪತಿ ಪಾಪಾಂಶ, ದರಿದ್ರ, ಚಪಲ, ದಯಾದಾಕ್ಷಿಣ್ಯರಹಿತ, ಮೂರ್ಖ, ಪರದ್ರವ್ಯಾಸಕ್ತ, ಅತ್ಮಸ್ತುತಿ–ಪರನಿಂದಕ. ೩ನೆ ಪಾದ ಶನಿ ಅಧಿಪತಿ ಉಗ್ರಾಂಶ, ಡಾಂಬಿಕ, ಗರ್ವಿಷ್ಟ, ಶೀಘ್ರಕೋಪಿ, ವ್ಯಸನಿ, ಅಪಕಾರಿ, ಮಾತ್ಸರಿ, ಖರ್ಚಿಕ, ಕೃಷಿಗಾಗಿ ಋಣಕರ್ತಾ. ೪ನೆ ಪಾದ ಗುರು ಅಧಿಪತಿ, ಉತ್ಕೃಷ್ಟಾಂಶ, ಆಚಾರವಂತ, ಶಾಸ್ತ್ರತಿಳಿದವ, ಬಂಧುರಕ್ಷಕ, ದಾನಿ, ಸರ್ಕಾರಿ ಅಧಿಕಾರಿ. ೬ಸಂವತ್ಸರಗಳು ರವಿದಶ. ೭ ದಿನಗಳು ಭಯ, ೩–೧೦ಮಾಸಗಳಲ್ಲಿ ಜ್ವರಭಯ, ೫–೭ಸಂವತ್ಸರದಲ್ಲಿ ವಿಷಮಶೀತಭಯ, ೧೯–೨೦ ಜಲಗಂಡ–ವಿಷಜಂತುಭಯ, ೩೦ ಸಹೋದರರಿಂದ ಅರಿಷ್ಟ–ಹೊಟ್ಟೆನೋವು, ೬೦–೭೦ ಅಪಮೃತ್ಯು, ಇವೆಲ್ಲಾ ಪರಿಹಾರವಾದರೆ ೮೦ ಸಂವತ್ಸರಗಳು ಪರಮಾಯುವು.

**ಹಸ್ತ:**–೧–೨–೪ ಪಾದದಲ್ಲಿ ಹುಟ್ಟಿದರೆ ದೋಷವಿಲ್ಲ. ೩ನೆ ಪಾದದಲ್ಲಿ ಗಂಡುಹುಟ್ಟಿದರೆ ತಂದೆಗೆ, ಹೆಣ್ಣುಹುಟ್ಟಿದರೆ ತಾಯಿಗೆ ಸಾಮಾನ್ಯಅರಿಷ್ಟ. ಸಾಮಾನ್ಯದೋಷಪ್ರಯುಕ್ತ ತೈಲದಲ್ಲಿ ಶಿಶುಮುಖ ದರ್ಶನ ಮಾಡುವುದು ಒಳ್ಳೆಯದು. ಹಸ್ತ ನಕ್ಷತ್ರ ಬಿಳಿಬಣ್ಣದ್ದು, ಹಸ್ತ ಆಕಾರವುಳ್ಳ ೫ ನಕ್ಷತ್ರಗಳು, ಪುಷಣಠ ನಾಲ್ಕು ಅಕ್ಷರಗಳು, ಪುಲ್ಲಿಂಗ, ವೈಶ್ಯಜಾತಿ, ದೇವಗಣ, ಕಂಠರಜ್ಜು, ತಿರ್ಯಙ್‌ಮುಖ, ಮಂದಲೋಚನ, ಕ್ಷಿಪ್ರ, ಲಘುವಾಯುಮಂಡಲ, ಪಟ್ಟಣಸ್ಥಾನ, ಚತುಷ್ಪಾತ್, ಅಂಬಷ್ಟವೃಕ್ಷ, ಮಹಿಷಯೋನಿ,ಆದಿನಾಡಿ, ಬ್ರಹ್ಮಜಾತಿ, ಅಂಗೀರಸಗೋತ್ರ , ವರುಣ, ಶುಕಪಕ್ಷಿ, ಅಗ್ನಿತತ್ವ, ಯೋಗಿನಿ ವೈಷ್ಣವೀ, ವೃಷಭಾಯ, ಕನ್ಯಾರಾಶಿ ಬುಧಾಧಿಪತಿ, ದೇವತಾ ಸವಿತೃ, ಅಧಿದೇವತಾ ತ್ವಷ್ಟಾ, ಪ್ರತ್ಯಧಿದೇವತಾ ಅರ್ಯಮ. ೨೧ಘಟಿ ನಂತರ ವಿಷನಾಡಿ, ೪೫ ಘಟಿ ನಂತರ ಅಮೃತನಾಡಿ. ಪ್ರಯಾಣ ವರ್ಜ್ಯ ೭ ಘಟಿ ನಂತರ ಅಕ್ಕಿಹಿಟ್ಟಿನ ಪದಾರ್ಥತಿಂದು ಎಲ್ಲದಿಕ್ಕುಗಳಿಗೆ ಪ್ರಯಾಣ ಶುಭವು. ಪ್ರಥಮರಜೋದರ್ಶನ ಶುಭ,ಸುಪುತ್ರವತಿ,



ಭಾಗ್ಯವತಿ, ಗುಣವತಿ ಆಗುವಳು. ಬಾವಿ,ಕೆರೆ,ಕಟ್ಟೆ ಮಾಡಿಸುವುದು, ಶಯ್ಯಾ,ರತ್ನಾದಿ ಅಭರಣಗಳು, ಪಟ್ಟಾಬಿಷೇಕ, ಶುಭಕಾರ್ಯಗಳು, ದೇವತಾರಾಧನ, ಕೃಷ್ಯಾರಂಭ, ಗೃಹ–ಗ್ರಾಮಪ್ರವೇಶ ಶುಭಕರ. ಋತುಶಾಂತಿ, ಪುಂಸವನಾದಿಗಳಿಗೆ ಪ್ರಶಸ್ಥವಾದದ್ದು.

ಈ ನಕ್ಷತ್ರದಲ್ಲಿ ರೋಗ ಬಂದರೆ ಪ್ರಾಣಭಯ ೧೯ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೧೨ ದಿನಗಳು, ಸೋಮವಾರ ೪, ಮಂಗಳವಾರ ೧೪, ಬುಧವಾರ ೮, ಗುರುವಾರ ೧೦, ಶುಕ್ರವಾರ ೮, ಶನಿವಾರ ೧೯ ದಿನಗಳ ನಂತರ ಗುಣವಾಗುವುದು. ಶಾಂತಿಗೆ– ಕೆಮ್ಮಣ್ಣಿನಿಂದ ಏಕಾಶ್ವರಥದಲ್ಲಿ ಪದ್ಮಾಸನ ಎರಡುಭುಜಗಳ ಸವಿತೃ ಪ್ರತಿಮೆ ಮಾಡಿ ಕೆಂಪುವಸ್ತ್ರ, ಕೆಂಪುಹೂವುಗಳಿಂದ ಪೂಜಿಸಿ ತುಪ್ಪವಡೆ ಪರಮಾನ್ನ ನೈವೇದ್ಯಮಾಡಿ, ಉದುತ್ಯಂ ಎಂಬ ಮಂತ್ರದಿಂದ ೧೦೮ ಎಕ್ಕೆಕಡ್ಡಿಗಳಿಂದ ತುಪ್ಪ ಸಹಿತ ಅಹುತಿ ಕೊಟ್ಟು, ಗಂಧ, ಹೂವು, ತುಪ್ಪ, ಉದ್ದುಅನ್ನವನ್ನು ದಕ್ಷಿಣಕ್ಕೆ ಬಲಿ ಹಾಕಿದರೆ ೧೯ ದಿನಗಳ ನಂತರ ಗುಣವಾಗುವುದು. ಆದಿವಾರ ಅಮೃತಸಿದ್ಧಿಯೋಗ, ಸೋಮವಾರ ಸಿದ್ಧಯೋಗ, ಮಂಗಳವಾರ ವರಯೋಗ, ಬುಧವಾರ ಯಮಕಂಟಕಯೋಗ, ಗುರುವಾರ ಕಲಹಯೋಗ, ಶುಕ್ರವಾರ ಅಮೃತಯೋಗ, ಶನಿವಾರ ಮೃತ್ಯುಯೋಗ, ಈ ನಕ್ಷತದ ಕೊನೆ ಪಾದವು ಮೃತ್ಯುಯೋಗ, ಆದಿವಾರ ಪಂಚಮಿಹಸ್ತ ನಾಶಯೋಗ, ಪೂರ್ಣಿಮಾತಿಥಿಯಲ್ಲಿ ನಿರ್ಜೀವಯೋಗ, ಉತ್ತರಾಭಾದ್ರಪದದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಪುಷ್ಯಮಾಸ ಶೂನ್ಯನಕ್ಷತ್ರ, ಉತ್ಪಾತವಾದರೆ ಕ್ಷುದ್ರಾದಿಭಯ, ರೋಗಪೀಡಾ, ಸಂಕ್ರಮಣವಾದರೆ ಮಧ್ಯಾರ್ಘವು.

ಗಂಡಾದರೆ ಪ್ರಜರಿಂದ ಆರಿಸಿಬಂದ ಪ್ರಜಾಧಿಕಾರಿ,ರಾಜಪೂಜಿತ, ಪರೋಪಕಾರಿ, ಗುರುದೇವತಾಭಕ್ತ, ವಾದ್ಯಾದಿಗಳಿಂದ ಸ್ವಕೀಯರನು ಸಂತೋಷಪಡಿಸುವಾತ, ಧನಿಕ, ಸುಂದರ, ಧೈರ್ಯಶಾಲಿ, ಬಲಶಾಲಿ, ಸುಖಿ, ಪಂಡಿತ, ದೇಹದಲ್ಲಿ ಮಚ್ಚೆಗಳುಳ್ಳವ. ಶತೃಜಯಿ. ಹೆಣ್ಣಾದರೆ ಗೌರವವುಳ್ಳವಳು, ಗುರುದೇವತಾಭಕ್ತೆ, ಸುಂದರಿ, ಸುಗುಣವತಿ, ಧನವತಿ ಆಗುವಳು. ಹಸ್ತ ೧ ಪಾದದಲ್ಲಿ ರೋಗ ಬಂದರೆ ೧೫ ದಿನಗಳು ಕ್ರೂರ, ೨ನೆ ಪಾದ ೧೩ ದಿನಗಳು ಕ್ರೂರ, ೩ನೆ ಪಾದ ೧೫ ದಿನಗಳು ಕ್ರೂರ, ೪ನೆ ಪಾದ ೫ ದಿನಗಳು ಕ್ರೂರ. ಕಳೆದ ವಸ್ತು ಬೇಗನೆ ಸಿಗುವುದು.

೧ನೆ ಪಾದ ಕುಜ ಅಧಿಪತಿ ತಸ್ಕರಾಂಶ, ಅತುರದಿಂದ ಕೆಲಸ ಪೂರ್ತಿಮಾಡುವವ, ಧನರಹಿತ, ಬಲಶಾಲಿ, ಲೋಭಿ, ಕಲಹಪ್ರಿಯ, ಹಾನಿಯಿಂದ ದುಃಖಿ. ೨ನೆ ಪಾದ ಶುಕ್ರ ಅಧಿಪತಿ ಭೋಕ್ತಾಂಶ, ಮಂದಬುದ್ಧಿ, ಶತ್ರುಗಳಿಲ್ಲದವ, ವೇಧಶಾಸ್ತ್ರಾಭ್ಯಾಸಿ, ಮೃದುಸ್ವಭಾವಿ, ಸ್ತ್ರೀಯರಿಗೆ ಪ್ರಿಯವನ್ನು ಮಾಡುವವ. ೩ನೆ ಪಾದ ಬುಧ ಅಧಿಪತಿ ಪಂಡಿತಾಂಶ, ಲೇವಾದೇವಿ ವ್ಯವಹಾರನಿಪುಣ, ಕಾಮಿ, ಕೆಟ್ಟಬುದ್ಧಿ, ಸತ್ಯವಾದಿ, ಶಿಲ್ಪಿ. ೪ನೆ ಪಾದ ಚಂದ್ರ ಅಧಿಪತಿ, ಧನಾಂಶ, ಸರ್ಕಾರಿ ಅಧಿಕಾರಿ, ಅಲ್ಪಕೋಪ, ಶುಚಿ, ಸುಶೀಲ, ಜಿತೇಂದ್ರಿಯ, ಕೃಷಿಪ್ರಿಯ, ಧರ್ಮಕಾರ್ಯಾಸಕ್ತ. ೧೦ ಸಂವತ್ಸರಗಳು ಚಂದ್ರದಶ. ೧ಸಂವತ್ಸರದಲ್ಲಿ ಗಂಡ, ೨–೩–೫ ಸ್ಫೋಟಕವಸ್ತು ಭಯ, ೭–೮ ಜರಭಯ, ೧೨–೧೯ ಶತ್ರುಪೀಡಾ, ೨೦ ಮೃಗಭಯ, ೨೪

ಜಲಗಂಡ, ೩೦ ವಾತ ಇಲ್ಲವೆ ಶತ್ರುಗಳಿಂದ ಧನಹಾನಿ, ೩೪ ರಾಜಕೀಯಭಯ, ೩೮ ಸನ್ನಿಪಾತ, ೬೦ ಅಪಮೃತ್ಯು, ೭೦ ಮಹಾಕಂಟಕ ಇವೆಲ್ಲ ಪರಿಹಾರವಾದರೆ ೮೮ ಸಂವತ್ಸರಗಳು ಪರಮಾಯು.

**ಚಿತ್ರಾ:**-೧ ಪಾದದಲ್ಲಿ ಎಂತಹ ಶಿಶುಜನಿಸಿದರೂ ತಂದೆಗೆ ಅರಿಷ್ಟ. ೨ನೆ ಪಾದದಲ್ಲಿ ಎಂತಹ ಶಿಶುಜನಿಸಿದರೂ ತಾಯಿಗೆ ಅರಿಷ್ಟ. ೩ನೆ ಪಾದದಲ್ಲಿ ಎಂತಹ ಶಿಶುಜನಿಸಿದರೂ ಸಹೋದರಾರಿಷ್ಟ. ೪ನೆ ಪಾದದಲ್ಲಿ ಎಂತಹ ಶಿಶುಜನಿಸಿದರೂ ಸಮಾನ್ಯದೋಷ. ಅದಕ್ಕೆ ಗೋಮುಖಪ್ರಸವಶಾಂತಿ, ಏಕಾದಶವಾರ ರುದ್ರಾಭಿಷೇಕ, ಧನ್ವಂತರಿಜಪ, ಮೃತ್ಯುಂಜಯಜಪ, ನಕ್ಷತ್ರಜಪ, ನವಗ್ರಹಜಪ, ಹೋಮ-ಸುವರ್ಣದಾನಗಳನ್ನು ಮಾಡಿದರೆ ಅರಿಷ್ಟನಿವಾರಣೆ ಆಗುವುದು. ೪ನೆ ಪಾದಕ್ಕೆ ನಕ್ಷತ್ರದ ಸಾಮಾನ್ಯದೋಷಪ್ರಯುಕ್ತ ತೈಲದಲ್ಲಿ ಮಂತ್ರಸಹಿತವಾಗಿ ಶಿಶುಮುಖದರ್ಶನ ಶುಭಕರ. ಈ ನಕ್ಷತ್ರದ ೧-೨ಪಾದಗಳ ಸಂಧಿಯಲ್ಲಿ ಜನಿಸಿದರೆ ಪಿತೃಗಂಡವು ಅದಕ್ಕೆ ೬ ತಿಂಗಳವರೆಗೂ ತಂದೆಯು ಶಿಶುಮುಖ ನೋಡಬಾರದು.

ಚಿತ್ರಾ ನಕ್ಷತ್ರ ಬಿಳಿಬಣ್ಣದ್ದು, ಮುತ್ತಿನಂತಹ ಆಕಾರದ ೧ ನಕ್ಷತ್ರ, ಪೆಪೋರರಿ ನಾಲ್ಕು ಅಕ್ಷರಗಳು, ಪುರುಷ ರೂಪ, ಉಪಜೀವಕಜಾತಿ, ರಾಕ್ಷಸಗಣ, ತಿರ್ಯಙ್ಮುಖ, ಮದ್ಯಲೋಚನ, ಮೃದು, ವಾಯುಮಂಡಲ, ಬಾಹ್ಯಸಮಯ, ಶೂನ್ಯಪಟ್ಟಣ ಸ್ಥಾನ, ದ್ವಿಪಾದಿ, ಬಿಲ್ವವೃಕ್ಷ, ವ್ಯಾಘ್ರಯೋನಿ, ದ್ವಿಪಾದಪರ್ಯಂತ ಕನ್ಯಾರಾಶಿ ಬುಧಾಧಿಪತ್ಯ, ವೈಶ್ಯವರ್ಣ, ತೃತೀಯ-ಚತುರ್ಥಪಾದಗಳು ತುಲಾರಾಶಿ, ಶೂದ್ರವರ್ಣ, ಮಧ್ಯನಾಡಿ, ಆಂಗೀರಸಗೋತ್ರ, ಕಾಕಪಕ್ಷಿ, ತೇಜಸ್ತತ್ವ, ಯೋಗಿನಿ ಮಾಹೇಂದ್ರ, ಖರಾಯ, ದೇವತಾ ತ್ವಷ್ಟಾ, ಅಧಿದೇವತಾ ವಾಯು, ಪ್ರತ್ಯಧಿದೇವತಾ ಸವಿತೃ. ಈ ನಕ್ಷತ್ರದಲ್ಲಿ ಇಂದ್ರಜಿತು ಹುಟ್ಟಿದನು. ೨೦ಘಟಿ ನಂತರ ವಿಷನಾಡಿ, ೨೪ ಘಟಿ ನಂತರ ಅಮೃತನಾಡಿ. ಯಾತ್ರಾವರ್ಜ್ಯ, ೧೪ ಘಟಿ ನಂತರ ಚಿತ್ರಾನ್ನ ತಿಂದು ಪಶ್ಚಿಮ ಇಲ್ಲವೆ ಉತ್ತರಕ್ಕೆ ಪ್ರಯಾಣ ಶುಭ. ಪ್ರಥಮರಜೋದರ್ಶನವಾದರೆ ಸೌಭಾಗ್ಯವತಿ, ಸುಪುತ್ರವತಿ. ಚಿತ್ರವಸ್ತ್ರಾಭರಣ, ಚಿತ್ರಕರ್ಮ, ನಿಷೇಕ, ನಾಮಕರಣ, ಅನ್ನಪ್ರಾಶನ, ಕರ್ಣವೇಧ, ಚೌಲ, ಕರ್ಣವೇಧ, ವಿದ್ಯಾರಂಭ, ಉಪನಯನ, ವೇದಶಾಸ್ತ್ರಾಭ್ಯಾಸ, ನವವಸ್ತ್ರಾಭರಣ ಧಾರಣ, ನೂತನ ವಾಹನಾರೋಹಣ, ಸಂಗೀತ ನೃತ್ಯ ವಿವಿಧವಾದ್ಯಾಭ್ಯಾಸ, ಶಿಲ್ಪ, ವಾಸ್ತುಗಳಿಗೆ ಶುಭ, ಚಿತ್ರಲೇಖನ, ದ್ಯೂತ, ಕ್ರೀಡ, ಅಂಜನ ಹಾಕುವಿಕೆ, ದೇವತಾದರ್ಶನ, ರಾಜದರ್ಶನ, ವೈದ್ಯಕ ಮೊದಲಾದ ಶುಭಕಾರ್ಯಗಳಿಗೆ ಪ್ರಶಸ್ತವಾದದ್ದು.

ಈ ನಕ್ಷತ್ರದಲ್ಲಿ ರೋಗಬಂದರೆ ಪ್ರಾಣಭಯ ೧೧ತಿಂಗಳ ಅರಿಷ್ಟ. ಆದಿವಾರ ರೋಗ ಬಂದರೆ ೨೦ ದಿನಗಳು, ಸೋಮವಾರ ೭, ಮಂಗಳವಾರ ೨೭, ಬುಧವಾರ ೧೬, ಗುರುವಾರ ೧೨, ಶುಕ್ರವಾರ ೧೦, ಶನಿವಾರ ೨೫ ದಿನಗಳ ನಂತರ ಗುಣವಾಗುವುದು. ಶಾಂತಿಗೆ-ಚಿತ್ರಮಣ್ಣಿನಿಂದ ನಾಲ್ಕು ಭುಜಗಳಲ್ಲಿ ಅಕ್ಷಸೂತ್ರಕಮಂಡುಲುಕಮಲಅಭಯಹಸ್ತ ಉಳ್ಳ ತ್ವಷ್ಟುಪ್ರತಿಮೆಯನ್ನು ಮಾಡಿ ಚಿತ್ರವಸ್ತ್ರ, ಚಿತ್ರಹೂವುಗಳಿಂದ ಪೂಜಿಸಿ ಮೋದಕ ನೈವೇದ್ಯಮಾಡಿ, <u>ಚಿತ್ರಂದೇವಾನಾಂ</u> ಎಂಬ ಮಂತ್ರದಿಂದ ೧೦೮ ಬಿಲ್ವಸಮಿತ್ತು ಚಿತ್ರಾನ್ನ ತುಪ್ಪಗಳಿಂದ ಅಹುತಿ



ಕೊಟ್ಟು. ಗಂಧ,ಹೂವು, ತುಪ್ಪ,ಚಿತ್ರಾನ್ನಗಳನ್ನು ದಕ್ಷಿಣದಿಕ್ಕು ಅಥವಾ ಪಶ್ಚಿಮಕ್ಕೆ ಬಲಿ ಹಾಕಲು ೧೧ ದಿನಗಳ ನಂತರ ಗುಣವಾಗುವುದು. ಆದಿವಾರ ನಂದಾತಿಥಿ ಬಂದರೆ ವರಯೋಗ, ಸೋಮವಾರ ವಿಷಯೋಗ, ಮಂಗಳವಾರ ನಾಶಯೋಗ, ಬುಧವಾರ ಯಮಘಂಟಯೋಗ, ಗುರುವಾರ ಮೃತ್ಯುಯೋಗ, ಶುಕ್ರವಾರ ಶುಭಯೋಗ, ಶನಿವಾರ ನಂದಯೋಗ, ರಿಕ್ತತಿಥಿಯಲ್ಲಿ ನಿರ್ಜೀವಯೋಗ ಪೂರ್ವಾಭಾದ್ರಪದನಕ್ಷತ್ರದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಉತ್ಪಾತವಾದರೆ ಧಾನ್ಯಕ್ಷೀರಾದಿಗಳ ಸಮೃದ್ಧಿಯು, ಪರಿವೇಷ-ಕಾಮನಬಿಲ್ಲು ಕಂಡರೆ ಸುವೃಷ್ಟಿಯು, ಸಂಕ್ರಮಣವಾದರೆ ಮಧ್ಯಾರ್ಘ. ಗಂಡಾದರೆ ಚಿತ್ರವಸ್ತ್ರಪ್ರಿಯ, ಪರೋಪಕಾರಿ, ಸಂಚಾರಪ್ರಿಯ, ಧನಿಕ, ಸುಖೀ, ಭೋಗಭಾಗ್ಯವಂತ, ಸ್ತ್ರೀಲೋಲ, ಎಲ್ಲವಿದ್ಯೆಗಳಲ್ಲಿ ಚತುರ, ಪ್ರಜಾದರಣ ಹೊಂದುವವ, ಸದಾಸಂತೋಷಿ, ಸತ್ಕರ್ಮಾಸಕ್ತನಾಗುವನು. ಹೆಣ್ಣಾದರೆ ಸುಂದರೀ, ಅಲಂಕಾರಪ್ರಿಯಳು, ತವರಿನ ಪ್ರೀತಿ ಹೊಂದುವವಳು, ಸುಖೀ ಆಗುವಳು. ೧ನೆ ಪಾದದಲ್ಲಿ ರೋಗ ಬಂದರೆ ೧ ದಿನ ಕ್ರೂರ, ೨ನೆ ಪಾದ ೯ ದಿನಗಳು ಕ್ರೂರ, ೩ನೆ ಪಾದ ೮ ದಿನಗಳು ಕ್ರೂರ, ೪ನೆ ಪಾದ ೧೬ ದಿನಗಳು ಕ್ರೂರ. ಕಳೆದ ವಸ್ತು ದೊರಕುವುದು ಕಷ್ಟ.

೧ನೆ ಪಾದ ರವಿ ಅಧಿಪತಿ ರಾಜಾಂಶ, ಉಗ್ರಸ್ವಭಾವ, ಸುಂದರ, ಪರಿಹಾಸ್ಯಸ್ವಭಾವಿ, ಚಪಲ, ಧರ್ಮಿಷ್ಟ, ಪುತ್ರವಂತ. ೨ನೆ ಪಾದ ಬುಧ ಅಧಿಪತಿ ನಪುಂಶಕಾಂಶ, ಬುದ್ಧಿವಂತ, ಸ್ತ್ರೀಪ್ರೇಮಿ,ಮೃದುವಾಕ್ಕು, ವಿದ್ಯಾವಿನೋದಾದಿಗಳಿಂದ ಕೂಡಿದವ, ಗಂಭೀರ. ೩ನೆ ಪಾದ ಶುಕ್ರ ಅಧಿಪತಿ ವಿಜಯಾಂಶ, ನಿರ್ಭಯಿ, ಯಶಸ್ವಿ, ಪರಾಕ್ರಮಿ, ಸುಶೀಲ, ಜನಪ್ರಿಯ, ಸುಖಿ. ೪ನೆ ಪಾದ ಕುಜ ಅಧಿಪತಿ, ದರಿದ್ರಾಂಶ, ಪರಾಕ್ರಮಿ, ಕಾರ್ಯಫಲಿಸುವುದಕ್ಕೆ ಬಂದಾಗ ಬಿಟ್ಟುಬಿಡುವಾತ, ದುರ್ಮಾರ್ಗಿ, ಸಾಹಸಿ, ಲೋಭಿ, ಸದಾರೋಗಿ, ಶತ್ರುಗಳಿಂದ ನಷ್ಟ ಹೊಂದುವವನು ಆಗುವನು. ೭ ಸಂವತ್ಸರಗಳು ಕುಜದಶ. ೧ನೆ ಸಂವತ್ಸರದಲ್ಲಿ ಶಿರಸ್ಫೋಟ-ವಾತಬಾಧೆ, ೫ ಅಶ್ವಗಂಡ, ೧೨ ವಾಹನಭಯ, ೧೬ ಜ್ವರ, ೨೦ ಜಲಗಂಡ, ೩೨ ಅಪಮೃತ್ಯು ಭಯ, ೫೦ ದೊಡ್ಡಕಂಟಕ, ೬೦ ಸರಕಾರದಿಂದ ಪ್ರತಿಕೂಲತೆ, ಇವೆಲ್ಲ ಪರಿಹಾರವಾದರೆ ೮೪ ಸಂವತ್ಸರಗಳು ಪರಮಾಯುವು.

ಸ್ವಾತಿ:-ಯಾವ ಪಾದದಲ್ಲಿ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭ.

ಸ್ವಾತಿ ನಕ್ಷತ್ರ ಕೆಂಬಣ್ಣದ್ದು, ಮಾಣಿಕ್ಯದಂತಹ ೧ ನಕ್ಷತ್ರ, ರುರೆರೊತ ನಾಲ್ಕು ಅಕ್ಷರಗಳು, ಸ್ತ್ರೀ ರೂಪ, ಶೂದ್ರಜಾತಿ, ದೇವಗಣ, ತಿರ್ಯಙ್ಮುಖ, ಸುಲೋಚನ, ಚರ, ವಾಯುಮಂಡಲ, ಶೂನ್ಯ ಸ್ಥಾನ, ಚತುಷ್ಪದ, ಅರ್ಜುನವೃಕ್ಷ, ಮಹಿಷಯೋನಿ, ತುಲಾರಾಶಿ,ಶುಕ್ರಗ್ರಹ,ಕಂಠರಜ್ಜು ಶೂದ್ರವರ್ಣ, ಅಂತ್ಯನಾಡಿ, ಆಂಗೀರಸ ಗೋತ್ರ, ಶೇನಪಕ್ಷಿ, ತೇಜಸ್ತತ್ವ,ಸ್ತ್ರೀಲಿಂಗ, ಯೋಗಿನಿ ಚಾಮುಂಡಿ, ಗಜಾಯ, ದೇವತಾ ವಾಯು, ಅಧಿದೇವತೆಗಳು ಇಂದ್ರಾಗ್ನೀ, ಪ್ರತ್ಯಧಿದೇವತಾ ತ್ವಷ್ಟು. ಈ ನಕ್ಷತ್ರದಲ್ಲಿ ನೃಸಿಂಹದೇವರು ಅವತರಿಸಿದರು. ೧೪ಘಟಿ ನಂತರ ವಿಷನಾಡಿ, ೩೮ ಘಟಿ ನಂತರ ಅಮೃತನಾಡಿ. ಯಾತ್ರಾವರ್ಜ್ಯ, ೧೪ ಘಟಿ ನಂತರ ನೆಲ್ಲಿಕಾಯಿತಿಂದು ಪಶ್ಚಿಮ ಇಲ್ಲವೆ ದಕ್ಷಿಣಕ್ಕೆ ಪ್ರಯಾಣ ಶುಭಕರ. ನಿಷೇಕ, ನಾಮಕರಣ, ಅನ್ನಪ್ರಾಶನ, ಚೌಲ, ಕರ್ಣವೇಧ,

ವಿದ್ಯಾರಂಭ, ಉಪನಯನ, ವೇದಶಾಸ್ತ್ರಾಭ್ಯಾಸ,ವೇದವ್ರತ, ಸ್ನಾತಕ, ನವವಧೂಪ್ರವೇಶ, ನವವಸ್ತ್ರಾಭರಣ ಧರಿಸುವಿಕೆ, ನೂತನ ವಾಹನಾರೋಹಣ, ಸಂಗೀತ ನೃತ್ಯ ವಿವಿಧವಾದ್ಯಾಭ್ಯಾಸ, ಶಿಲ್ಪ, ವಾಸ್ತುಗಳಿಗೆ ಶುಭ, ಕ್ರೀಡ, ದೇವತಾದರ್ಶನ, ರಾಜದರ್ಶನ, ಪಟ್ಟಾಭಿಷೇಕ, ಭೂಪ್ರಾಪ್ತಿ, ಕ್ಷೌರಕರ್ಮ, ತೈಲಾಭ್ಯಂಗ, ನೂತನಾಭರಣಗಳ ಮಾಡಿಸುವುದು– ಧರಿಸುವಿಕೆ, ನೂತನವಾಹನ, ಕೃಷಿ ಪ್ರಾರಂಭ, ಬೀಜಬಿತ್ತನೆ, ವೈದ್ಯಕ ಮೊದಲಾದ ಶುಭಕಾರ್ಯಗಳಿಗೆ ಪ್ರಶಸ್ತವು, ಈ ನಕ್ಷತ್ರದಲ್ಲಿ ಪ್ರಥಮರಜಸ್ವಲೆಯಾದರೆ ಒಳ್ಳೆಯಮಾರ್ಗದಲ್ಲಿ ನೆಡೆಯುವಿಕೆ, ಸೌಭಾಗ್ಯವತಿ, ಪುತ್ರಧಾನ್ಯಾದಿ ಸಂಪತ್ತುವುಳ್ಳವಳು ಆಗುವಳು.

ಈ ನಕ್ಷತ್ರ ೪ನೆ ಪಾದ ಮೃತ್ಯುಯೋಗವುಳ್ಳದ್ದು, ಜ್ವರ ಬಂದರೆ ಪ್ರಾಣಭಯ ೧ ತಿಂಗಳು ಅರಿಷ್ಟ. ಆದಿವಾರ ರೋಗ ಬಂದರೆ ೨೦ ದಿನಗಳು, ಸೋಮವಾರ ೧೨, ಮಂಗಳವಾರ ೧೮, ಬುಧವಾರ ೮, ಗುರುವಾರ ೧೬, ಶುಕ್ರವಾರ ೩೦, ಶನಿವಾರ ೩೪ ದಿನಗಳ ನಂತರ ಗುಣವು. ಶಾಂತಿಗೆ– ಕೃಷ್ಣಮೃಗದ ಮೇಲೆ ೨ ಭುಜಗಳಲ್ಲಿ ಖಡ್ಗಚರ್ಮಗಳುಳ್ಳ ವಾಯುಪ್ರತಿಮೆಯನ್ನು ಮಾಡಿ ಕಪ್ಪುವಸ್ತ್ರ, ಹೂವುಗಳಿಂದ ಪೂಜಿಸಿ, ಮೊಸರನ್ನ ನೈವೇದ್ಯಮಾಡಿ, ತವವಾಯು ಎಂಬ ಮಂತ್ರದಿಂದ ೧೦೮ ತುಪ್ಪ ಅರಳುಗಳಿಂದ ಅಹುತಿ ಹಾಕಿ, ಗಂಧ,ಹೂವು, ಮೊಸರನ್ನ ವಾಯುದಿಕ್ಕಿಗೆ ಬಲಿ ಹಾಕಲು ೧ ತಿಂಗಳಲ್ಲಿ ಗುಣವು. ಆದಿವಾರ ಮೃತ್ಯುಯೋಗ, ಸೋಮವಾರ ಸಿದ್ಧಿಯೋಗ, ಮಂಗಳವಾರ ಆನಂದಯೋಗ, ನಂದತಿಥಿಯೋಗವಾದರೆ ವರಯೋಗ, ಬುಧವಾರ ಅಮೃತಸಿದ್ಧಿಯೋಗ, ಗುರುವಾರ ಅಮೃತಯೋಗ, ಶುಕ್ರವಾರ ಯಮಕಂಟಕಯೋಗ, ಶನಿವಾರ ಅಮೃತಸಿದ್ಧಿ ಯೋಗ, ಶತಭಿಷದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಉತ್ಪಾತವಾದರೆ ವಾತಪೈತ್ಯಕ್ಷುದ್ಬಾಧಿಭಯ, ಸಂಕ್ರಮಣವಾದರೆ ಮಧ್ಯಾರ್ಘವು, ಗಂಡಾದರೆ ದಾನಶೀಲ, ಸೌಶೀಲ್ಯಾದಿ ಸುಗುಣವಂತ, ವಿಶಾಲಾಕ್ಷ, ಸುಹೃದಯಿ, ವಿಖ್ಯಾತ, ಬಹುಭೋಗಭಾಗ್ಯವಂತ, ಮಾನ್ಯವಂತ, ದೇವಬ್ರಾಹ್ಮಣಗುರು ಪೂಜಾಸಕ್ತ, ಬಂಧುಪ್ರಿಯ, ಅಲ್ಪೋದರ, ಬುದ್ಧಿವಂತ ಆಗುವನು. ಹೆಣ್ಣಾದರೆ ಚತುರೆ, ಸತ್ಯವಾದಿ, ಒಳ್ಳೆಯಮಕ್ಕಳು, ಶತ್ರುಜಯ ವುಳ್ಳವಳು ಆಗುವಳು. ಸ್ವಾತಿ ೧ನೆ ಪಾದದಲ್ಲಿ ರೋಗ ಬಂದರೆ ೧೭ ದಿನಗಳು ಕ್ರೂರ, ೨ನೆ ಪಾದ ೩ ದಿನಗಳು ಕ್ರೂರ, ೩ನೆ ಪಾದ ೫ ದಿನಗಳು ಕ್ರೂರ, ೪ನೆ ಪಾದ ೫ ದಿನಗಳು ಕ್ರೂರ. ಕಳೆದ ವಸ್ತು ಸಿಗುವುದು ಕಷ್ಟ.

೧ನೆ ಪಾದ ಗುರು ಅಧಿಪತಿ ಉತ್ಪನ್ನಾಂಶ,ಧೀರ, ಸರ್ವಜ್ಞ, ವಾಗ್ಮಿ,ಸುಂದರ, ಸೂಕ್ಷ್ಮಕಾಯ, ಬಲಿಷ್ಟ, ಎಲ್ಲಾಕಾರ್ಯಗಳಲ್ಲಿ ನಿಪುಣ, ಜನಪ್ರಿಯ. ೨ನೆ ಪಾದ ಶನಿ ಅಧಿಪತಿ, ಶತ್ರುದ್ವೇಷಿ, ಮೂರ್ಖ, ಕೋಪಿ, ದುಷ್ಟನೀತಿವುಳ್ಳವ, ಅಸತ್ಯವಾಕ್ಕು, ದುಷ್ಟ, ಬಂಧುವರ್ಜಿತ, ಧರ್ಮವರ್ಜಿತ, ಉಪಕಾರ ಸ್ಮರಣೆ ಇಲ್ಲದವ, ಕೃಪಣ, ಉತ್ತಮಅಧಿಕಾರಿ, ಸುಂದರ. ೩ನೆ ಪಾದ ಶನಿ ಅಧಿಪತಿ ಉಗ್ರಾಂಶ, ಶತ್ರುದ್ವೇಷಿ, ಮೂರ್ಖ, ಕೋಪಿ, ಅಧಿಕಖರ್ಚಿಕ, ಕೃಷಿಯಲ್ಲಿ ಆಸಕ್ತ, ಭೋಗಿ, ಬಂದುವರ್ಜಿತ, ಯಾವಾಗಲೂ ಯಾವುದೋ ಚಿಂತೆಯಿಂದ ಕಾರ್ಯವನ್ನು ಬಿಡುವಾತ. ೪ನೆ ಪಾದ ಗುರು ಅಧಿಪತಿ, ಉತ್ಕೃಷ್ಟಾಂಶ, ಸರ್ವಜನಪ್ರಿಯ, ರೋಷವುಳ್ಳವ,



ಗುರುದೇವತಾ ಪೂಜಾರತ, ಧನಿಕ, ಹೆಂಡತಿಮಕ್ಕಳಿಂದ ಕೂಡಿದವ, ಶಾಸ್ತ್ರಜ್ಞ, ಎಲ್ಲಾಕಾರ್ಯಗಳಲ್ಲಿ ನಿಪುಣ, ಬಂಧುಪ್ರಿಯ ಮಾನಿ, ಸುಖೀ ಆಗುವನು. ೧೮ ಸಂವತ್ಸರಗಳು ರಾಹುದಶ. ೧ನೆ ಸಂವತ್ಸರದಲ್ಲಿ ಗ್ರಹ–ವಾತಬಾಧೆ, ೩ ಚತುಷ್ಪಾತ್ ಭಯ ಇಲ್ಲವೆ ಗಂಡ, ಹೊಟ್ಟೆನೋವು, ೧೦ ಮಹಾವ್ಯಾಧಿಭಯ, ೧೨ ಸರ್ಪಭಯ, ೧೬ ಜಲಗಂಡ, ೨೦ ಮರದಿಂದ ಬೀಳುವಿಕೆ, ೩೦ ಸ್ಥಾನನಾಶ, ೫೦ ಪುತ್ರನಿಂದ ಕಂಟಕ, ೫೬ ಜ್ವರಸ್ಫೋಟಕಾದಿಭಯ, ೬೦ ಸ್ವಜನಾರಿಷ್ಟ ಇವೆಲ್ಲ ಪರಿಹಾರವಾದರೆ ೮೪ ಸಂವತ್ಸರಗಳು ಪರಮಾಯು.

**ವಿಶಾಖಾ:**–ಈ ನಕ್ಷತ್ರದ ಯಾವ ಪಾದದಲ್ಲಿಎಂತಹ ಮಗು ಹುಟ್ಟಿದರೂ ಸಾಮಾನ್ಯದೋಷ. ಅದಕ್ಕೆ ಸಾಮಾನ್ಯದೋಷಪ್ರಯುಕ್ತ ತೈಲದಲ್ಲಿ ಮಂತ್ರಸಹಿತವಾಗಿ ಶಿಶುಮುಖದರ್ಶನ ಶುಭಕರ. ನಕ್ಷತ್ರ ಕೆಂಬಣ್ಣದ್ದು, ಚಕ್ರಾಕಾರದ ೫ ನಕ್ಷತ್ರ, ತಿತುತೆತೊ ನಾಲ್ಕು ಅಕ್ಷರಗಳು, ಪುಂ ರೂಪ, ಕ್ಷತ್ರಿಯಜಾತಿ, ರಾಕ್ಷಸಗಣ, ಅಧೋಮುಖ, ಅಂಧಲೋಚನ, ಸಾಧಾರಣ, ಅಗ್ನಿಮಂಡಲ, ಶೂನ್ಯ ಸ್ಥಾನ, ತ್ರಿಪಾದಿ, ವಿಕಂಕತವೃಕ್ಷ, ವ್ಯಾಘ್ರಯೋನಿ, ೩ಪಾದಗಳು ತುಲಾರಾಶಿ, ಶುಕ್ರಗ್ರಹ, ಶೂದ್ರವರ್ಣ, ೪ನೆ ಪಾದ ವೃಶ್ಚಿಕ, ಕುಜ ಅಧಿಪತಿ, ಬ್ರಾಹ್ಮಣವರ್ಣ, ಕಂಠರಜ್ಜು, ಅಂತ್ಯನಾಡಿ, ಆಂಗೀರಸ ಗೋತ್ರ, ಕಾರಂಡಪಕ್ಷಿ, ತೇಜಸ್ತತ್ವ,ಸ್ತ್ರೀಲಿಂಗ, ಈಶಾನ್ಯ ದಿಕ್ಕು, ಯೋಗಿನಿ ಮಾಹೇಶ್ವರಿ, ಕಾಕಾಯ, ದೇವತಾ ಇಂದ್ರಾಗ್ನೀ, ಅಧಿದೇವತಾ ಮಿತ್ರ, ಪ್ರತ್ಯಧಿದೇವತಾ ವಾಯು. ೧೪ಘಟಿ ನಂತರ ವಿಷನಾಡಿ, ೩೮ ಘಟಿ ನಂತರ ಅಮೃತನಾಡಿ. ಯಾತ್ರಾವರ್ಜ್ಯ, ೨೦ಘಟೀ ನಂತರ ಅರಳಿಟ್ಟು ತಿಂದು ಪೂರ್ವ ಇಲ್ಲವೆ ಉತ್ತರಕ್ಕೆ ಪ್ರಯಾಣ ಶುಭ. ಕೃಷಿ, ಬೀಜಬಿತ್ತುವಿಕೆ, ನಿಕ್ಷೇಪ, ಕೂಪ, ತಟಾಕ,ಬೋರು, ಶಿಲ್ಪ, ಆಭರಣಗಳ ಮಾಡಿಸುವಿಕೆ, ರಸಯೋಗ, ಯಂತ್ರಸ್ಥಾಪನ,ಮಂತ್ರಾರಂಭ, ಚಿಕಿತ್ಸಾ, ಯಜ್ಞಾದಿಗಳಿಗೆ ಶುಭಕರ. ಈ ನಕ್ಷತ್ರದಲ್ಲಿ ಪ್ರಥಮರಜಸ್ವಲೆಯಾದರೆ ಸೌಭಾಗ್ಯವತಿ, ಒಳ್ಳೆಮಕ್ಕಳು ಉಳ್ಳವಳು ಆಗುವಳು.

ಈ ನಕ್ಷತ್ರದಲ್ಲಿ ಭಾನು, ಶನಿ, ಮಂಗಳವಾರಗಳಲ್ಲಿ, ಪಾಡ್ಯ, ಚೌತಿ, ಷಷ್ಟೀ, ದ್ವಾದಶೀಕೂಡಿದಾಗ ಜ್ವರಾರಂಭವಾದರೆ ಪ್ರಾಣಭಯ ಇಲ್ಲವೆ ಪಂಚದಿನಾರಿಷ್ಟ, ಆದಿವಾರ ರೋಗ ಬಂದರೆ ೧೨ ದಿನಗಳು, ಸೋಮವಾರ ೫, ಮಂಗಳವಾರ ೧೪, ಬುಧವಾರ ೮, ಗುರುವಾರ ೬, ಶುಕ್ರವಾರ ೯, ಶನಿವಾರ ೫ ದಿನಗಳ ನಂತರ ಗುಣವಾಗುವುದು. ಶಾಂತಿಗೆ– ಕೆಂಬಣ್ಣದ ಗಜವಾಹನದ ಮೇಲೆ ನಾಲ್ಕುಭುಜಗಳಲ್ಲಿ ಪಾಶಾಂಕುಶಖಡ್ಗಚರ್ಮ ಉಳ್ಳ ಪ್ರತಿಮೆಯನ್ನು ಮಾಡಿ ಕೆಂಪುವಸ್ತ್ರ, ಹೂವುಗಳಿಂದ ಪೂಜಿಸಿ ಪಾಯಸ ನೈವೇದ್ಯಮಾಡಿ, ಅಯಿಂದ್ರಾಗ್ನೀ ಎಂಬ ಮಂತ್ರದಿಂದ ೧೦೮ ತುಪ್ಪಪಾಯಸ ಖಾದಿರಸಮಿಧಗಳ ಅಹುತಿ ಕೊಟ್ಟು ಗಂಧ,ಹೂವು, ಅಪೂಪಪಾಯಸಗಳನ್ನು ಉತ್ತರಕ್ಕೆ ಬಲಿ ಹಾಕಿದರೆ ೧೫ ದಿನಗಳಲ್ಲಿ ಗುಣವು. ಆದಿವಾರ ಉತ್ಪಾತಯೋಗ, ಸೋಮವಾರ ವರಯೋಗ,ಸೋಮವಾರ ಏಕಾದಶಿ ಬಂದರೆ ಪುಷ್ಕರಯೋಗ, ಮತ್ತು ಯಮಕಂಟಕಯೋಗ, ಮಂಗಳವಾರ ಸಿದ್ಧಯೋಗ, ಬುಧವಾರ ನಾಶಯೋಗ, ಗುರುವಾರ ಆನಂದಯೋಗ, ಶುಕ್ರವಾರ ಮೃತ್ಯುಯೋಗ, ಶನಿವಾರ ವಿಷಯೋಗ, ರಿಕ್ತಾಯೋಗಕೂಡಿದರೆ

ನಿರ್ಜೀವಯೋಗ, ಈ ನಕ್ಷತ್ರದ ೪ನೆ ಪಾದದಲ್ಲಿ ಕರ್ಕಲಗ್ನ ಬಂದರೆ ಅವಯೋಗ, ಮಾರ್ಗಶಿರಮಾಸದಲ್ಲಿ ಈ ಯೋಗವಿರದು. ಕೃತ್ತಿಕಾದಲ್ಲಿ ಕ್ರೂರಗ್ರಹವಿದ್ದರೆ ಮಹಾಶೂಲಯೋಗ, ಈ ನಕ್ಷತ್ರದಲ್ಲಿ ಹಾವುಕಡಿದರೆ ಮರಣವಾಗುವುದು. ಉತ್ಪಾತವಾದರೆ ದುರ್ಭಿಕ್ಷ, ಮತ್ತು ಕಲಹ. ಸಂಕ್ರಮಣವಾದರೆ ಮಧ್ಯಾರ್ಘ. ಹೆಣ್ಣು ಅವಳಿ ಹುಟ್ಟಲು ತಾಯಿಗೆ ಅರಿಷ್ಟ, ಗಂಡು ಅವಳಿ ಹುಟ್ಟಲು ತಂದೆಗೆ ಅರಿಷ್ಟ. ಗಂಡಾದರೆ ಸೂಕ್ಷ್ಮಬುದ್ಧಿ ಅಸೂಯಾಪರ, ಇಂದ್ರಿಯಜಯಿ, ಧನಿಕ,ದಯಾಳು,ದಾನಶೀಲ, ಸೌಶೀಲ್ಯಾದಿ ಸುಗುಣವಂತ, ವಿಶಾಲಾಕ್ಷ, ಸುಹೃದಯಿ, ವಿಖ್ಯಾತ, ಬಹುಭೋಗಭಾಗ್ಯವಂತ, ಮಾನ್ಯವಂತ, ದೇವಬ್ರಾಹ್ಮಣಗುರು ಪೂಜಾಸಕ್ತ, ಬಂದುಪ್ರಿಯ, ಅಲ್ಪೋದರ, ಬುದ್ಧಿವಂತ ಆಗುವನು. ಹೆಣ್ಣಾದರೆ ಕೋಮಲಶರೀರಿ, ಮಿತ್ರೆಯಲ್ಲಿ ಅಭಿಮಾನಿ, ವಿಶೇಷ ತೀರ್ಥಯಾತ್ರಾ ಸಕ್ತೆ, ಧನವತಿ, ಬಂಧುಪ್ರೇಮಿ ಅಗುವಳು. ಚತುರೆ, ಸತ್ಯವಾದಿ, ಒಳ್ಳೆ ಮಕ್ಕಳುಳ್ಳವಳು, ಶತ್ರುಜಯ ಉಳ್ಳವಳಾಗುವಳು. ವಿಶಾಖಾ ೧ನೆ ಪಾದದಲ್ಲಿ ರೋಗ ಬಂದರೆ ೧೫ ದಿನಗಳು ಕ್ರೂರ, ೨ನೆ ಪಾದ ೪ ದಿನಗಳು ಕ್ರೂರ, ೩ನೆ ಪಾದ ೧೩ ದಿನಗಳು ಕ್ರೂರ, ೪ ನೆ ಪಾದ ೧೧ ದಿನಗಳು ಕ್ರೂರ. ಕಳೆದ ವಸ್ತು ಬೇಗಸಿವುದು.

೧ನೆ ಪಾದ ಗುರು ಅಧಿಪತಿ ಉತ್ಪನ್ನಾಂಶ, ಧೀರ, ಸರ್ವಜ್ಞ, ವಾಗ್ಮಿ, ಸುಂದರ, ಸೂಕ್ಷ್ಮಕಾಯ, ಬಲಿಷ್ಟ, ಸಮಸ್ತಕಾರ್ಯ ನಿಪುಣ, ಜನಪ್ರಿಯ. ೨ನೆ ಪಾದ ಶನಿ ಅಧಿಪತಿ ಶತ್ರುದ್ವೇಷಿ, ಮೂರ್ಖ, ಕೋಪಿ, ದುಷ್ಟನೀತಿ ಉಳ್ಳವ, ಅಸತ್ಯವಾಕ್ಕು, ದುಷ್ಟ, ಬಂದುವರ್ಜಿತ, ಧರ್ಮವರ್ಜಿತ, ಉಪಕಾರ ಸ್ಮರಣೆ ಇಲ್ಲದವ, ಕೃಪಣ, ಒಳ್ಳೆಅಧಿಕಾರಿ, ಸುಂದರ. ೩ನೆ ಪಾದ ಶನಿ ಅಧಿಪತಿ ಉಗ್ರಾಂಶ, ಶತ್ರುದ್ವೇಷಿ, ಮೂರ್ಖ, ಕೋಪಿ, ಖರ್ಚಿಕ, ಕೃಷಿಯಲ್ಲಿ ಆಸಕ್ತ, ಭೋಗಿ, ಬಂದುವರ್ಜಿತ, ಸದಾ ಯಾವುದೋ ಚಿಂತೆಯಿಂದ ಕಾರ್ಯ ಬಿಡುವಾತ. ೪ನೆ ಪಾದ ಗುರು ಅಧಿಪತಿ, ಉತ್ಕೃಷ್ಟಾಂಶ, ಸರ್ವಜನಪ್ರಿಯ, ರೋಷವಂತ, ಗುರುದೇವತಾ ಪೂಜಾರತ, ಧನಿಕ, ಹೆಂಡತಿಮಕ್ಕಳಿಂದ ಕೂಡಿದವ, ಶಾಸ್ತ್ರಜ್ಞ, ಸಮಸ್ತಕಾರ್ಯ ತಿಳಿದವ, ಬಂಧುಪ್ರಿಯ, ಮಾನಿ, ಸುಖೀ ಆಗುವನು. ೧೮ ಸಂವತ್ಸರಗಳು ರಾಹುದಶ. ೧ಸಂವತ್ಸರದಲ್ಲಿ ಗ್ರಹ–ವಾತಬಾಧ, ೩ ಚತುಷ್ಪಾತ್ ಭಯ ಇಲ್ಲವೆ ಗಂಡ, ಹೊಟ್ಟೆನೋವು, ೧೦ ಮಹಾವ್ಯಾಧಿಭಯ, ೧೭ ಸರ್ಪಭಯ, ೧೯ ಜಲಗಂಡ, ೨೦ ಮರದಿಂದ ಬೀಳುವಿಕೆ, ೩೦ ಸ್ಥಾನನಾಶ, ೫೦ ಮಗನಿಂದ ಕಂಟಕ, ೫೯ ಜ್ವರಸ್ಫೋಟಕಾದಿಭಯ, ೬೦ ಸ್ವಜನಾರಿಷ್ಟ ಇವೆಲ್ಲ ಪರಿಹಾರವಾದರೆ ೮೪ ಸಂವತ್ಸಗಳು ಪರಮಾಯು.

**ಅನೂರಾಧ:**–ಯಾವ ಪಾದದಲ್ಲಿ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭ. ಈ ನಕ್ಷತ್ರ ಬಿಳೀಬಣ್ಣದ್ದು, ಛತ್ರಾಕಾರದ ೩ ನಕ್ಷತ್ರ, ನನಿನುನೆ ನಾಲ್ಕು ಅಕ್ಷರಗಳು, ಪುಂರೂಪ, ಶೂದ್ರಜಾತಿ, ದೇವಗಣ, ತಿರ್ಯಙ್ಮುಖ, ಮಂದಲೋಚನ,ಮೃದು,ಇಂದ್ರಮಂಡಲ, ಪಟ್ಟಣಸ್ಥಾನ, ಚತುಷ್ಪಾತ್, ವಕುಲವೃಕ್ಷ, ಜಿಂಕೆಯೋನಿ, ಅಂಗಾರಕಾಧಿಪತ್ಯ ವೃಶ್ಚಿಕರಾಶಿ, ಬ್ರಾಹ್ಮಣವರ್ಣ, ಮಧ್ಯನಾಡಿ, ಪುಲಸ್ತ್ಯಗೋತ್ರ, ಗೂಗೆಪಕ್ಷಿ, ತೇಜಸ್ತತ್ವ, ಯೋಗಿನಿ ಬ್ರಾಹ್ಮೀ,ಇಂದ್ರದಿಕ್, ಧ್ವಜಾಯ,



ದೇವತಾ ಮಿತ್ರ, ಅಧಿದೇವತಾ ಇಂದ್ರ, ಪ್ರತ್ಯಧಿದೇವತೆಗಳು ಇಂದ್ರಾಗ್ನೀ. ೧೦ಘಟಿ ನಂತರ ವಿಷನಾಡಿ, ೩೪ ಘಟಿ ನಂತರ ಅಮೃತನಾಡಿ. ಹುರುಳಿ ತಿಂದು ಪ್ರಯಾಣ ಶುಭ. ಪ್ರಥಮರಜೋದಶನದಿಂದ ಪುತ್ರವತಿ,ಸೌಭಾಗ್ಯವತಿ ಆಗುವಳು. ವಿಚಿತ್ರವಾದ ಕಾರ್ಯಗಳು, ಕನಕರತ್ನ ಪರಿಕ್ಷಾ, ವಿಚಿತ್ರವಾಹನಗಳ ಕ್ರಯವಿಕ್ರಯ, ಆರೋಹಣ, ಯಾತ್ರಾ ವಿವಾಹಾದಿಗಳು, ಮಂತ್ರೌಷಧಿ ಪ್ರಯೋಗಗಳು, ನೇತ್ರಾಂಜನಗಳಿಗೆ ಒಳ್ಳೆಯದು. ನಿಷೇಕ, ಪುಂಸವನ, ಸೀಮಂತ, ನಾಮಕರಣ, ಅನ್ನಪ್ರಾಶನ, ಕರ್ಣವೇಧ, ಚೌಲ, ಉಪನಯನ, ವೇದ ಶಾಸ್ತ್ರಾಭ್ಯಾಸ, ವಿವಾಹ, ತೈಲಾಭ್ಯಂಗ, ನೂತನವಸ್ತ್ರಾಭರಣಧಾರಣ, ರಾಜ್ಯಾಭಿಷೇಕ, ಗೃಹಾರಂಭ, ಶಂಕುಸ್ಥಾಪನ, ಗ್ರಾಮಗೃಹಪ್ರವೇಶ, ನೃತ್ಯ–ಗೀತ–ವಾದ್ಯಗಳು, ಮಂತ್ರ,ಯಂತ್ರಗಳು, ಗುರು–ದೊಡ್ಡ ಅಧಿಕಾರಿಗಳ ಬೇಟಿ, ಶಿಲ್ಪಶಾಸ್ತ್ರಾಭ್ಯಾಸ, ಪಶುಕ್ರಯವಿಕ್ರಯಗಳು, ಕೃಷ್ಯಾದಿಗಳಿಗೆ ಶುಭ.

ತದಿಗೆದಿನ ಈ ನಕ್ಷತ್ರ ಇದ್ದರೆ ಜ್ವಾಲಾಮುಖೀಯೋಗ, ರಿಕ್ತಾಇದ್ದರೆ ನಿರ್ಜೀವಯೋಗ. ಈ ನಕ್ಷತ್ರದಲ್ಲಿ ರೋಗಬಂದರೆ ಪ್ರಾಣಭಯ ೩೦ ದಿನಗಳು ಅರಿಷ್ಟ. ಆದಿವಾರ ರೋಗಬಂದರೆ ೩೦ ದಿನಗಳು, ಸೋಮವಾರ ೧೦, ಮಂಗಳವಾರ ೧೮, ಬುಧವಾರ ೧೭, ಗುರುವಾರ ೨೦, ಶುಕ್ರವಾರ ೧೯, ಶನಿವಾರ ೨೫ ದಿನಗಳ ನಂತರ ಗುಣವು. ಶಾಂತಿಗೆ– ಕೆಮ್ಮಣ್ಣಿನಿಂದ ನಾಲ್ಕು ಭುಜಗಳಲ್ಲಿ ಕಮಲಅಭಯವುಳ್ಳ ಮಿತ್ರಪ್ರತಿಮೆಯನ್ನು ಮಾಡಿ ಕೆಂಪುವಸ್ತ್ರ, ಹೂವುಗಳಿಂದ ಪೂಜಿಸಿ ಎಳ್ಳನ್ನ ನೈವೇದ್ಯಮಾಡಿ, ದೇವಸ್ಯತ್ವಾ ಎಂಬ ಮಂತ್ರದಿಂದ ೧೦೮ ತುಪ್ಪಎಳ್ಳುಚರುಗಳ ಅಹುತಿ ಕೊಟ್ಟು, ಗಂಧ,ಹೂವು, ತುಪ್ಪ,ಎಳ್ಳಅನ್ನ ಉತ್ತರದಿಕ್ಕಿಗೆ ಬಲಿ ಕೊಟ್ಟು ಕೆಂದಾಕಳನ್ನು ದಾನಕೊಟ್ಟರೆ ಒಂದು ತಿಂಗಳ ನಂತರ ಗುಣವು. ಆದಿವಾರ ಮೃತ್ಯುಯೋಗ, ಸೋಮವಾರ ದಗ್ಧಯೋಗ, ಮಂಗಳವಾರ ಯಮಕಂಟಕಯೋಗ, ಬುಧವಾರ ಅಮೃತಸಿದ್ಧಿಯೋಗ, ಅಷ್ಟಮೀಬುಧವಾರ ಮೃತ್ಯುಯೋಗ, ಗುರುವಾರ ವರಯೋಗಯೋಗ, ಶುಕ್ರವಾರ ರಂಧ್ರಯೋಗ, ಶನಿವಾರ ಸಿದ್ಧಿಯೋಗ, ಈ ನಕ್ಷತ್ರದ ಅಂತ್ಯಪಾದ ಮೃತ್ಯುಯೋಗ, ತ್ರಯೋದಶಿಯಲ್ಲಿದ್ದರೆ ಉಗ್ರಯೋಗ, ಭದ್ರತಿಥಿಯಲ್ಲಿ ನಿರ್ಜೀವಯೋಗ, ಆಶ್ಲೇಷಾದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಮಾರ್ಗಶಿರದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ರಾಜರಿಗೆ ಅರಿಷ್ಟ, ಸಂಕ್ರಮಣವಾದರೆ ಮಧ್ಯಾರ್ಘವು. ಗಂಡಾದರೆ ಧರ್ಮಾತ್ಮ, ಕಾರ್ಯಾಕಾರ್ಯವಿಚಕ್ಷಣ, ನರ್ತನಪ್ರಿಯ, ಸುಂದರ, ಪರೋಪಕಾರಿ, ಭ್ರಾತೃಪ್ರೇಮಿ, ವ್ಯಾಪಾರನಿಪುಣ, ಚಪಲಚಿತ್ತ, ಅಲಸಿ, ಸಂಪನ್ನ, ಸ್ನೇಹಿ, ಒಳ್ಳೆಜ್ಞಾಪಕಶಕ್ತಿವುಳ್ಳವ, ಸ್ಥಿರಧನಶಾಲಿ, ಸಂಚಾರಪ್ರಿಯ, ಅಲ್ಪಸಂತಾನಿ, ದಾನಿ, ಕೀರ್ತಿಶಾಲಿ, ಪ್ರಭುತ್ವಮಾನ್ಯ, ಜನಮಾನ್ಯಆಗುವನು. ಹೆಣ್ಣಾದರೆ ಉತ್ತಮಸಂತಾನ ಹೊಂದುವಳು, ಧನವತಿ,ಶತೃಜಯವುಳ್ಳವಳು ಆಗುವಳು. ಅನೂರಾಧ ೧ನೆ ಪಾದದಲ್ಲಿ ರೋಗಬಂದರೆ ಅಸಾಧ್ಯವು, ೨ನೆ ಪಾದ ೭ ದಿನಕ್ರೂರ, ೩ನೆ ಪಾದ ೨೨ ದಿನಕ್ರೂರ, ೪ನೆ ಪಾದ ೬೦ ದಿನಕ್ರೂರ. ಕಳೆದ ವಸ್ತು ೩ ದಿನಗಳಲ್ಲಿ ಸಿಗುವುದು.

೧ನೆ ಪಾದ ರವಿ ಅಧಿಪತಿ ರಾಜಾಂಶ, ವಾಗ್ಮಿ,ಸಂಪನ್ನ, ವಿನೀತ, ಸದಾಮಂತ್ರಶೀಲ,

ಉಪಕಾರ ಸ್ಮಣೆಯಿಲ್ಲದವ, ಲೋಭಿ, ಸುಳ್ಳ, ದುಷ್ಟ, ಬಂಧುಗಳಿಂದ ಬಿಡಲ್ಪಟ್ಟವ. ೨ನೆ ಪಾದ ಬುಧ ಅಧಿಪತಿ ನಪುಂಶಕಾಂಶ, ವೀಣಾಗಾನಪ್ರಿಯ, ಕೃಷಿಕ,ಬುದ್ಧಿವಂತ, ಮಹಾಭೋಗಿ, ವಿದ್ವಾಂಸ, ಸುಸಂತಾನಿ, ಕೀರ್ತಿಶಾಲಿ. ೩ನೆ ಪಾದ ಶುಕ್ರ ಅಧಿಪತಿ ಅಭಯಾಂಶ, ಸ್ಥಿರಧನ, ಉತ್ತಮಭಾರ್ಯ, ಉಪಕಾರಿ, ದಯವಾನ್, ಮಿತ್ರವಂತ, ದಾನ–ಧರ್ಮಪರ, ಸದಾಸೌಖ್ಯವುಳ್ಳವ, ಸುಸಂತಾನಿ, ಶಾಂತಸ್ವಭಾವಿ, ೪ನೆ ಪಾದ ಕುಜ ಅಧಿಪತಿ, ನೀಚಾಂಶ, ದರಿದ್ರ, ದುಷ್ಪ್ರವೃತ್ತಿವುಳ್ಳವ, ದ್ರೋಹಿ, ಸದಾದುಃಖಿ, ಅಸತ್ಯವಾಕ್ಕು, ಶತ್ರುಗಳು ಉಳ್ಳವ, ಬಂಧುದ್ವೇಷಿ, ಕೃಷಿನಿರತ ಆಗುವನು. ೧೯ಸಂವತ್ಸರಗಳು ಶನಿದಶ. ೧ನೆ ತಿಂಗಳಲ್ಲಿ ಶೀತವಾತಾದಿ ಬಾಧ, ೧೦–೧೨ ತಿಂಗಳಲ್ಲಿ ತಾಯಿಗೆ ತಾಯಿಸಂಬಂಧಿಗಳಿಗೆ ಅರಿಷ್ಟ, ೨ನೆ ಸಂವತ್ಸರದಲ್ಲಿ ಗ್ರಹಬಾಧೆ, ೫ ಜ್ವರಬಾಧೆ, ೭ ಚತುಷ್ಪದಜಂತುಬಾಧೆ, ೧೦ ಕುಕ್ಷಿರೋಗ, ೧೬ ಕಲ್ಲುಬೀಳುವಿಕೆ, ೨೦ಸಹೋದರರಿಂದ ಹಾನಿ, ೨೪ ಜಲಗಂಡ, ೩೦ ಸರ್ಪಾದಿ ವಿಷಜಂತುಭಯ, ೩೬ ಸ್ಥಾನನಾಶ, ೪೮ ವ್ಯಾಘ್ರಚೋರಾದಿಭಯ, ೬೪ ಸಹೋದರವರ್ಗ ಮರಣದಿಂದ ಬುದ್ಧಿವೈಕಲ್ಯ, ೭೦ ಪಿತ್ತ–ಗುಲ್ಮಭಯ, ಇವೆಲ್ಲ ಪರಿಹಾರವಾದರೆ ೮೦ ಸಂವತ್ಸರಗಳು ಪರಮಾಯುಷ್ಯವು.

**ಜ್ಯೇಷ್ಠ:–**ಯಾವ ಪಾದದಲ್ಲಿ ಎಂತಹ ಶಿಶುಜನಿಸಿದರೂ ಪ್ರಬಲದೋಷವು. ಅದಕ್ಕೆ ಗೋಮುಖಪ್ರಸವಶಾಂತಿ, ಏಕಾದಶವಾರ ರುದ್ರಾಭಿಷೇಕ, ಧನ್ವಂತರಿಜಪ, ಮೃತ್ಯುಂಜಯಜಪ, ನಕ್ಷತ್ರಜಪ, ನವಗ್ರಹಜಪ, ಹೋಮ–ಸುವರ್ಣದಾನಗಳನ್ನು ಮಾಡಲು ಅರಿಷ್ಟನಿವಾರಣವು. ಜ್ಯೇಷ್ಠಾ ನಕ್ಷತ್ರ ಕೆಂಬಣ್ಣದ್ದು, ಕುಂಡಲಾಕಾರದ ೩ ನಕ್ಷತ್ರ, ನೋಯಯಿಯು ನಾಲ್ಕು ಅಕ್ಷರಗಳು, ಸ್ತ್ರೀರೂಪ, ಉಪಜೀವಕಜಾತಿ, ರಾಕ್ಷಸಗಣ, ತಿರ್ಯಙ್ಮುಖ, ಮಧ್ಯಲೋಚನ, ತೀಕ್ಷ್ಣದಾರುಣ,ಇಂದ್ರಮಂಡಲ, ಶೂನ್ಯಸ್ಥಾನ, ಚತುಷ್ಪಾತ್, ಶಾಲ್ಮಲೀವೃಕ್ಷ, ಹರಿಣಯೋನಿ, ಅಂಗಾರಕಾಧಿಪತ್ಯ,ವೃಶ್ಚಿಕರಾಶಿ, ಬ್ರಾಹ್ಮಣವರ್ಣ, ಆದಿನಾಡಿ, ಪುಲಸ್ತ್ಯಗೋತ್ರ, ಗೃಧ್ರಪಕ್ಷಿ, ವಾಯುತತ್ವ, ಯೋಗಿನಿ ಕೌಮಾರೀ,ಧೂಮ್ರಾಯ, ದೇವತಾ ಇಂದ್ರ, ಅಧಿದೇವತಾ ಮಿತ್ರ, ಪ್ರತ್ಯಧಿದೇವತಾ ನಿಋುರುತಿ. ಈ ನಕ್ಷತ್ರದಲ್ಲಿ ಇಂದ್ರನು ವಾಲಿಯಾಗಿ ಅವತರಿಸಿದನು. ೧೪ಘಟಿ ನಂತರ ವಿಷನಾಡಿ, ೩೮ ಘಟಿ ನಂತರ ಅಮೃತನಾಡಿ. ಕಂದಮೂಲತಿಲಾನ್ನವನ್ನು ತಿಂದು ದಕ್ಷಿಣಕ್ಕೆ ಪ್ರಯಾಣ ಶುಭ. ಪ್ರಥಮರಜೋದರ್ಶನದಿಂದ ದರಿದ್ರಳು,ಭರ್ತೃವಂಚಿತಳು,ಪುತ್ರವತಿ ಆಗುವಳು, ಶಾಂತಿ ಮಾಡಬೇಕು. ಶಿಲ್ಪಕಾರ್ಯ, ಯಜ್ಞಾದಿಗಳು, ಕುಟಿಲವಿದ್ಯಾ, ದ್ಯೂತ, ದುರ್ವ್ಯಾಪಾರ, ಕ್ಷೌರ, ವಿಷಾಗ್ನಿಪ್ರಯೋಗ, ಮೋಹನ,ಸ್ತಂಭನ, ಶಾಸ್ತ್ರಾಭ್ಯಾಸ, ಪಶುಕ್ರಯವಿಕ್ರಯ, ಮತ್ತು ಕ್ರೂರಕರ್ಮಗಳಿಗೆ ಪ್ರಶಸ್ತವು.

ಈ ನಕ್ಷತ್ರದಲ್ಲಿ ರೋಗ ಬಂದರೆ ಪ್ರಾಣಭಯ ೩೦ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೨೦ ದಿನಗಳು, ಸೋಮವಾರ ೧೨, ಮಂಗಳವಾರ ೩೦, ಬುಧವಾರ ೧೪, ಗುರುವಾರ ೨, ಶುಕ್ರವಾರ ೧೮, ಶನಿವಾರ ೨೫ ದಿನಗಳ ನಂತರ ಗುಣವು. ಶಾಂತಿಗೆ– ಹಳದಿಬಣ್ಣದ ೨ಭುಜಗಳ ವಜ್ರಾಂಕುಶಗಳು ಹಿಡಿದ ಇಂದ್ರಪ್ರತಿಮೆಯನ್ನು ಮಾಡಿ ಹಳದಿವಸ್ತ್ರ,



ಪಾಟಲಹೂವುಗಳಿಂದ ಪೂಜಿಸಿ ಚಿತ್ರಾನ್ನ ನೈವೇದ್ಯ ಮಾಡಿ, ವಿಶ್ವಾತ ಎಂಬ ಮಂತ್ರದಿಂದ ೧೦೮ ಚಿತ್ರಾನ್ನ–ತುಪ್ಪಗಳ ಅಹುತಿ ಕೊಟ್ಟು, ಗಂಧ,ಹೂವು, ಎಳ್ಳನ್ನವನ್ನು ಪೂರ್ವದಿಕ್ಕಿಗೆ ಬಲಿ ಹಾಕಲು ಒಂದು ತಿಂಗಳ ನಂತರ ಗುಣವು. ಆದಿವಾರ ಅಮೃತಸಿದ್ಧಿಯೋಗ, ಸೋಮವಾರ ಶುಭಯೋಗ, ಮಂಗಳವಾರ ವರಯೋಗ, ಬುಧವಾರ ಮೃತ್ಯುಯೋಗ, ಗುರುವಾರ ಯಮಕಂಟಕಯೋಗ, ಶುಕ್ರವಾರ ಭೇದಯೋಗ, ಶನಿವಾರ ಸಿದ್ಧಿಯೋಗ, ನಂದತಿಥಿಯಲ್ಲಿ ನಿರ್ಜೀವಯೋಗ, ಪುನರ್ವಸುಪುಷ್ಯಾಗಳಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಫಾಲ್ಗುಣದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ಪ್ರಜರಿಗೆ ವಿಷಶಸ್ತ್ರಾಗ್ನಿ ಭಯ, ರಕ್ತಮೇಘದರ್ಶನವಾದರೆ ವೃಷ್ಟಿಪ್ರದ, ಸಂಕ್ರಮಣವಾದರೆ ಮಧ್ಯಾರ್ಘವು, ಗಂಡಾದರೆ ಕಪ್ಪುದೇಹ, ಬಹುಸಂತಾನಿ, ಸ್ನೇಹಪರ, ಸಂತುಷ್ಟ, ಸತ್ಯವಾದಿ, ನಿಶ್ಚಲಮನಸ್ಸು, ಸ್ತ್ರೀಲೊಲ, ಹರವಾದಮೂಗು, ಹೊಟ್ಟೆಮೇಲೆ ಮಚ್ಚೆಉಳ್ಳವ, ಧನಿಕ, ಶ್ರಮಜೀವಿ, ಸುಳ್ಳಹೇಳಲು ಭಯಪಡುವಾತ, ಕಾಮೀ, ಎಚ್ಚರಿಕೆಯಿಂದ ಸಂಚರಿಸುವವನು ಆಗುವನು. ಹೆಣ್ಣಾದರೆ ಒಳ್ಳೆಮಾತು, ಸಹೋದರರಲ್ಲೂ, ಮಕ್ಕಳಲ್ಲೂ ಅತ್ಯಂತ ಪ್ರೀತಿವುಳ್ಳವಳು, ಹಿರಿಯರನ್ನು ಗೌರವಿಸುವಾಕೆ, ಸೌಭಾಗ್ಯವತಿ, ಕೋಪಿಷ್ಟಿ ಆಗುವಳು. ಜ್ಯೇಷ್ಠ ೧ನೆ ಪಾದದಲ್ಲಿ ರೋಗಬಂದರೆ ೦ ದಿನ ಕ್ರೂರ, ೨ನೆ ಪಾದ ೪೫ ದಿನ ಕ್ರೂರ, ೩ನೆ ಪಾದ ೧೨ ದಿನ ಕ್ರೂರ, ೪ನೆ ಪಾದ ೧೫ ದಿನ ಕ್ರೂರ. ಕಳೆದ ವಸ್ತು ಬೇಗ ಸಿಗುವುದಿಲ್ಲ.

೧ನೆ ಪಾದ ಗುರು ಅಧಿಪತಿ ಉತ್ಪನ್ನಾಂಶ, ಲೇಕಖಕ, ವಿನೋದಸ್ವಭಾವ, ದೊಡ್ಡಮರ್ಯಾದಾಪುರುಷ, ಗರ್ವಿಷ್ಟ, ಕಾಮಿ, ಶಾಂತಿಪ್ರಿಯ, ಪ್ರಸಿದ್ಧ. ೨ನೆ ಪಾದ ಶನಿ ಅಧಿಪತಿ ಉಗ್ರಾಂಶ, ರೋಗೀ, ಆಲಸಿ, ನಿರ್ಧನ, ಚಪಲಚಿತ್ತ, ಕೃಪಣ, ದ್ವೇಷಿ, ಹೊಟ್ಟೆನೋವುವುಳ್ಳವ. ೩ನೆ ಪಾದ ಶನಿ ಅಧಿಪತಿ ಪಾಪಾಂಶ, ಸದಾರೋಗಿ, ನೇತ್ರಬಾಧ, ಕೃಶಶರೀರ, ದುಷ್ಟಪ್ರವೃತ್ತಿ, ಕ್ರೂರಿ, ಸಾಹಸಿ, ಶೀಘ್ರಕೋಪಿ. ೪ನೆ ಪಾದ ಗುರು ಅಧಿಪತಿ, ಶುಭಾಂಶ, ಕವಿರೋಗಿ, ಧರ್ಮತಿಳಿದವ, ಗುರುದೇವತಾಕಾರ್ಯಾಸಕ್ತ, ತ್ಯಾಗಿ, ಜ್ಞಾನಿ, ಶಾಂತಸ್ವಭಾವಿ. ೧೭ಸಂವತ್ಸರಗಳು ಬುಧದಶ. ೧ನೆ ಸಂವತ್ಸರದಲ್ಲಿ ಅಜೀರ್ಣ, ೩ ಶೀತವಾತಬಾಧೆ, ೬ ಜ್ವರಭಯ ಇಲ್ಲವೆ ಪಶುಭಯ, ೧೦ ವಿಷಜಂತುಭಯ,೧೬ ಜಲಗಂಡ, ೨೪ ವಿಷಭಯ, ೩೩ ಸಹೋದರಾರಿಷ್ಟವು, ೪೮ ಮಹಾವ್ಯಾಧಿ, ಚೋರಭಯ, ೬೦ ಸೇವಕರಿಂದ ಪ್ರಾಣಭಯ, ೭೦ ಅಪಮೃತ್ಯು, ಇವೆಲ್ಲ ಪರಿಹಾರವಾದರೆ ೮೦ ಸಂವತ್ಸರಗಳು ಪರಮಾಯುವು.

**ಮೂಲಾ:–**೧ನೆ ಪಾದದಲ್ಲಿ ಗಂಡು ಹುಟ್ಟಿದರೆ ತಂದೆಗೆ ಅರಿಷ್ಟ. ಹೆಣ್ಣು ಹುಟ್ಟಿದರೆ ಪಶುಗಳಿಗೆ ಅರಿಷ್ಟ. ೨ನೆ ಪಾದದಲ್ಲಿ ಗಂಡು ಹುಟ್ಟಿದರೆ ತಾಯಿಗೆ ಅರಿಷ್ಟ. ಹೆಣ್ಣು ಹುಟ್ಟಿದರೆ ಸಾಮಾನ್ಯದೋಷ. ೩ನೆಪಾದದಲ್ಲಿ ಗಂಡು ಹುಟ್ಟಿದರೆ ಧನಹಾನಿ. ಹೆಣ್ಣು ಹುಟ್ಟಿದರೆ ತಂದೆಬಂಧುಗಳಿಗೆ ಅರಿಷ್ಟ. ೪ನೆ ಪಾದದಲ್ಲಿ ಗಂಡು ಹುಟ್ಟಿದರೆ ಸಾಮಾನ್ಯದೋಷವು. ಹೆಣ್ಣು ಹುಟ್ಟಿದರೆ ತಾಯಿಬಂಧುಗಳಿಗೆ ಅರಿಷ್ಟ. ಅರಿಷ್ಟನಿವಾರಣಕ್ಕಾಗಿ ಗೋಮುಖಪ್ರಸವಶಾಂತಿ, ಏಕಾದಶವಾರ ರುದ್ರಾಭಿಷೇಕ, ಧನ್ವಂತರಿಜಪ, ಮೃತ್ಯುಂಜಯಜಪ,ನಕ್ಷತ್ರಜಪ, ನವಗ್ರಹಜಪ–

ಹೋಮ–ಸುವರ್ಣದಾನಗಳನ್ನು ಮಾಡಿದರೆ ಶುಭವಾಗುವುದು. ಮೂಲ ನಕ್ಷತ್ರ ಕಪ್ಪುಬಣ್ಣದ್ದು, ಅಂಕುಶಾಕಾರದ ೬ ನಕ್ಷತ್ರ, ಯೇಯೋಬಬಿ ನಾಲ್ಕು ಅಕ್ಷರಗಳು, ಸ್ತ್ರೀರೂಪ, ಉಪಜೀವಕಜಾತಿ, ಪಾದರಜ್ಜು, ರಾಕ್ಷಸಗಣ, ಅಧೋಮುಖ, ಸುಲೋಚನ, ಉಗ್ರದಾರುಣ,ವರುಣಮಂಡಲ, ಪಟ್ಟಣಸ್ಥಾನ,ಯಮದಿಕ್, ಚತುಷ್ಪಾತ್, ಸರ್ಜಕವೃಕ್ಷ, ಶ್ವಾನಯೋನಿ, ಬೃಹಸ್ಪತಿ ಆಧಿಪತ್ಯ, ಧನುರಾಶಿ, ಕ್ಷತ್ರಿಯವರ್ಣ, ಆದಿನಾಡಿ, ಪುಲಸ್ತ್ಯಗೋತ್ರ, ಚಕ್ರವಾಕಪಕ್ಷಿ, ವಾಯುತತ್ವ, ಯೋಗಿನಿ ವಾರಾಹಿ, ಸಿಂಹಾಯ, ದೇವತಾ ನಿಋುರುತಿ, ಅಧಿದೇವತಾ ಇಂದ್ರ, ಪ್ರತ್ಯಧಿದೇವತಾ ಅಬ್‌ದೇವತ. ಈ ನಕ್ಷತ್ರದಲ್ಲಿ ಹನುಮಂತ ಅವತರಿಸಿದನು. ೨೦ಘಟಿ ನಂತರ ಮರಿಯು ೫೬ ಘಟಿ ನಂತರ ವಿಷನಾಡಿ, ೨೪ ಘಟಿ ನಂತರ ಅಮೃತನಾಡಿ. ಕಂದಮೂಲಫಲತಿಂದು ದಕ್ಷಿಣ–ಪಶ್ಚಿಮಗಳಿಗೆ ಪ್ರಯಾಣ ಶುಭ. ಪ್ರಥಮರಜೋದರ್ಶನದಲ್ಲಿ ಪುತ್ರವತಿ,ಸೌಭಾಗ್ಯವತೀ ಆಗುವಳು.ಷೋಡಶ ಸುಕರ್ಮಗಳು, ತೈಲಾಭ್ಯಂಗ, ಆಭರಣ, ಯಜ್ಞದೀಕ್ಷಾರಂಭ, ವೈದ್ಯಕ, ಕೃಷಿ, ಬೀಜಬಿತ್ತುವಿಕೆ, ಅಡಿಕೆ, ತೆಂಗು, ಹಲಸು, ಜಂಬೂ ವೃಕ್ಷಗಳ ನೆಡುವಿಕೆ, ಮಂತ್ರಪ್ರಯೋಗ, ಯಾತ್ರಾ, ಶ್ರಾದ್ಧಾದಿಗಳಿಗೆ ಶುಭಕರ.

ಈ ನಕ್ಷತ್ರದಲ್ಲಿ ಜ್ವರಬಂದರೆ ಪ್ರಾಣಭಯ ೨೭ ದಿನಗಳು ಅರಿಷ್ಟ. ಆದಿವಾರ ಬಂದರೆ ೧೬ ದಿನಗಳು, ಸೋಮವಾರ ೭, ಮಂಗಳವಾರ ೨೦, ಬುಧವಾರ ೧೨, ಗುರುವಾರ ೨೨, ಶುಕ್ರವಾರ ೧೮, ಶನಿವಾರ ೨೭ ದಿನಗಳ ನಂತರ ಗುಣವು. ಶಾಂತಿಗೆ– ಕಪ್ಪುಬಣ್ಣದ ೨ ಭುಜಗಳ ನಿರಋುತಿ ಪ್ರತಿಮೆ ಮಾಡಿ ಕೆಂಪುವಸ್ತ್ರ, ಕಮಲಗಳಿಂದ ಪೂಜಿಸಿ ಕೆಂಪಾದಉದ್ದುಅನ್ನ ನೈವೇದ್ಯ ಮಾಡಿ, <u>ಮೂಲಪ್ರಜಾ</u> ಎಂಬ ಮಂತ್ರದಿಂದ ೧೦೮ ಕಂದಮೂಲಫಲ–ತುಪ್ಪಗಳಿಂದ ಅಹುತಿ ಕೊಟ್ಟು ಗಂಧ, ಹೂವು, ಕೆಂಪುಉದ್ದುಅನ್ನ ನಿರಋುತಿದಿಕ್ಕಿಗೆ ಬಲಿ ಹಾಕಲು ೨೭ ದಿನಗಳಲ್ಲಿ ಗುಣವು. ಆದಿವಾರ ಮೃತ್ಯುಯೋಗ, ಸೋಮವಾರ ಯಮಘಂಟಕಯೋಗ, ಮಂಗಳವಾರ ವರಯೋಗ, ಬುಧವಾರ ಮೃತ್ಯುಯೋಗ, ಗುರುವಾರ ತ್ರಿವಿಷ್ಟಯೋಗ, ಶುಕ್ರವಾರ ದಗ್ಧಯೋಗ, ಶನಿವಾರ ಸುಧಾಂಶಯೋಗ, ತೃತೀಯಾ ತಿಥಿಯಲ್ಲಿ ತ್ರಿಪುಷ್ಕರಯೋಗ, ಷಷ್ಠೀತಿಥಿಯಲ್ಲಿ ನಿರ್ಜೀವಯೋಗ, ಪುನರ್ವಸುವಿನಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಮಾಘದಲ್ಲಿ ಶೂನ್ಯನಕ್ಷತ್ರ, ಪಶ್ಚಿಮದಲ್ಲಿ ಉತ್ಪಾತವಾದರೆ ಕೃಷಿ–ಹೈನುಗಳಿಗೆ ಶುಭ, ರಕ್ತಮೇಘ ದರ್ಶನವಾದರೆ ವೃಷ್ಟಿಪ್ರದ, ಸಂಕ್ರಮಣವಾದರೆ ಅರ್ಘವೃದ್ಧಿಯು, ಗಂಡಾದರೆ ಕೆಂಪಗಿರುವವ, ಧನಿಕ, ಸುಖೀ,ಧರ್ಮಿಷ್ಟ, ಬಂಧುದ್ವೇಷಿ, ಅಭಿಮಾನಿ, ಕಾಮಿ, ಸದಾರೋಗಿ, ಚಂಚಲಸ್ವಭಾವಿ, ವಿನಯಿ, ಸ್ವತಂತ್ರಜೀವಿ, ಕೆಂಗಣ್ಣು, ಸ್ತ್ರೀಯರಿಗೆ ಪ್ರಿಯತಮನಾಗುವನು. ಹೆಣ್ಣಾದರೆ ಅಲ್ಪಸೌಖ್ಯವುಳ್ಳವಳು, ವಿದ್ಯೆಯಲ್ಲಿಯೂ, ಧನವಿಷಯದಲ್ಲೂ ಅನಾಸಕ್ತಳು ಆಗುವಳು.

ಮೂಲಾ ೧ನೆ ಪಾದದಲ್ಲಿ ರೋಗ ಬಂದರೆ ೧೫ ದಿನಗಳು ಕ್ರೂರ, ೨ ನೆ ಪಾದ ೫ ದಿನಗಳು ಕ್ರೂರ, ೩ನೆ ಪಾದ ೧೫ ದಿನಗಳು ಕ್ರೂರ, ೪ನೆ ಪಾದ ೫ ದಿನಗಳು ಕ್ರೂರ. ಕಳೆದ ವಸ್ತು ಸಿಗುವುದು ಕಷ್ಟ. ೧ನೆ ಪಾದ ಕುಜ ಅಧಿಪತಿ ತಸ್ಕರಾಂಶ, ಪಿತೃಹೀನ, ಸದಾರೋಗಿ, ದರಿದ್ರ,



ಅಸಂತೋಷಿ, ಧನ–ಧಾನ್ಯರಹಿತ. ೨ನೆ ಪಾದ ಶುಕ್ರ ಅಧಿಪತಿ ಭೋಕ್ತಾಂಶ, ಮಾತೃರಹಿತ, ದಯಾವಂತ, ಹಾಲು–ಬೆಲ್ಲ ಸಿಹಿಯಲ್ಲಿ ಅಭಿರುಚಿವುಳ್ಳವ, ವಾಹನಸೌಕರ್ಯ, ಅಲ್ಪಭೋಗಿ, ಸ್ತ್ರೀ ವಿಲಾಸೀ, ಸತ್ಕರ್ಮನಿರುತ. ೩ನೆ ಪಾದ ಬುಧ ಅಧಿಪತಿ ವಿಚಕ್ಷಣಾಂಶ, ಧನಿಕ, ಖರ್ಚುಪ್ರಿಯ, ವಿದ್ಯಾವಂತ, ವಾಕ್ಚತುರ, ಜ್ಯೋತಿಶ್ಯಾಸ್ತ್ರಾದಿ ಧರ್ಮಗ್ರಂಥಾಸಕ್ತ, ವಿನಯಿ, ಸರ್ಕಾರದಿಂದ ಮಾನ್ಯ. ೪ನೆ ಪಾದ ಚಂದ್ರ ಅಧಿಪತಿ, ಧನಾಂಶ, ಸೇನಾಧಿಪತಿ, ಪರೋಪಕಾರಿ, ಧೈರ್ಯಶಾಲಿ, ಕಾಮಿ, ಅಲ್ಪರೋಗಿ, ಪರೇಂಗಿತಜ್ಞ, ಶಾಂತಗುಣಿ, ವಿದ್ಯಾವಂತ, ಒಳ್ಳನಡತೆ, ಗ್ರಾಮಪುರಾಧಿಕಾರಿ. ೭ಸಂವತ್ಸರಗಳು ಕೇತುದಶ. ೨–೩ಸಂವತ್ಸರಗಳಲ್ಲಿ ಜ್ವರಭಯ, ೬–೮ ಶೀತವಾತಬಾಧೆ, ೧೨ ಜಲಗಂಡ–ಪಶುಭಯ, ೧೬ ಚೋರ, ೨೦ ವಿಷಸರ್ಪ–ನಾನಾರೋಗಗಳು, ೩೬ ಶತ್ರುಗಳಿಂದ ಅರಿಷ್ಟ, ೪೮ ಸನ್ನಿಪಾತಾದಿಜ್ವರಭಯ, ೬೦ ಗುಲ್ಮರೋಗ, ೭೦ ಶತ್ರುಗಳಿಂದ ನಷ್ಟ, ವಿಷಜ್ವರ ಇವೆಲ್ಲ ಪರಿಹಾರವಾದರೆ ೮೪ ಸಂವತ್ಸಗಳು ಪರಮಾಯುವು.

## ಅಭುಕ್ತಮೂಲ

ಅಭುಕ್ತಮೂಲಮಾಹ ವೃದ್ಧವಾಸಿಷ್ಠಃ–ಜ್ಯೇಷ್ಠಾಂತೇ ಘಟಿಕಾ ಚೈಕ ಮೂಲಾದೌ ಘಟಿಕಾದ್ವಯಮ್।
ಅಭುಕ್ತಮೂಲಮಿತ್ಯಾಹುರ್ಜಾತಂ ತತ್ರ ವಿಸರ್ಜಯೇತ್॥
ಬೃಹಸ್ಪತಿಸ್ತು–ಜ್ಯೇಷ್ಠಾಂತೇ ಘಟಿಕಾರ್ಧಂತು ಮೂಲಾದೌ ಘಟಿಕಾರ್ಧಕಮ್।
ತಯೋರಂತರ್ಗತಾನಾಡಿ ಅಭುಕ್ತಮೂಲಮುಚ್ಯತೇ॥
ಬೃಹನ್ನಾರದಸ್ತು–ಅಭುಕ್ತಮೂಲಗಂಡಾಂತಂ ಘಟಿಕಾನಾಂ ಚತುಷ್ಟಯಮ್।
ತತ್ರೈಂದ್ರಾಂತ್ಯಂ ಘಟೀದ್ವಂದ್ವಂ ಮೂಲಾದ್ಯದ್ವಯ ಮೇವ ಚ॥
ಭುಕ್ತಮೂಲಸಂಭವಂ ಪರಿತ್ಯಜೇತ್ತು ಬಾಲಕಂ।
ಸಮಾಷ್ಟಕಂ ಪಿತಾಥವಾ ನತನ್ಮುಖಂ ವಿಲೋಕಯೇತ್॥
ತದಾದ್ಯ ಪಾದಕೇ ಪಿತಾ ವಿಪದ್ಯತೇ ಜನನ್ಯಥಾ।
ತೃತೀಯಕೇ ಧನಕ್ಷಯಂ ಚತುರ್ಥಕಃ ಶುಭಾವಹಃ॥
ಜಯಾರ್ಣವೇ–ಮೂಲ ಸ್ತಂಭತ್ವಚಾ ಶಾಖಾ ಪತ್ರಂ ಪುಷ್ಪಂ ಫಲಂ ಶಿಖಾ।
ವೇದಾಶ್ಚ ಮುನಯಶ್ಚೈವ ದಿಶಶ್ಚ ವಸವಸ್ತಥಾ॥
ನವಬಾಣಾರಸಾರುದ್ರಾ ಮೂಲಬೇಧಾಃ ಪ್ರಕೀರ್ತಿತಾಃ।
ಮೂಲೇ ಮೂಲವಿನಾಶಾಯ ಸ್ತಂಭೇ ಮಾತೃವಿನಾಶಕೃತ್।
ಪತ್ರೇ ಪರಿವಾರಸ್ಯ ಪುಷ್ಪೇಷು ನೃಪವಲ್ಲಭಃ॥
ಫಲೇಷು ಲಭತೇ ರಾಜ್ಯಂ ಶಿಖಾಯಾಮಲ್ಪಜೀವಿತಮ್॥

ಜ್ಯೇಷ್ಠಾನಕ್ಷತ್ರದ ಕೊನೆಯ ಒಂದು ಘಟಿ ಮೂಲಾನಕ್ಷತ್ರದ ಪ್ರಾರಂಭದ ಎರಡು ಘಟಿಗಳು ಅಭುಕ್ತಮೂಲಎನಿಸುವುದು. ಈ ಅಭುಕ್ತಮೂಲದಲ್ಲಿ ಹುಟ್ಟಿದ ಶಿಶುವನ್ನು ತ್ಯಜಿಸಬೇಕು ಇಲ್ಲವೇ

ಮಗುವಿಗೆ ಎಂಟು ಸಂವತ್ಸರತುಂಬುವ ವರೆಗೆ ತಂದೆ ನೋಡವುದು ಒಳ್ಳೆಯದಲ್ಲ. ಮೂಲಾ ಪೂರ್ಣಘಟಿಗಳು ೬೦ ಇದ್ದಾಗ ೪ಘಟಿ ಬೇರು-ಇದರಲ್ಲಿ ಹುಟ್ಟಿದರೆ ವಿನಾಶವು. ಮುಂದೆ ೭ ಘಟಿ ಸ್ತಂಭ ಧನಕ್ಷಯ, ತದುಪರಿ ೧೦ ತೊಕ್ಕು ಭ್ರಾತೃಹಾನಿ, ತದುಪರಿ ೮ ಘಟಿ ಕೊಂಬೆ ತಾಯಿಗೆ ಅರಿಷ್ಟ, ತದುಪರಿ ೯ ಘಟಿ ಎಲೆಗಳು ಪರಿವಾರಜನರಿಗೆ ಅರಿಷ್ಟ, ತದುಪರಿ ೫ ಘಟಿ ಹೂ ರಾಜಪ್ರೀತಿ, ತದುಪರಿ ೬ ಘಟಿ ಫಲ ರಾಜ್ಯಪ್ರಾಪ್ತಿ, ಕೊನೆಗೆ ೧೧ ಘಟಿ ಶಿಖ-ಅಲ್ಪಜೀವಿತ ಹೀಗೆ ಫಲಗಳು ಜರುಗುವವು. ಪೂರ್ಣಘಟಿಗಳು ೬೦ ಕ್ಕಿಂತ ಹೆಚ್ಚುಕಡಿಮೆ ಇದ್ದರೆ ತ್ರೈರಾಶಿಕಾನುಸಾರ ಲೆಕ್ಕಿಸಿ ನೋಡಬೇಕು.

ಮೂಲಾನಕ್ಷತ್ರ ವಾಸ

ವೃಷಭ,ಸಿಂಹ,ವೃಶ್ಚಿಕ, ಕುಂಭ ಮಾಸಗಳಲ್ಲಿ ಸ್ವರ್ಗವಾಸ, ಮಿಥುನ,ಕನ್ಯಾ,ತುಲಾ,ಮೀನ ಮಾಸಗಳಲ್ಲಿ ಪಾತಾಳವಾಸ. ಮೇಷ, ಕರ್ಕ,ಧನು, ಮಕರ ಮಾಸಗಳಲ್ಲಿ ಮರ್ತ್ಯಲೋಕವಾಸ. ಮೂಲಾ ಮರ್ತ್ಯಲೋಕವಾಸ ಅರಿಷ್ಟಕರ. ಒಟ್ಟಿನಲ್ಲಿ ಮೂಲಾಜನನಕ್ಕೆ ವಿಶೇಷವಾಗಿ ಶಾಂತಿಮಾಡಬೇಕು.

**ಪೂರ್ವಾಷಾಢಾ:**-೧-೨-೪ ಪಾದಗಳಲ್ಲಿ ಎಂತಹ ಶಿಶುಜನಿಸಿದರೂ ಸಾಮಾನ್ಯದೋಷ. ೩ನೆ ಪಾದದಲ್ಲಿ ಗಂಡುಹುಟ್ಟಿದರೆ ತಂದೆಗೆ, ಹೆಣ್ಣು ಹುಟ್ಟಿದರೆ ತಾಯಿಗೆ ಅರಿಷ್ಟ. ಅದಕ್ಕಾಗಿ ಗೋಮುಖಪ್ರಸವಶಾಂತಿ, ಏಕಾದಶವಾರ ರುದ್ರಾಭಿಷೇಕ, ಧನ್ವಂತರಿಜಪ, ಮೃತ್ಯುಂಜಯಜಪ, ನಕ್ಷತ್ರಜಪ, ನವಗ್ರಹಜಪ, ಹೋಮ-ಸುವರ್ಣದಾನಗಳನ್ನು ಮಾಡಿದರೆ ಅರಿಷ್ಟನಿವಾರಣೆಯು. ೧-೨-೪ ಪಾದಗಳಿಗೆ ನಕ್ಷತ್ರದ ಸಾಮಾನ್ಯದೋಷಪ್ರಯುಕ್ತ ಎಣ್ಣೆಯಲ್ಲಿ ಶಿಶುಮುಖದರ್ಶನಮಾಡಿದರೆ ಶುಭವು. ಪೂರ್ವಾಷಾಢ ನಕ್ಷತ್ರ ಬಿಳಿಬಣ್ಣದ್ದು, ಅರ್ಧಚಂದ್ರಾಕಾರವುಳ್ಳ ೪ ನಕ್ಷತ್ರಗಳು, ಬುಧಫಡ ನಾಲ್ಕು ಅಕ್ಷರಗಳು, ಸ್ತ್ರೀರೂಪ, ವಿಪ್ರಜಾತಿ, ಊರುರಜ್ಜು, ಮನುಷ್ಯ ಗಣ, ಅಧೋಮುಖ, ಅಂಧಲೋಚನ, ಉಗ್ರ, ವಾಯು ಮಂಡಲ, ಶೂನ್ಯಸ್ಥಾನ, ಚತುಷ್ಪಾತ್, ತಿಂತ್ರಿಣೀವೃಕ್ಷ, ವಾನರಯೋನಿ, ಗುರು ಅಧಿಪತ್ಯ, ಧನುರಾಶಿ, ಕ್ಷತ್ರಿಯವರ್ಣ, ಮಧ್ಯನಾಡಿ, ಪುಲಸ್ತ್ಯಗೋತ್ರ, ಶುಕಪಕ್ಷಿ, ವಾಯುತತ್ವ, ಸ್ತ್ರೀಲಿಂಗ, ನೈಋತ್ಯದಿಕ್, ಯೋಗಿನಿ ಸಿದ್ಧಿದಾ, ಶುನಕಾಯ, ದೇವತಾ ಅಬ್‌ದೇವತ, ಅಧಿದೇವತಾ ನಿಋರುತಿ, ಪ್ರತ್ಯಧಿದೇವತಾ ವಿಶ್ವ. ಈ ನಕ್ಷತ್ರದಲ್ಲಿ ಪುಷ್ಪದಂತಜನಿಸಿದನು. ೨೪ಘಟಿ ನಂತರ ವಿಷನಾಡಿ, ೨೮ ಘಟಿ ನಂತರ ಅಮೃತನಾಡಿ. ನೀರುಕುಡಿದು ದಕ್ಷಿಣ-ಪಶ್ಚಿಮಕ್ಕೆ ಪ್ರಯಾಣ ಶುಭಕರ.

ಪ್ರಥಮರಜೋದರ್ಶನವು ದುಶ್ಚಾರಿಣಿ, ಪತಿಹೀನಾ ಆಗುವಳು. ಗಣನಾರಂಭ, ಅಕ್ಷಸ್ಥಾಪನ, ಅಕ್ಷರಾರಂಭ, ಕರ್ಣವೇಧ, ಶತ್ರುವೇಧ, ವಿವಾದ, ವಿಷಾಗ್ನಿ ಉಗ್ರಕರ್ಮಗಳು, ಭೂತೋಚ್ಚಾಟನ, ಮಾಂಸವಿಕ್ರಯ, ಶ್ರಾದ್ಧಾದಿಗಳಿಗೆ ಪ್ರಶಸ್ತವು.

ಈ ನಕ್ಷತ್ರದಲ್ಲಿ ಜ್ವರ ಬಂದರೆ ಪ್ರಾಣಭಯ ೩೦ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೨೭ ದಿನಗಳು, ಸೋಮವಾರ ೧೨, ಮಂಗಳವಾರ ೩೦, ಬುಧವಾರ ೧೬, ಗುರುವಾರ ೨೪, ಶುಕ್ರವಾರ ೧೮, ಶನಿವಾರ ೨೫ ದಿನಗಳ ನಂತರ ಗುಣವು. ಶಾಂತಿಗೆ- ಬಿಳಿಬಣ್ಣದ



ಪಾಶಾಂಕುಶಗಳನ್ನು ೨ಭುಜಗಳಲ್ಲಿ ಧರಿಸಿದ ಅಬ್‌ದೇವತ ಪ್ರತಿಮೆಯನ್ನು ಬಿಳಿವಸ್ತ್ರ, ಕಮಲದಹೂಗಳಿಂದ ಪೂಜಿಸಿ ಕ್ಷೀರಾನ್ನವನ್ನು ನೈವೇದ್ಯಮಾಡಿ, ತತ್ವಾಯಾಮಿ ಎಂಬ ಮಂತ್ರದಿಂದ ೧೦೮ ರಕ್ತಾಶಾಲಿತಂಡುಲ-ತುಪ್ಪಗಳಿಂದ ಅಹುತಿ ಕೊಟ್ಟು, ಗಂಧ,ಹೂವು, ಎಳ್ಳನ್ನ ಪೂರ್ವದಿಕ್ಕಿಗೆ ಬಲಿ ಹಾಕಲು ೩೦ ದಿನಗಳಲ್ಲಿ ಗುಣವು. ಆದಿವಾರ ರಾಜಯೋಗ, ಸೋಮವಾರ ಉತ್ಪಾತಯೋಗ, ಮಂಗಳವಾರ ಯಮಕಂಟಕಯೋಗ, ಬುಧವಾರ ಶುಭಯೋಗ, ಗುರುವಾರ ತ್ರಯೋದಶಿತಿಥಿ ಕೂಡಿದರೆ ಸಿದ್ಧಯೋಗ, ಶುಕ್ರವಾರ ಅಮೃತಯೋಗ, ಶನಿವಾರ ಮೃತ್ಯುಯೋಗ, ರಿಕ್ತಾತಿಥಿಯಲ್ಲಿ ನಿರ್ಜೀವಯೋಗ, ಆರ್ದ್ರಾದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಶ್ರಾವಣದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ಕೃಷಿ-ಹೈನುಗಳಿಗೆ ಶುಭ, ಸಂಕ್ರಮಣವಾದರೆ ಮಧ್ಯಾರ್ಘವೃದ್ಧಿಯು.

ಗಂಡಾದರೆ ವಿನಯಶೀಲ,ಪ್ರಸನ್ನಮುಖಿ, ದಾನಶೀಲ, ಅಭಿಮಾನೀ, ಗೋಸಂರಕ್ಷಕ, ಕೆಲವುವೇಳೆ ನೀಳವಾದ ಶರೀರ, ಎಲ್ಲ ಕಾರ್ಯಗಳಲ್ಲಿ ಸಮರ್ಥ, ಬುದ್ಧಿವಂತ, ಸೂಕ್ಷ್ಮಗ್ರಾಹಿ ಆಗುವನು. ಹೆಣ್ಣಾದರೆ ಪ್ರಾಣಿದಯೆಯುಳ್ಳವಳು, ಬಲವತಿ, ಆರೋಗ್ಯವತಿ, ವಿಶಾಲನೇತ್ರಿ, ಸುಗುಣಶೀಲೆ ಆಗುವಳು. ೧ನೆ ಪಾದದಲ್ಲಿ ರೋಗಬಂದರೆ ೦ ದಿನ ಕ್ರೂರ, ೨ನೆ ಪಾದ ೪೫, ೩ನೆ ಪಾದ ೧೫, ೪ನೆ ಪಾದ ೬. ಈ ನಕ್ಷತ್ರದಲ್ಲಿ ಕಳೆದ ವಸ್ತು ಸಿಗುವುದು ಕಷ್ಟ.

೧ನೆ ಪಾದ ರವಿ ಅಧಿಪತಿ ಉತ್ಪನ್ನಾಂಶ, ಅಲ್ಪಸುಖೀ, ಮಹಾಶೂರ, ಕೆಂಗಣ್ಣು, ಕಠೋರಚಿತ್ತ, ಕೃಪಣ, ಪರದ್ರವ್ಯಾಪಹಾರಿ, ಸ್ವಜನವೈರಿ, ಕ್ರೂರಕರ್ಮರತ ಆಗುವನು. ೨ನೆ ಪಾದ ಬುಧ ಅಧಿಪತಿ ಅಭಯಾಂಶ, ಸ್ವಜನಶ್ರೇಷ್ಟ, ದಯಾಲು, ಸತ್ಯವಾದಿ, ಬಂಧುಪ್ರಿಯ, ದಾನ-ಧರ್ಮಪರ, ಜ್ಞಾನೀ, ಮೃದುಭಾಷಿ, ಸರ್ವವ್ಯವಹಾರ ಚತುರ ಆಗುವನು. ೩ನೆ ಪಾದ ಶುಕ್ರ ಅಧಿಪತಿ ಭೋಗಾಂಶ ಚಂಚಲಚಿತ್ತ,ಶುಚಿ, ಭೋಗಶಾಲಿ, ಧನಿಕ, ಗುರುದೇವತಾ ಕಾರ್ಯಾಸಕ್ತ, ಧರ್ಮಕಾರ್ಯನಿರುತ, ಅಧಿಕಾರಿಯಿಂದ ಮಾನ್ಯ ಆಗುವನು. ೪ನೆ ಪಾದ ಕುಜ ಅಧಿಪತಿ, ಉಗ್ರಾಂಶ, ಅಸತ್ಯವಾದಿ, ವಿದ್ವದ್ವೇಷೀ, ಉಗ್ರಸ್ವಭಾವಿ, ಪಾಪಕಾರ್ಯಾಸಕ್ತ, ಕೋಪಿಷ್ಟ, ಬಹುರೋಗಪೀಡಿತ, ಅಲ್ಪಕಾರ್ಯನಿರುತ, ವಿದೇಶವಾಸಿ ಆಗುವನು. ೨೦ಸಂವತ್ಸರಗಳು ಶುಕ್ರದಶ. ೧ನೆ ತಿಂಗಳಲ್ಲಿ ಅಗ್ನಿಮಾಂದ್ಯ,ಜ್ವರಭಯ, ೩ನೆ ತಿಂಗಳು ೩ನೆ ಸಂವತ್ಸರದಲ್ಲಿ ಸ್ಫೋಟಕವಸ್ತುಭಯ, ೫ ಶೀತವಾತಬಾಧೆ, ೮ ನಾಯಿ,ಪಿಶಾಚಬಾಧೆ, ೧೨ ಜಲಗಂಡ, ೧೬ ವಿಷಸರ್ಪಭಯ, ೨೦ ನಾನಾಮೂಲಕ ಶತ್ರುಗಳಿಂದ ಅರಿಷ್ಟ, ೩೦ ಆಕಸ್ಮಿಕ ಮೃತ್ಯುಭಯ, ಚೋರಾದಿಬಾಧಾ, ೪೮ ಸನ್ನಿಪಾತಾದಿಜ್ವರಭಯ, ೬೦ ಚೋರಾದಿಬಾಧಾ, ಮಹಾರೋಗಪ್ರಾಪ್ತಿ, ಇವೆಲ್ಲಾ ಪರಿಹಾರವಾದರೆ ೮೦ ಸಂವತ್ಸರಗಳು ಪರಮಾಯುವು.

**ಉತ್ತರಾಷಾಢಾ:**-ಈನಕ್ಷತ್ರದಲ್ಲಿ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭವು. ಉತ್ತರಾಷಾಢ ನಕ್ಷತ್ರ ಕೆಂಬಣ್ಣದ್ದು, ಆನೆತಲೆ ಅಕಾರದಲ್ಲಿ ೮ ನಕ್ಷತ್ರಗಳು, ಬೆಬೊಜಜಿ ನಾಲ್ಕು ಅಕ್ಷರಗಳು, ಸ್ತ್ರೀರೂಪ, ವಿಪ್ರಜಾತಿ, ಊರುರಜ್ಜು, ಮನುಷ್ಯ ಗಣ, ತಿರ್ಯಙ್ಮುಖ, ಮಂದಲೋಚನ, ಸ್ಥಿರ, ಇಂದ್ರಮಂಡಲ, ಶೂನ್ಯಸ್ಥಾನ, ತ್ರಿಪಾದಿ, ಪನಸವೃಕ್ಷ, ಗೋಯೋನಿ, ಪುಂನಪುಂಸಕ,

ಉತ್ತರಾಷಾಢಗನೆ ಪಾದಕ್ಕೆ ಧನುಸ್‌ರಾಶಿ, ಕ್ಷತ್ರಿಯ ವರ್ಣ, ಗುರು ಅಧಿಪತ್ಯ, ೨-೩-೪ ಪಾದಗಳಿಗೆ ಮಕರರಾಶಿ ಶನಿ ಆಧಿಪತ್ಯ, ವೈಶ್ಯವರ್ಣ, ಅಂತನಾಡಿ, ಪುಲಹಗೋತ್ರ, ಕುಕ್ಕುಟಪಕ್ಷಿ, ವಾಯುತತ್ವ,ಸ್ತ್ರೀಲಿಂಗ,ನೈಋತ್ಯದಿಕ್, ಯೋಗಿನಿ ಸಿದ್ಧಿದಾ, ಶುನಕಾಯ, ದೇವತಾ ಅಬ್‌ದೇವತೆ, ಅಧಿದೇವತಾ ನಿಋರುತಿ, ಪ್ರತ್ಯಧಿದೇವತಾ ವಿಶ್ವ. ಈ ನಕ್ಷತ್ರದಲ್ಲಿ ವಿಶ್ವೇದೇವತೆಗಳು ಅವತರಿಸಿದರು. ೨೦ಘಟಿ ನಂತರ ವಿಷನಾಡಿ, ೪೦ ಘಟಿ ನಂತರ ಅಮೃತನಾಡಿ. ಯಾತ್ರಗೆ ಶುಭವಾದದ್ದು. ೧೬ಘಟಿಕಾ ನಂತರ ಹಿಟ್ಟುತಿಂದು ದಕ್ಷಿಣ-ಪಶ್ಚಿಮಕ್ಕೆ ಪ್ರಯಾಣ ಶುಭಕರ.

ಪ್ರಥಮರಜೋದರ್ಶನದಿಂದ ಪತಿವ್ರತೆ, ಧರ್ಮಶೀಲೆ ಅಗುವಳು. ಅಧ್ಯಯನ, ಆಭರಣಗಳ ಧರಿಸುವಿಕೆ, ವೃಕ್ಷಾರೋಪಣ, ಗುರುದೇವತಾರ್ಚನ, ಶಾಂತಿಕರ್ಮ, ಗೃಹಾರಂಭ, ಪಟ್ಟಾಭಿಷೇಕ, ಷೋಡಶ ಶುಭಕರ್ಮಗಳು, ಬಿತ್ತನೆ, ಪುರಗ್ರಾಮಾಧಿಪತ್ಯ, ದೇವತಾದಿಪ್ರತಿಷ್ಠಾ, ವಾಹನಾರೋಹಣ, ಬೋರು ತೆಗೆಸುವಿಕೆ, ಭೂಮಿ ಕೊಳ್ಳುವಿಕೆ, ಧನಧಾನ್ಯಸಂಗ್ರಹ, ತೈಲಾಭ್ಯಂಗ ಇತ್ಯಾದಿಗಳಿಗೆ ಪ್ರಶಸ್ತವು.

ಈ ನಕ್ಷತ್ರದಲ್ಲಿ ಜ್ವರ ಬಂದರೆ ಪ್ರಾಣಭಯ ೨೫ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೧೦ ದಿನಗಳು, ಸೋಮವಾರ ೧೦, ಮಂಗಳವಾರ ೨೦, ಬುಧವಾರ ೧೪, ಗುರುವಾರ ೮, ಶುಕ್ರವಾರ ೧೬, ಶನಿವಾರ ೨೫ ದಿನಗಳಲ್ಲಿ ಗುಣವು. ಶಾಂತಿಗೆ- ಬಿಳಿಬಣ್ಣದ ಅಕ್ಷಸೂತ್ರ ಕಮಂಡುಲು ಧರಿಸಿದ ಚತುರ್‌ಭುಜಗಳ ವಿಶ್ವೇದೇವತೆ ಪ್ರತಿಮೆಯನ್ನು ಮಾಡಿ ಬಿಳಿವಸ್ತ್ರ, ಪಂಚವರ್ಣಹೂವುಗಳಿಂದ ಪೂಜಿಸಿ ಹುಗ್ಗಿ ನೈವೇದ್ಯಮಾಡಿ, ವಿಶ್ವೇದೇವಾಸ ಎಂಬ ಮಂತ್ರದಿಂದ ೧೦೮ ರಕ್ತಾಶಾಲಿತಂಡುಲ-ತುಪ್ಪಗಳಿಂದ ಅಹುತಿ ಕೊಟ್ಟು ಗಂಧ,ಹೂವು, ಹುಗ್ಗಿಯನ್ನು ಉತ್ತರದಿಕಿನಲ್ಲಿ ಬಲಿ ಕೊಟ್ಟರೆ ೨೫ ದಿನಗಳಲ್ಲಿ ಗುಣವು. ಆದಿವಾರ ಮೃತ್ಯುಯೋಗ, ಸೋಮವಾರ ಮೃತ್ಯುನಾಶಯೋಗ, ಮಂಗಳವಾರ ಚಿತ್ರಯೋಗ, ಪಂಚಮೀತಿಥಿ ಕೂಡಿದರೆ ಶುಭಯೋಗ, ಬುಧವಾರ ಸೌಮ್ಯಯೋಗ, ಗುರುವಾರ ವಿಷಯೋಗ, ಶುಕ್ರವಾರ ಸಿದ್ಧಯೋಗ, ಶನಿವಾರ ವಿಷಯೋಗ, ಮೃಗಶಿರ ಕ್ರೂರರಿದ್ದರೆ ಮಹಾಶೂಲಯೋಗ, ವೈಶಾಖದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ದುರ್ಭಿಕ್ಷಭಯ, ಸಂಕ್ರಮಣವಾದರೆ ಮಧ್ಯಾರ್ಘವೃದ್ಧಿಯು.

ಗಂಡಾದರೆ ಧಾರ್ಮಿಕ, ಸರ್ವಜ್ಞ, ವಿಶ್ವಾಸಾರ್ಹ, ಶೂರ, ಬಹುಪುತ್ರಸಂತಾನವುಳ್ಳ, ಸುಂದರ, ಗುಣವಂತ, ಅತಿಥಿಪೂಜಾಸಕ್ತ, ಹಾಸ್ಯಪ್ರವೃತ್ತಿ, ಕೃಪಾಳು, ವಾಗ್ಮಿ, ನೀತಿಸಂಪನ್ನ, ದೀರ್ಘನಾಸಿಕ, ಗುಹ್ಯದಲ್ಲಿ ಮಚ್ಚೆವುಳ್ಳವ, ಭಾರ್ಯಾಯುತ ಆಗುವನು. ಹೆಣ್ಣಾದರೆ ಧನಿಕಳು, ಸುಖಿ, ಪರೇಂಗಿಜ್ಞೆ, ಭರ್ತೃಪ್ರೇಮ ಹೊಂದುವವಳು ಆಗುವಳು. ಉತ್ತರಾಷಾಢಾ ೧ನೆ ಪಾದ ರೋಗಬಂದರೆ ೧೫ ದಿನ ಕ್ರೂರ, ೨ನೆ ಪಾದ ೪೫, ೩ನೆ ಪಾದ ೧೫, ೪ನೆ ಪಾದ ೬. ಕಳೆದ ವಸ್ತು ಬೇಗ ಸಿಗುವುದು.

೧ನೆ ಪಾದ ಗುರು ಅಧಿಪತಿ ಉತ್ಪನ್ನಾಂಶ, ವೇದಶಾಸ್ತ್ರಗಳನ್ನು ತಿಳಿದವ, ಬುದ್ಧಿವಂತ, ಗುರುದೇವತಾ ಭಕ್ತ, ಧನಪಶುಗಳ ಸಂಗ್ರಹ ಮಾಡುವವ, ಧಾರ್ಮಿಕ, ಧನಿಕ, ನ್ಯಾಯವಂತ



ಆಗುವನು. ೨ನೆ ಪಾದ ಶನಿ ಅಧಿಪತಿ ಪಾಪಾಂಶ, ವ್ಯರ್ಥವಾದ ಅಂಗಾಂಗವುಳ್ಳವ, ಪರಂಗಿಯವರಮೇಲೆ ಪ್ರೇಮಉಳ್ಳವ, ಅಲ್ಪಕಾರ್ಯಗಳು ಮಾಡುವಾತ, ಪರದ್ರವ್ಯಾಪಹಾರಿ, ವಂಚಕ ಆಗುವನು. ೩ನೆ ಪಾದ ಶನಿ ಅಧಿಪತಿ ಕ್ರೂರಾಂಶ ಸ್ಥೂಲದೇಹಿ, ಅಲ್ಪಸಂತೋಷಿ, ಸದಾರೋಗಿ, ಫಲಕ್ಕೆ ಬಂದಾಗ ಕಾರ್ಯ ತ್ಯಜಿಸುವವ, ಪರೋಪಕಾರಿ, ಸ್ವಜನನಿಂದಕ ಆಗುವನು. ೪ನೆ ಪಾದ ಗುರು ಅಧಿಪತಿ, ಶೋಭನಾಂಶ, ವೇದಶಾಸ್ತ್ರಾಸಕ್ತ, ರಾಜಾಧಿಕಾರವುಳ್ಳವ, ಮಿತ್ರರುಳ್ಳವ ಆಗುವನು. ೬ಸಂವತ್ಸರಗಳು ರವಿದಶ. ೧೨ನೆ ದಿನ ಶೀತವಾತಾದಿ ಭಯ, ೬ ತಿಂಗಳಲ್ಲಿ ವಾತಜ್ವರಭಯ, ೩ಸಂವತ್ಸರದಲ್ಲಿ ಸ್ಫೋಟಕವಸ್ತುಭಯ, ೫ ಗ್ರಹಬಾಧೆ, ೧೨ ಕ್ರಿಮಿಕೀಟಬಾಧೆ, ೧೬ ಜಲಗಂಡ, ೨೦ ಚೋರಗಂಡ, ೨೮ ಸನ್ನಿಪಾತಾದಿಜ್ವರಭಯ, ೩೬ ಉದರರೋಗ ಶತ್ರುಭೀತಿ, ೪೦ ವಿಷಶಸ್ತ್ರಾದಿ ಭಯ, ೪೮ ಚೋರಾದಿಬಾಧಾ ಇಲ್ಲವೆ ಆಯುಧಭೀತಿ, ೬೦ ಶ್ವಾಸರೋಗಪ್ರಾಪ್ತಿ, ೬೮ ಅತಿಸಾರ, ಜಲರೋಗ ಇವೆಲ್ಲ ಪರಿಹಾರವಾದರೆ ೮೦ ಸಂವತ್ಸರಗಳು ಪರಮಾಯುವು.

**ಶ್ರವಣ:**-ಯಾವ ಪಾದದಲ್ಲಾದರೂ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭವು. ಶ್ರವಣನಕ್ಷತ್ರ ಕಪ್ಪುಬಣ್ಣದ್ದು, ಮಾಲಾಕಾರದ ೩ ನಕ್ಷತ್ರಗಳು, ಖುಖುಖೇಖೊ ನಾಲ್ಕು ಅಕ್ಷರಗಳು, ಸ್ತ್ರೀರೂಪ, ವಿಪ್ರಜಾತಿ, ಕಂಠರಜ್ಜು, ಮನುಷ್ಯಗಣ, ಊರ್ಧ್ವಮುಖ, ಸುಲೋಚನ, ಚರ, ಇಂದ್ರಮಂಡಲ, ಪಟ್ಟಣಸ್ಥಾನ, ಚತುಷ್ಪಾತ್, ಅರ್ಕವೃಕ್ಷ, ವಾನರಯೋನಿ,ಪುರುಷ, ಮಕರರಾಶಿ ಶನಿ ಆಧಿಪತ್ಯ, ವೈಶ್ಯವರ್ಣ, ಅಂತ್ಯನಾಡಿ, ಪುಲಹಗೋತ್ರ, ಸಾರಸಪಕ್ಷಿ, ವಾಯುತತ್ವ, ಪುಂಲಿಂಗಂ, ವಾಯುವ್ಯದಿಕ್, ಯೋಗಿನಿ ಮಾಹೇಂದ್ರ, ಖರಾಯ, ದೇವತಾ ವಿಷ್ಣುದೇವತೆ, ಅಧಿದೇವತೆ ವಿಶ್ವ, ಪ್ರತ್ಯಧಿದೇವತೆ ವಸು. ಈ ನಕ್ಷತ್ರದಲ್ಲಿ ಅಂಗಾರಕ, ವಿಭೀಷಣರು ಜನಿಸಿದರು. ೧೦ ಘಟಿ ನಂತರ ವಿಷನಾಡಿ, ೩೪ ಘಟಿ ನಂತರ ಅಮೃತನಾಡಿ. ಯಾತ್ರೆಗೆ ಶುಭವಾದದ್ದು. ಹಿಟ್ಟು ತಿಂದು ದಕ್ಷಿಣ ಪ್ರಯಾಣ ಶುಭಕರ.

ಪ್ರಥಮರಜೋದರ್ಶನವಾದರೆ ಪತಿವ್ರತಾ,ಧರ್ಮಶೀಲಾ ಆಗುವಳು. ತೋಟಕರ್ಮ, ಯಜ್ಞ-ವ್ರತದೀಕ್ಷಾ, ವಿದ್ಯಾರಂಭ, ಷೋಡಶಕರ್ಮಗಳು, ಆಭರಣಗಳು,ಶಾಂತಿಕರ್ಮಗಳು, ದೇವತಾಪ್ರತಿಷ್ಟ, ರಾಜ್ಯಾಭಿಷೇಕ, ಪುರಪ್ರವೇಶ, ಗ್ರಹಮಂತ್ರೋಚ್ಚಾಟನ, ಮಂತ್ರಾಭ್ಯಾಸ, ಕೃಷಿ,ಬಿತ್ತುವುದು, ವೈದ್ಯಕ, ಯಾತ್ರಾ, ಶ್ರಾದ್ಧ, ಕ್ಷುರಕರ್ಮ, ಗೀತಾವಾದ್ಯಾದಿ ಆರಂಭ, ನೂತನವಸ್ತ್ರ,ನೂತನವ್ಯಾಪಾರಾರಂಭ,ತೈಲಾಭ್ಯಂಗ ಇತ್ಯಾದಿಗಳಿಗೆ ಶುಭ.

ಈ ನಕ್ಷತ್ರದಲ್ಲಿ ಜ್ವರ ಬಂದರೆ ೧೬ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೧೦ ದಿನಗಳು, ಸೋಮವಾರ ೪, ಮಂಗಳವಾರ ೧೪, ಬುಧವಾರ ೭, ಗುರುವಾರ ೧೦, ಶುಕ್ರವಾರ ೬, ಶನಿವಾರ ೧೬ ದಿನಗಳ ನಂತರ ಗುಣವು. ಶಾಂತಿಗೆ- ಕಪ್ಪುಬಣ್ಣದ ಶಂಖಚಕ್ರಗದಾಪದ್ಮಗಳನ್ನು ಧರಿಸಿದ ಗರುಡವಾಹನಾದ ವಿಷ್ಣು ಪ್ರತಿಮೆಯನ್ನು ಮಾಡಿ ಬಿಳಿವಸ್ತ್ರ, ತುಲಸೀಪತ್ರಗಳಿಂದ ಪೂಜಿಸಿ ಶ್ಯಾಲ್ಯಾನ್ನ ನೈವೇದ್ಯಮಾಡಿ, ಇದಂ ವಿಷ್ಣು ಎಂಬ ಮಂತ್ರದಿಂದ ೧೦೮ ಅಶ್ವತ್ಥತಂಡುಲ-ತುಪ್ಪ ಅಹುತಿ ಕೊಟ್ಟು, ಗಂಧ,ಹೂವು, ಕ್ಷೀರಾನ್ನವನ್ನು ಉತ್ತರದಿಕ್ಕಿಗೆ ಬಲಿ ಹಾಕಿದರೆ ೧೬ ದಿನಗಳಲ್ಲಿ

ಗುಣವು. ಆದಿವಾರ ಸಿದ್ಧಿಯೋಗ, ಸೋಮವಾರ ಅಷ್ಟಮೀ ಬಂದರೆ ನಾಶಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ನಿರ್ಜೀವಯೋಗ, ಗುರುವಾರ ಸಿದ್ಧಯೋಗ, ಶುಕ್ರವಾರ ನಾಶಯೋಗ, ಶನಿವಾರಂ ಯಮಕಂಟಕಯೋಗಂ, ನಂದತಿಥಿಲೊ ನಿರ್ಜೀವಯೋಗಮು, ವಿಶಾಖಾದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಮಾಘದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ದುರ್ಭಿಕ್ಷಭಯ, ಸಂಕ್ರಮಣವಾದರೆ ಮಧ್ಯಾರ್ಘ ವೃದ್ಧಿಯು. ಶ್ರವಣ ೧ನೆ ಪಾದದಲ್ಲಿ ರೋಗ ಬಂದರೆ ೧೧ ದಿನಕ್ರೂರ, ೨ನೆ ಪಾದ ೧೨, ೩ನೆ ಪಾದ ೨೦, ೪ನೆ ಪಾದ ೨೮. ಕಳೆದವಸ್ತು ಸಿಗುವುದು ಕಷ್ಟ.

ಗಂಡಾದರೆ ಉದಾರಸ್ವಭಾವ, ಧೈರ್ಯವಂತ, ವಾದದಲ್ಲಿ ಜಯಿ, ಧರ್ಮಾತ್ಮ ಆಗುವನು. ಹೆಣ್ಣಾದರೆ ಧನಿಕಳು, ಬುದ್ಧಿವಂತೆ, ದಾನಧರ್ಮಾಸಕ್ತಿಉಳ್ಳವಳು ಆಗುವಳು. ೧ನೆ ಪಾದ ಕುಜ ಅಧಿಪತಿ ದರಿದ್ರಾಂಶ,ಸದಾರೋಗಿ, ದರಿದ್ರ, ಅಸಂತೋಷಿ, ಧನ–ಧಾನ್ಯರಹಿತನಾಗುವನು. ೨ನೆ ಪಾದ ಶುಕ್ರ ಅಧಿಪತಿ ಭೋಕ್ತಾಂಶ, ದಯಾವಂತ, ಹಾಲು–ಸಿಹಿಯಲ್ಲಿ ಅಭಿಲಾಷೆ, ವಾಹನಸೌಕರ್ಯ, ಭೋಗಿ, ಸ್ತ್ರೀ ವಿಲಾಸೀ, ಸತ್ಕರ್ಮನಿರುತ. ಎಲ್ಲಾಕಾರ್ಯಗಳನ್ನು ಮಾಡುವಾತ ಆಗುವನು. ೩ನೆ ಪಾದ ಬುಧ ಅಧಿಪತಿ ವಿಚಕ್ಷಣಾಂಶ, ಧನಿಕ, ಖರ್ಚಿಕ,ವಿದ್ಯಾವಂತು, ವಾಕ್ಚತುರ, ಜ್ಯೋತಿಶ್ಯಾಸ್ತ್ರಾದಿ ಧರ್ಮಗಂಥಾಸಕ್ತ, ವಿನಯಿ, ಸರ್ಕಾದಿಂದ ಮಾನ್ಯ. ೪ನೆ ಪಾದ ಚಂದ್ರ ಅಧಿಪತಿ, ಶೋಭನಾಂಶ, ಶಾಂತಗುಣಿ, ವಿದ್ಯಾವಂತ,ಒಳ್ಳೆನಡತೆ,ಗ್ರಾಮಪುರಾಧಿಕಾರಿ, ವೇದಶಾಸ್ತ್ರಾಸಕ್ತ, ಪಶುವ್ಯಾಪಾರದಲ್ಲಿ ಚತುರ, ಬಹುಮಿತ್ರತುಳ್ಳವ, ಸತ್ಕರ್ಮಶೀಲ, ಗುಣೀ ಆಗುವನು. ೧೦ಸಂವತ್ಸರಗಳು ಚಂದ್ರದಶ. ೧ನೆ ಸಂವತ್ಸರದಲ್ಲಿ ಶೀತವಾತಾದಿ ಜ್ವರಭಯ, ೨ ವಾತಅಗ್ನಿಭಯ, ೫ ಪಶುಭಯ, ೮ ಗ್ರಹಬಾಧ, ೧೨ ಜಲಗಂಡ, ೧೬ ವಿಷಸರ್ಪಾದಿ ಭಯ ಇಲ್ಲವೆ ಮೇಲಿನಿಂದ ಬೀಳುವುದು, ೨೪ ಸ್ಫೋಟಕವಸ್ತು ಭಯ, ೩೦ ಸನ್ನಿಪಾತಾದಿ ಭಯ,೩೬ ಮಹಾರೋಗ, ೪೨ ಹಿತಶತ್ರುಗಳ–ದಾಯಾದಿಗಳ ಬಾಧೆ, ೪೫ ಅಜೀರ್ಣವಾಯು, ೬೨ ಶ್ವಾಸರೋಗದಿಂದ ಅಪಮೃತ್ಯುಭಯ, ಇವೆಲ್ಲ ಪರಿಹಾರವಾದರೆ ೭೮ ಸಂವತ್ಸರಗಳು ಪರಮಾಯುವು.

**ಧನಿಷ್ಠಾ:**–ಯಾವ ಪಾದದಲ್ಲಾದರೂ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭವು. ಧನಿಷ್ಟಾನಕ್ಷತ್ರ ಬಿಳಿಯಬಣ್ಣದ್ದು, ಮೃದಂಗಾಕಾರದ ೪ ನಕ್ಷತ್ರಗಳು, ಗಗಿಗುಗೆ ನಾಲ್ಕು ಅಕ್ಷರಗಳು, ಸ್ತ್ರೀರೂಪ, ಉಪಜೀವಕಜಾತಿ, ಕಂಠರಜ್ಜು, ರಾಕ್ಷಸಗಣ, ಊರ್ಧ್ವಮುಖ, ಅಂಧಲೋಚನ, ಚರ, ಇಂದ್ರಮಂಡಲ, ಸಮತಾರ, ಗ್ರಾಮಸ್ಥಾನ–ಅಂತರಿಕ್ಷಸ್ಥಾನ, ದ್ವಿಪಾದಿ, ಶಮೀವೃಕ್ಷ, ಸಿಂಹಯೋನಿ,ಪುರುಷ, ೨ಪಾದಗಳು ಮಕರರಾಶಿ ಶನಿ ಆಧಿಪತ್ಯ, ವೈಶ್ಯವರ್ಣ, ೩–೪ಪಾದಗಳು ಕುಂಭರಾಶಿ ಶನಿ ಅಧಿಪತ್ಯ,ಶೂದ್ರವರ್ಣ, ಮಧ್ಯನಾಡಿ, ಪುಲಸ್ತ್ಯಗೋತ್ರ, ಭ್ರಾಮರೀಪಕ್ಷಿ, ಆಕಾಶತತ್ವ, ಸ್ತ್ರೀಲಿಂಗ,ಉತ್ತರದಿಕ್, ಯೋಗಿನಿ ಚಾಮುಂಡೀ, ಗಜಾಯ, ದೇವತಾ ವಸು, ಅಧಿದೇವತಾ ವಿಷ್ಣು, ಪ್ರತ್ಯಧಿದೇವತಾ ವರುಣ. ಈ ನಕ್ಷತ್ರದಲ್ಲಿ ಬುಧ ಅವತರಿಸಿದನು. ೧೦ ಘಟಿ ನಂತರ ವಿಷನಾಡಿ, ೨೪ ಘಟಿ ನಂತರ ಅಮೃತನಾಡಿ. ಯಾತ್ರೆಗೆ ಶುಭವಾದದ್ದು, ಎಳ್ಳುಹುಡಿತಿಂದು ಎಲ್ಲಾ ದಿಕ್ಕಿಗೆ ಪ್ರಯಾಣ ಶುಭಕರ.



ಪ್ರಥಮರಜೋದರ್ಶನವಾದರೆ ಪತಿವ್ರತಾ,ಧರ್ಮಶೀಲಾ ಸೌಭಾಗ್ಯವುಳ್ಳವಳು ಆಗುವಳು. ಯಜ್ಞ–ವ್ರತದೀಕ್ಷಾ, ವಿದ್ಯಾರಂಭ,ವಾಹನ, ಯಾತ್ರಾ, ರಾಜ್ಯಾಭಿಷೇಕ, ಆಭರಣ, ಶಾಂತಿಕರ್ಮ, ನಿಷೇಕಕರ್ಣವೇಧಚೌಲೋಪನಯನಗಳು,ಕ್ಷೌರ,ಅಭ್ಯಂಗ, ವೈದ್ಯಕ, ನವ ವಸ್ತ್ರಾಭರಣ, ದೇವತಾ ಪ್ರತಿಷ್ಠಾ, ಗೃಹಪ್ರವೇಶಾರಂಭ, ಪುರಪ್ರವೇಶ, ಮಂತ್ರಾಭ್ಯಾಸ,ನೃತ್ಯಗೀತ ವಾದ್ಯಾರಂಭ, ಪಶುಗಳ ವ್ಯಾಪಾರ ಇತ್ಯಾದಿಗಳಿಗೆ ಪ್ರಶಸ್ತವು.

ಈ ನಕ್ಷತ್ರದಲ್ಲಿ ಜ್ವರ ಬಂದರೆ ೧೮ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೧೨ ದಿನಗಳು, ಸೋಮವಾರ ೭, ಮಂಗಳವಾರ ೧೮, ಬುಧವಾರ ೧೨, ಗುರುವಾರ ೧೦, ಶುಕ್ರವಾರ ೬, ಶನಿವಾರ ೧೪ ದಿನಗಳ ನಂತರ ಗುಣವು. ಶಾಂತಿಗೆ– ಬಿಳಿಬಣ್ಣದ ಲಾಂಗೂಲಪದ್ಮಾಭಯ ಉಳ್ಳ ಚತುರ್ಭುಜ ವಸುದೇವತ ಪ್ರತಿಮೆಯನ್ನು ಮಾಡಿ ಹಳದಿವಸ್ತ್ರ, ಜಾತೀಪುಷ್ಪಗಳಿಂದ ಪೂಜಿಸಿ ಪಾಯಸಾನ್ನ ನೈವೇದ್ಯಮಾಡಿ, ಅಷ್ಟೌದೇವಾ ಎಂಬ ಮಂತ್ರದಿಂದ ೧೦೮ ಅತ್ತಿಸಮಿಧೆ–ತುಪ್ಪಗಳಿಂದ ಅಹುತಿ ಕೊಟ್ಟು ಗಂಧ,ಹೂವು, ಹುಗ್ಗಿಯನ್ನು ಉತ್ತರ ದಿಕ್ಕಿಗೆ ಬಲಿ ಹಾಕಲು ೧೮ ದಿನಗಳಲ್ಲಿ ಗುಣವು. ಆದಿವಾರ ಉತ್ಪಾತ ಯೋಗ, ಸೋಮವಾರ ನಿರ್ಧನಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ವರಯೋಗ, ಗುರುವಾರ ಸಿದ್ಧಯೋಗ, ಶುಕ್ರವಾರ ನಾಶಯೋಗ, ಶನಿವಾರ ಯಮಕಂಟಕಯೋಗ, ಹುಣ್ಣಿಮೆಯಲ್ಲಿ ನಿರ್ಜೀವಯೋಗ, ಆಶ್ಲೇಷಾದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಆಷಾಢದಲ್ಲಿ ಶೂನ್ಯನಕ್ಷತ್ರ, ವಾಯುಘಾತ ಉತ್ಪಾತವಾದರೆ ಸುಭಿಕ್ಷ,ಭಯ, ಸಂಕ್ರಮಣವಾದರೆ ಮಧ್ಯಾರ್ಘವೃದ್ಧಿಯು. ಧನಿಷ್ಠಾ ೧ನೆ ಪಾದದಲ್ಲಿ ರೋಗ ಬಂದರೆ ೨೫ ದಿನಕ್ರೂರ, ೨ನೆ ಪಾದ ೨೦, ೩ನೆ ಪಾದ ೬೦, ೪ನೆ ಪಾದ ೧೧. ಕಳೆದ ವಸ್ತು ಬೇಗಸಿಗುವುದು.

ಗಂಡಾದರೆ ತೇಜಸ್ವೀ, ಬಹು ಕರ್ಮಕುಶಲ, ಬ್ರಹ್ಮದ್ವೇಷಿ, ಉಷ್ಣಪ್ರಕೃತಿ, ಕ್ರೂರಿ, ವ್ಯಸನಿ, ಲೋಭಿ, ದೊಡ್ಡಪಾದಗಳು, ಆಡಂಬರಸ್ವಭಾವ, ಬಹುಭಾಷಿ, ಕ್ಷಯರೋಗಿ ಯಾಗುವನು. ಹೆಣ್ಣಾದರೆ ಧನವತಿ, ಪುರಾಣದಲ್ಲಿ–ಧರ್ಮದಲ್ಲಿ ಆಸಕ್ತಿವುಳ್ಳವಳು, ಭೂತದಯವುಳ್ಳವಳು ಆಗುವಳು. ೧ನೆ ಪಾದ ರವಿ ಅಧಿಪತಿ ನೃಪಾಂಶ ಸ್ಥೂಲದೇಹ, ರಾಜಕಾರ್ಯಾಸಕ್ತ, ಸರ್ವಕರ್ಮಕುಶಲ, ಬಹುಭಾಷಿ, ಶೂರ ವಿಜಯಶಾಲಿ, ಸುಖೀ, ಸುಪುತ್ರವಂತ, ನಿದ್ರಾಲು, ಸಂಸಾರದಲ್ಲಿ ಭಯಉಳ್ಳವ, ಪಂಡಿತ. ೨ನೆ ಪಾದ ಬುಧ ಅಧಿಪತಿ ಸೌಮ್ಯಾಂಶ, ವಿನಯಿ, ಸಂಪನ್ನ, ಪಂಡಿತ, ಧನಾರ್ಜನಪರ, ರಾಜಸೇವಿ, ಧನಿಕ, ಬುದ್ಧಿವಂತ, ಒಳ್ಳೆಮಾತು, ವಿದ್ವನ್ಮಾನ್ಯ ಆಗುವನು. ೩ನೆ ಪಾದ ಶುಕ್ರ ಅಧಿಪತಿ ಅಭಯಾಂಶ ಶಾಂತಗುಣಿ, ಭವಿಷ್ಯ ತಿಳಿದವ, ಧನಿಕ, ಗುರುದೇವತಾ ಭಕ್ತ, ತ್ಯಾಗಿ, ಭಯಸ್ತ, ಕೀರ್ತಿಮಾನ್, ರಾಜಮಾನಿ, ವಿನಯಿ, ಸರ್ಕಾರದಿಂದ ಮಾನ, ಚತುರ, ಸಕಲಕರ್ಮಕರ್ತಾ, ಧರ್ಮಿಷ್ಟ,ಬಂಧಪ್ರೇಮಿ ಆಗುವನು. ೪ನೆ ಪಾದ ಕುಜ ಅಧಿಪತಿ, ಕ್ರೂರಾಂಶ, ಕ್ರೂರಕರ್ಮಿ, ಸದಾಕೋಪಿ, ಬಹುಬಾಷಿ, ರೋಗಿ, ವಂಚಕ, ಉತ್ಸಾಹಿ, ಮೂರ್ಖ, ಪರಾಕ್ರಮಿ ಆಗುವನು. ೭ ಸಂವತ್ಸರಗಳು ಕುಜದಶ. ೨೮ನೆ ದಿನದಲ್ಲಿ ಜ್ವರಭಯ,೩ನೆ

ವರ್ಷ ಸಹೋದರಪೀಡೆ, ೫ ಶೀತವಾತಾದಿಭಯ, ೭ ಭಯ, ೧೨ ಜಲಗಂಡ, ೧೬ ಕ್ರಿಮಿಕೀಟ ಭಯ, ೨೧ ಸನ್ನಿಪಾತಾದಿ ಭಯ,೩೦ ಚೋರಭಯ, ೩೬ ವಾಹನಾದಿಗಳಿಂದ ಬೀಳುವಿಕೆ, ೪೨ ಶತ್ರುಗಳ ಬಾಧೆ, ೫೦ ಅಹಾರದೋಷ, ೬೦ ಅಪಮೃತ್ಯು, ೬೪ ಶ್ವಾಸರೋಗದಿಂದ ಭಯ, ೭೨ ಅತಿಸಾರ ಇವೆಲ್ಲ ದಾಟಿದರೆ ೯೦ ಸಂವತ್ಸರಗಳು ಪರಮಾಯುವು.

**ಶತಭಿಷ:**–ಯಾವ ಪಾದದಲ್ಲಾದರೂ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭವು. ಶತಭಿಷನಕ್ಷತ್ರ ಬಂಗಾರದ ಬಣ್ಣದ್ದು, ಗೋಲಾಕಾರದ ೧೦೦ ನಕ್ಷತ್ರಗಳು, ಗೋಸಾಸಿಸು ನಾಲ್ಕು ಅಕ್ಷರಗಳ, ಸ್ತ್ರೀರೂಪ, ಕ್ಷತ್ರಿಯಜಾತಿ, ಕಂಠರಜ್ಜು, ರಾಕ್ಷಸಗಣ, ಊರ್ಧ್ವಮುಖ, ಮಂದಲೋಚನ, ಚರಂ, ವರುಣಮಂಡಲ, ಸಮತಾರ, ಶೂನ್ಯಸ್ಥಾನ, ಚತುಷ್ಪಾತ್, ಕದಂಬವೃಕ್ಷ, ಅಶ್ವಯೋನಿ,ಪುರುಷ, ಕುಂಭರಾಶಿ ಶನಿ ಅಧಿಪತ್ಯ,ಶೂದ್ರವರ್ಣ, ಆದಿನಾಡಿ, ಕ್ರತುಗೋತ್ರ, ಕೋಕಿಲಪಕ್ಷಿ, ಆಕಾಶತತ್ವ,ನಪುಂಸಕಲಿಂಗ,ಈಶಾನ್ಯದಿಕ್, ಯೋಗಿನಿ ಮಾಹೇಶ್ವರೀ, ಕಾಕಾಯ, ದೇವತಾ ವರುಣ, ಅಧಿದೇವತಾ ವಸು, ಪ್ರತ್ಯಧಿದೇವತಾ ಅಜೈಕಪಾತ್. ಈ ನಕ್ಷತ್ರದಲ್ಲಿ ವರುಣನು ಅವತರಿಸಿದನು. ೧೮ ಘಟಿ ನಂತರ ವಿಷನಾಡಿ, ೩೪ ಘಟಿ ನಂತರ ಅಮೃತನಾಡಿ. ಯಾತ್ರೆಗೆ ಶುಭವಾದದ್ದು. ಅಕ್ಕಿಯನ್ನು ತಿಂದು ಪೂರ್ವೋತ್ತರದಿಕ್ ಪ್ರಯಾಣ ಶುಭಕರ.

ಪ್ರಥಮರಜೋದರ್ಶನವಾದರೆ ಸಂತತಿವೃದ್ಧಿ, ಕಿಂಚಿತ್ ಕೋಪವೃದ್ಧಿ ಆಗುವುದು. ಬೋರುಬಾವಿತೆಗೆಸುವುದು, ಅಂಜನಕರ್ಮ, ತೋಟ ಕೃಷಿ, ಪ್ರವಾಳಮುಕ್ತಾಮಣಿ ಸಂಗ್ರಹ, ವಾಹನಾರೋಹಣ, ಶಾಂತಿಪೌಷ್ಟಿಕಜಪ ಹೋಮಗಳು, ದಾನ,ಶಿಲ್ಪಕರ್ಮ, ನಿಷೇಕ,ಸೀಮಂತ ಇತ್ಯಾದಿಷೋಡಶಕರ್ಮ, ತೈಲಾಭ್ಯಂಗ,ರಾಜ್ಯಾಭಿಷೇಕ, ದೇವತಾಸ್ಥಾಪನ, ಮುಕ್ತಾದ್ಯಾಭರಣ ಗಳು, ಸೇತುಬಂಧನ, ನೀರಿನ ಕೆಲಸಗಳು, ಪಶುಕ್ರಯವಿಕ್ರಯ, ವಾಸ್ತುಶಾಂತ್ಯಾದಿ ಶುಭಕರ್ಮಾದಿ ಗಳಿಗೆ ಪ್ರಶಸ್ತವು.

ಈ ನಕ್ಷತ್ರದಲ್ಲಿ ಜ್ವರ ಬಂದರೆ ೨೬ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೧೨ ದಿನಗಳು, ಸೋಮವಾರ ೧೦, ಮಂಗಳವಾರ ೨೬, ಬುಧವಾರ ೧೮, ಗುರುವಾರ ೨೪, ಶುಕ್ರವಾರ ೧೦, ಶನಿವಾರ ೨೦ ದಿನಗಳ ನಂತರ ಗುಣವು. ಶಾಂತಿಗೆ– ಬಿಳಿಯಬಣ್ಣದ ಪಾಶಾಂಕುಶಗಳನ್ನು ಧರಿಸಿದ ದ್ವಿಭುಜ ಮಕರವಾಹನ ವರುಣದೇವತೆ ಪ್ರತಿಮೆಯನ್ನು ಮಾಡಿ ಬಿಳಿವಸ್ತ್ರ, ನೀಲೋತ್ಪಲಪುಷ್ಪಗಳಿಂದ ಪೂಜಿಸಿ ಘೃತಾಕ್ತಮಾಷಾನ್ನ ನೈವೇದ್ಯಮಾಡಿ, <u>ಇಮಂಮೇ ವರುಣ</u> ಎಂಬ ಮಂತ್ರದಿಂದ ೧೦೮ ಜೇನು–ತುಪ್ಪಗಳಿಂದ ಅಹುತಿ ಕೊಟ್ಟು ಗಂಧ,ಹೂವು, ಕ್ಷೀರಾನ್ನವನ್ನು ಉತ್ತರ ದಿಕ್ಕಿನಲ್ಲಿ ಬಲಿ ಹಾಕಲು ತಕ್ಷಣ ಗುಣವು. ಆದಿವಾರ ವಿಷಯೋಗ, ಸೋಮವಾರ ನಂದಾತಿಥಿಯಲ್ಲಿ ವರಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ಆನಂದಯೋಗ, ಗುರುವಾರ ಶುಭಯೋಗ, ಶುಕ್ರವಾರ ಷಷ್ಟಿಯಲ್ಲಿ ತ್ರಿಪುಷ್ಕರಯೋಗ, ಶನಿವಾರ ಕಂಟಕಯೋಗ, ಹುಣ್ಣಿಮೆಯಲ್ಲಿ ನಿರ್ಜೀವಯೋಗ ಸ್ವಾತಿಯಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಆಷಾಢದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ಹೈನ–ಧಾನ್ಯಗಳ ವೃದ್ಧಿ, ಕಾಮನಬಿಲ್ಲು ಕಂಡರೆ



ಶುಭವೃಷ್ಟಿ, ಘನಘರ್ಜನೆಯಿಂದ ಸರ್ವತ್ರ ವೃಷ್ಟಿ, ಸಂಕ್ರಮಣವಾದರೆ ಮಧ್ಯಾರ್ಘವೃದ್ಧಿಯು. ಶತಭಿಷ ೧ನೆ ಪಾದದಲ್ಲಿ ರೋಗಬಂದರೆ ೭ ದಿನಕ್ರೂರ, ೨ ನೆ ಪಾದ ೧೧, ೩ನೆ ಪಾದ ಅಸಾಧ್ಯ, ೪ನೆ ಪಾದ ೪೦ ದಿನಕ್ರೂರ. ಕಳೆದ ವಸ್ತು ೩ ದಿನದಲ್ಲಿ ಸಿಗುವುದು.

ಗಂಡಾದರೆ ಸುಂದರ, ಶತ್ರುಗಳನ್ನು ಲೆಕ್ಕಮಾಡದವ, ಚಿರಾಯುವು, ವ್ಯವಹಾರಕುಶಲ, ರೋಗಿ, ಅಲ್ಪಜ್ಞ, ದೀರ್ಘನಾಸಿಕ, ದುಷ್ಟಸ್ವಭಾವ, ಭಾರ್ಯೆಯನ್ನು ಪ್ರೀತಿಸುವವ ಆಗುವನು. ಹೆಣ್ಣಾದರೆ ದಾನ–ಧರ್ಮಾಸಕ್ತೆ ದೈವಭಕ್ತೆ,ಚತುರೆ,ಧನಿಕಳು, ಸಂತಾನವುಳ್ಳವಳು ಆಗುವಳು. ೧ನೆ ಪಾದ ಗುರು ಅಧಿಪತಿ ಉತ್ಪನ್ನಾಂಶ ಗೋಬ್ರಾಹ್ಮಣಪೂಜಾರತ, ಸತ್ಯವಾದಿ, ಸ್ಥಿರಮತಿ, ಅಭಿಮಾನಿ ಸ್ನೇಹಜೀವಿ, ಅತಿಥಿಪೂಜಕ, ಮೃದುಭಾಷಿ,ದಾನಧರ್ಮರತ, ಬಹುಮಿತ್ರರುಳ್ಳವ, ಪರಾಕ್ರಮಿ, ಪರೋಪಕಾರಿ, ಬಂಧುಪ್ರಿಯ ಆಗುವನು. ೨ನೆ ಪಾದ ಶನಿ ಅಧಿಪತಿ ಪಾಪಾಂಶ ಭಯಸ್ಥ, ಸಂಶಯಾತ್ಮಾ, ಬಂಧುವಿರೋಧಿ, ನಯವಂಚಕ, ದುಃಖಿ, ಮೂರ್ಖ, ಉಗ್ರಪ್ರತಾಪಿ, ಪಿತೃವರ್ಜಿತ, ವಿದೇಶಸಂಚಾರಿ, ಸ್ತ್ರೀಯಿಂದ ಚಾಂಚಲ್ಯಹೊಂದಿದ ಭ್ರಮಿಷ್ಟ. ೩ನೆ ಪಾದ ಶನಿ ಅಧಿಪತಿ ಭಯಾಂಶ ಪಾಪಚಿಂತಕ, ಮಂದಬುದ್ಧಿ, ಪುತ್ರವಂತ, ಉಗ್ರಕರ್ಮರತ, ನಾನಾದೇಶಸಂಚಾರಶೀಲ, ಆಲಸಿ, ಪರದ್ರವ್ಯ ಆಶಿಸುವವ, ಮುದಿತನದಲ್ಲಿ ರೋಗಗ್ರಸ್ತ, ಸತ್ಯಾಚಾರಹೀನ ಆಗುವನು. ೪ನೆ ಪಾದ ಗುರು ಅಧಿಪತಿ, ಸೌಮ್ಯಾಂಶ ಸ್ನೇಹಜೀವಿ, ಪಂಡಿತ, ಯಜ್ಞಾದಿಕರ್ಮರತ, ಶಾಸ್ತ್ರಾದಿಗಳು ತಿಳಿದವ, ಅಭಿಮಾನಿ, ಬಂಧುಪೂಜಿತ, ಪರೋಪಕಾರಿ, ದೇವಪೂಜಾಸಕ್ತ, ರಾಜಾಧಿಕಾರ ಉಳ್ಳವ ಆಗುವನು.

೧೮ ಸಂವತ್ಸರಗಳು ರಾಹುದಶ. ೩ಸಂವತ್ಸರದಲ್ಲಿ ಜ್ವರಭಯ, ೫ ಸ್ಫೋಟಕಾ ದಿ ಭಯ, ೧೦ ಶೀತವಾತದಿ ಭಯ, ೧೬ ಜಲಗಂಡ, ೨೪ ವಿಷಸರ್ಪಾದಿಬಾಧೆ, ೩೨ ದುಷ್ಟರಿಂದ ಮಾಟದಭಯ, ೪೨ ಜ್ವರಾದಿ ಬಾಧೆ, ೫೪ ಅಪಮೃತ್ಯುಭಯ, ೬೦ ಅಪಮೃತ್ಯುಭಯ, ೬೮ ಮೇಲಿನಿಂದ ಬೀಳುವ ಭಯ, ಇವೆಲ್ಲ ದಾಟಿದರೆ ೮೦ ಸಂವತ್ಸರಗಳು ಪರಮಾಯುವು.

**ಪೂರ್ವಾಭಾದ್ರಾ:**–ಯಾವ ಪಾದದಲ್ಲಾದರೂ ಎಂತಹ ಶಿಶುಜನಿಸಿದರೂ ಸಾಮಾನ್ಯದೋಷವು. ಅದಕ್ಕೆ ತಂದೆಯು ಮಂತ್ರಸಹಿತವಾಗಿ ಎಣ್ಣೆಯಲ್ಲಿ ಶಿಶುಮುಖದರ್ಶನ ಮಾಡುವುದು ಒಳ್ಳೆಯದು. ಪೂರ್ವಾಭಾದ್ರನಕ್ಷತ್ರ ಕಪ್ಪುಬಣ್ಣದ್ದು, ಮಂಚಾಕಾರದ ೨ ನಕ್ಷತ್ರಗಳು, ಸೇಸೋದದಿ ನಾಲ್ಕು ಅಕ್ಷರಗಳು, ಸ್ತ್ರೀರೂಪ, ಬ್ರಾಹ್ಮಣಜಾತಿ, ಕಂಠರಜ್ಜು, ಮನುಷ್ಯಗಣ, ಅಧೋಮುಖ, ಮಧ್ಯಲೋಚನ, ಉಗ್ರ, ಇಂದ್ರಮಂಡಲ, ಸಮತಾರ, ಪಟ್ಟಣಸ್ಥಾನ, ತ್ರಿಪಾತ್, ಕದಂಬವೃಕ್ಷ, ಸಿಂಹಯೋನಿ,ಪುರುಷ, ತ್ರಿಪಾದಗಳ ವರೆಗೆ ಕುಂಭರಾಶಿ ಶನಿ ಅಧಿಪತ್ಯ,ಶೂದ್ರ ವರ್ಣ, ಚತುರ್ಥಪಾದ ಮೀನರಾಶಿ ಗುರುಅಧಿಪತಿ, ಬ್ರಾಹ್ಮಣವರ್ಣ,ಆದಿನಾಡಿ, ಕ್ರತುಗೋತ್ರ, ಮಯೂರಪಕ್ಷಿ, ಆಕಾಶತತ್ವ,ಪುಂಲಿಂಗಂ,ಹೃದಯರಜ್ಜು,ಇಂದ್ರದಿಕ್, ಯೋಗಿನಿ ಬ್ರಾಹ್ಮೀ, ಧ್ವಜಾಯ. ದೇವತಾ ಅಜೈಕಪಾತ್, ಅಧಿದೇವತಾ ವರುಣ, ಪ್ರತ್ಯಧಿದೇವತಾ ಅಹಿರ್ಬುಧ್ನ. ಈ ನಕ್ಷತ್ರದಲ್ಲಿ ಕಿನ್ನರನು ಅವತರಿಸಿದನು. ೧೬ ಘಟಿ ನಂತರ ವಿಷನಾಡಿ, ೪೦ ಘಟಿ ನಂತರ ಅಮೃತನಾಡಿ.ಯಾತ್ರೆಗೆ

ವರ್ಜ್ಯವು. ಜೇನುತಿಂದು ಪೂರ್ವೋತ್ತರದಿಕ್ ಪ್ರಯಾಣ ಶುಭಕರ.

ಪ್ರಥಮರಜೋದರ್ಶನವಾದರೆ ೧ ಪತಿಹೀನಾ, ೨ ಕುಲಟಾ, ೩ ದರಿದ್ರತಾ, ೪ ಪುತ್ರಹೀನಾ ಆಗುವಳು. ವಿದ್ಯಾರಂಭ,ಬೋರುಬಾವಿತೆಗೆಸುವುದು, ಘಾತುಕಕರ್ಮ, ಪ್ರೇತಾದ್ಯಾವಾಹನ, ವಾಹನಾರೋಹಣ, ತತ್ವವಾದ, ಮಂತ್ರತಂತ್ರಪ್ರಯೋಗ, ಶಸ್ತ್ರಕರ್ಮ, ವಿದ್ಯಾರಂಭ, ಆನೆಹಿಡಿಯುವುದು, ಸಂಗ್ರಹ, ಗ್ರಾಮಪ್ರವೇಶ, ಅಭಿಚಾರ, ಚೌರ್ಯ, ಕಲಹ, ದ್ಯೂತ, ಬಂಧನ, ಗುಹಾಪ್ರವೇಶ, ಶತ್ರುನಾಶನ, ಭೂತೋಚ್ಚಾಟನ, ಧಾತುವಾದ, ಮಾಂಸಾದಿ ವ್ಯಾಪಾರ, ವೃಕ್ಷಲತಾ ಛೇದನ, ಮಿತ್ರಭೇದ, ಯುದ್ಧಾದಿ ಕ್ರೂರಕರ್ಮಗಳಿಗೆ ಒಳ್ಳೆಯದು.

ಈ ನಕ್ಷತ್ರದಲ್ಲಿ ಜ್ವರ ಬಂದರೆ ಪ್ರಾಣಭಯ ಇಲ್ಲವೆ ೩೦ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೧೨ ದಿನಗಳು, ಸೋಮವಾರ ೧೦, ಮಂಗಳವಾರ ೨೬, ಬುಧವಾರ ೧೮, ಗುರುವಾರ ೨೪, ಶುಕ್ರವಾರ ೧೦, ಶನಿವಾರ ೨೦ ದಿನಗಳ ನಂತರ ಗುಣವು. ಶಾಂತಿಗೆ– ಕೆಂಬಣ್ಣದ್ ಅಕ್ಷಸೂತ್ರ ಕಮಂಡಲು ಧರಿಸಿದ ಚತುರ್ಭುಜಗಳ ಅಜೈಕಪಾದ್‌ದೇವತ ಪ್ರತಿಮೆಯನ್ನು ಮಾಡಿ ಕೆಂಪುವಸ್ತ್ರ, ಎಕ್ಕೆಪುಷ್ಪಗಳಿಂದ ಪೂಜಿಸಿ ದಧ್ಯೋದನ ನೈವೇದ್ಯ ಮಾಡಿ ಶಂನೋ ದೇವೀ ಎಂಬ ಮಂತ್ರದಿಂದ ೧೦೮ ಕುಂಬಳ–ತುಪ್ಪ ಅಹುತಿ ಕೊಟ್ಟು ಗಂಧ,ಹೂವು, ಕುಂಬಳಗೋಧೂಮಾನ್ನವನ್ನು ಉತ್ತರದಿಕ್ಕಿಗೆ ಬಲಿ ಹಾಕಲು ತಿಂಗಳಲ್ಲಿ ಗುಣವು. ಆದಿವಾರ ಸ್ಥಿರಯೋಗ, ಸೋಮವಾರ ನಾಶಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ಸೌಮ್ಯಯೋಗ, ಗುರುವಾರ ನಾಶಯೋಗ, ಶುಕ್ರವಾರ ಮೃತ್ಯುಯೋಗ, ಶನಿವಾರಂ ನಾಶಯೋಗ, ಭದ್ರಾತಿಥಿಯಲ್ಲಿ ನಿರ್ಜೀವಯೋಗ, ಚಿತ್ರಾದಲ್ಲಿ ಕ್ರೂರರಿದ್ದರೆ ಮಹಾಶೂಲ ಯೋಗ, ಆಶ್ವೀನದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ಕಾಮನ ಬಿಲ್ಲು ಕಂಡರೆ, ಭಯಂಕರ ಪರಿವೇಷ ಕಂಡರೆ ಪ್ರಜರಿಗೆ ಪೀಡಾಕರ, ಘನಘರ್ಜನದಿಂದ ಸರ್ವತ್ರ ವೃಷ್ಟಿ, ಸಂಕ್ರಮಣವಾದರೆ ಮಧ್ಯಾರ್ಘವೃದ್ಧಿಯು. ಪೂರ್ವಾಭಾದ್ರಾ ೧ನೆ ಪಾದ ರೋಗಬಂದರೆ ೦ ದಿನಕ್ರೂರ, ೨ನೆ ಪಾದ ೩೯, ೩ನೆ ಪಾದ ೦ ದಿನಕ್ರೂರ, ೪ನೆ ಪಾದ ೧೧ ದಿನಕ್ರೂರ. ಇನ್ನು ಕೆಲವು ಕ್ರೂರಯೋಗಗಳ ಕಲೆತರೆ ಪ್ರಾಣಕ್ಕೆ ಮುಪ್ಪು. ಕಳೆದವಸ್ತು ಸಿಗುವುದು ಕಷ್ಟ.

ಗಂಡಾದರೆ ಉದಾರಿ,ಜ್ಞಾನಿ, ವಿನಯಿ, ಬಹುಪುತ್ರವಂತ, ಶುಭಕಾರ್ಯನಿರುತ, ದೀರ್ಘಜಿಹ್ವ, ಕಿವಿರೋಗಿ,ದುರಭ್ಯಾಸವುಳ್ಳವ, ಸ್ತ್ರೀಲೋಲ, ರಹಸ್ಯವಾಗಿ ಅಪರಾಧಮಾಡುವವ, ಪರನಿಂದಕ,ಶೂರ, ಅಧರ್ಮಕಾರ್ಯಾಸಕ್ತನಾಗುವನು. ಹೆಣ್ಣಾದರೆ ಧನವತಿ, ದೈವಭಕ್ತೆ, ಅದೃಷ್ಟವುಳ್ಳ ಸಂತಾನ ಉಳ್ಳವಳು, ವಿದ್ಯಾವಿನಯ ಸಂಪನ್ನಳು, ಹಿರಿಯರನು ಗೌರವಿಸುವಾಕೆ ಆಗುವಳು. ೧ನೆ ಪಾದ ಕುಜ ಅಧಿಪತಿ ಸೇನಾಂಶ ಉದ್ಯೋಗಿ, ವಿಷ್ಣುಪೂಜಾಸಕ್ತ, ಭೋಗೀ, ಕ್ರೂರಿ, ಮೂರ್ಖ, ಬಂಧುದ್ವೇಷಿ, ಲೋಭಿ, ಕಲಹಪ್ರಿಯ, ಪರದ್ರವ್ಯಾಪಹಾರೀ, ಸ್ತ್ರೀಲೋಲ ಆಗುವನು. ೨ನೆ ಪಾದ ಶುಕ್ರ ಅಧಿಪತಿ ಭೋಗಾಂಶ ಸಾಹಸಿ, ಮಂತ್ರರತ, ಭೂತವೈರಿ, ನಾನಾ ವ್ಯಾಪರರತ, ಗಂಧಮಾಲ್ಯಾದಿ ಪ್ರಿಯ, ಅಧಿಕಮಿತ್ರರು, ಒಳ್ಳೆಮಾತು, ಕವಿ, ಚತುರ, ತೀರ್ಥಯಾತ್ರೆಮಾಡುವವ,



ಬಂಧು ಸಹಕಾರಿ. ೩ನೆ ಪಾದ ಬುಧ ವಿಚಕ್ಷಣಾಂಶ ಸುಖಿ, ತಂದೆಗೆ ಪ್ರಿಯ, ಜ್ಞಾನೀ, ಭೋಗೀ, ಅನೇಕಕೆಲಸಗಳನ್ನು ಮಾಡುವವ, ಧನಿಕ, ಬಂಧುಮಾನ್ಯ, ಶಾಸ್ತ್ರಾದಿಗಳನ್ನು ತಿಳಿದವ, ೪ನೆ ಪಾದ ಚಂದ್ರ ಅಧಿಪತಿ ಧನಾಂಶ ಸ್ತ್ರಿಯರಿಗೆ ಪ್ರಿಯ, ಲೋಕಪೂಜ್ಯ, ಧನಿಕ, ಮಾತೃಭಕ್ತ, ಕೀರ್ತಿಶಾಲಿ, ಎಲ್ಲರಿಂದ ಗೌರವ ಹೊಂದುವವ, ಸಂಗೀತ ಪ್ರಿಯ, ಬಂದುಮಾನ್ಯ, ಬಂಗಾರಭೂಷಣಪ್ರಿಯ, ಪರೋಪಕಾರಿ, ರಾಜಪೂಜ್ಯ ಆಗುವನು. ೧೬ ಸಂವತ್ಸರಗಳು ಗುರುದಶ. ೧ಸಂವತ್ಸರದಲ್ಲಿ ೧ಮಾಸದಲ್ಲಿ ಶೀತವಾತಾದಿಭಯ, ೨ ವಾತವೃದ್ಧಿ, ಅಜೀರ್ಣದಿಂದ ಜ್ವರಭಯ, ೮ ಸ್ಫೋಟಕಾದಿ ಉಷ್ಣೋಪದ್ರವ, ೧೨ ಸನ್ನಿಪಾತಾದಿ ಭಯ, ೧೬ ಜಲಗಂಡ, ೨೦ ವಿಷಸರ್ಪಾದಿಬಾಧೆ, ೨೪ ಮೇಲಿನಿಂದ ಬೀಳುವಿಕೆ, ೩೬ ಶತ್ರುಮೂಲಕ ದಯಾದಿಬಾಧೆ, ೪೮ ಸನ್ನಿಪಾತಾದಿ ರೋಗ, ೬೦ ರಾಜಕೋಪ–ಅಗ್ನಿ– ಅಪಮೃತ್ಯುಭಯ, ೬೮ ಶ್ವಾಸಕಾಸಾದಿ ಬಾಧಾ ಅಪಮೃತ್ಯುಭಯ, ಇವೆಲ್ಲ ದಾಟಿದರೆ ೮೨ ಸಂವತ್ಸರಗಳು ಪರಮಾಯುವು.

**ಉತ್ತರಾಭಾದ್ರಾ:**–ಯಾವ ಪಾದದಲ್ಲಾದರೂ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭವು. ಉತ್ತರಾಭಾದ್ರನಕ್ಷತ್ರ ಬಿಳಿಬಣ್ಣದ್ದು, ಮಂಚಾಕಾರದ ೨ ನಕ್ಷತ್ರಗಳು, ದುಝಜಥ ನಾಲ್ಕು ಅಕ್ಷರಗಳು, ಸ್ತ್ರೀರೂಪ, ಬ್ರಾಹ್ಮಣಜಾತಿ, ಕಂಠರಜ್ಜು, ಮನುಷ್ಯಗಣ, ಅಧೋಮುಖಿ, ಸುಲೋಚನ, ಉಗ್ರ, ಇಂದ್ರಮಂಡಲ, ಸಮತಾರ, ಪಟ್ಟಣಸ್ಥಾನ, ಚತುಷ್ಪಾತ್, ಕದಂಬವೃಕ್ಷ, ಗೋಯೋನಿ,ಪುರುಷ, ಚತುಷ್ಪಾದ, ಮೀನರಾಶಿ ಗುರುಅಧಿಪತಿ, ಮಧ್ಯನಾಡಿ, ಕ್ರತುಗೋತ್ರ, ಮಯೂರಪಕ್ಷಿ, ಆಕಾಶತತ್ವ,ಪುಂಲಿಂಗ, ಊರುರಜ್ಜು,ಅಗ್ನಿದಿಕ್, ಯೋಗಿನಿ ಕೌಮಾರಿ, ಧೂಮ್ರಾಯ. ದೇವತಾ ಅಹಿರ್ಬುದ್ನ, ಅಧಿದೇವತಾ ಅಜೈಕಪಾತ್, ಪ್ರತ್ಯಧಿದೇವತಾ ಪೂಷಾ. ಈ ನಕ್ಷತ್ರದಲ್ಲಿ ಕಿನ್ನರನು ಅವತರಿಸಿದನು. ೨೪ ಘಟಿ ನಂತರ ವಿಷನಾಡಿ, ೪೮ ಘಟಿ ನಂತರ ಅಮೃತನಾಡಿ. ಯಾತ್ರೆಗೆ ವರ್ಜ್ಯ. ಶಾಲಿತಂಡುಲ ತಿಂದು ಸರ್ವದಿಕ್ ಪ್ರಯಾಣ ಶುಭಕರ.

ಪ್ರಥಮರಜೋದರ್ಶನವಾದರೆ ಪುತ್ರವತಿ, ಸೌಭಾಗ್ಯವತಿ ಆಗುವಳು. ವಿದ್ಯಾರಂಭ, ಬೋರುಬಾವಿತೆಗೆಸುವುದು, ನಿಷೇಕಾದಿಷೋಡಕರ್ಮಗಳು, ತತ್ವವಾದ, ವಸ್ತ್ರಾಭೂಷಣಗಳು, ಸಮಸ್ತವಿದ್ಯಾರಂಭ, ಸಿಂಹಾಸನ–ಆಂದೋಳಿಕಾರೋಹಣ, ಸಮಸ್ತವಸ್ತುಸಂಗ್ರಹ, ಗ್ರಾಮಪ್ರವೇಶ, ವೃಕ್ಷಲತಾದಿ ನೆಡುವಿಕೆ, ವೈದ್ಯಕ, ತೀರ್ಥಯಾತ್ರಾ, ದಾನ–ಧರ್ಮ–ಪರೋಪಕಾರಗಳಿಗೆ ಒಳ್ಳೆಯದು.

ಈ ನಕ್ಷತ್ರದಲ್ಲಿ ಜ್ವರ ಬಂದರೆ ಪ್ರಾಣಭಯ ಇಲ್ಲವೆ ೧೭ ದಿನಗಳು ಅರಿಷ್ಟ. ಆದಿವಾರ ರೋಗ ಬಂದರೆ ೫ ದಿನಗಳು, ಸೋಮವಾರ ೯, ಮಂಗಳವಾರ ೧೦, ಬುಧವಾರ ೧೪, ಗುರುವಾರ ೮, ಶುಕ್ರವಾರ ೧೭, ಶನಿವಾರ ೧೬ ದಿನಗಳ ನಂತರ ಗುಣವು. ಶಾಂತಿಗೆ– ಬಿಳೀಬಣ್ಣದ ಪರಶು, ಅಭಯವುಳ್ಳ ದ್ವಿಭುಜಗಳು ಅಜೈಕಪಾದ್‌ದೇವತೆ ಪ್ರತಿಮೆ ಯನ್ನು ಮಾಡಿ ಶ್ವೇತವಸ್ತ್ರ, ಶತಪತ್ರಪುಷ್ಪಗಳಿಂದ ಪೂಜಿಂಸಿ ಗುಡೋದನ್ನೈವೇದ್ಯ ಮಾಡಿ, ವಿಷ್ಣುರ್ಯೋನಿ ಎಂಬ ಮಂತ್ರದಿಂದ ಪೂಜಿಸಿ ೧೦೮ ಕ್ಷೀರಸಮಿತ್–ತುಪ್ಪಗಳಿಂದ ಅಹುತಿ ಹಾಕಿ ಗಂಧ,ಹೊವು, ಬೆಲ್ಲಾನ್ನವನ್ನು ಪೂರ್ವದಿಕ್ಕಿಗೆ ಬಲಿ ಹಾಕಲು ೫ ದಿನಗಳಲ್ಲಿ ಗುಣವು. ಆದಿವಾರ ಸಿದ್ಧಯೋಗ,

ಸೋಮವಾರ ಶುಭಯೋಗ, ಮಂಗಳವಾರ ಮೃತ್ಯುಯೋಗ, ಬುಧವಾರ ಅಮೃತಸಿದ್ಧಿಯೋಗ, ಗುರುವಾರ ಶುಭಯೋಗ, ಶುಕ್ರವಾರ ವರಯೋಗಂ, ಶನಿವಾರ ನಾಶಯೋಗ, ಭದ್ರಾತಿಥಿಯಲ್ಲಿ ನಿರ್ಜೀವಯೋಗ, ಹಸ್ತಾದಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಆಶ್ವೀನದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ಬಹುಧಾನ್ಯವೃದ್ಧಿಯು, ಘನಘರ್ಜನದಿಂದ ಅರಿಷ್ಟವು, ಸಂಕ್ರಮಣವಾದರೆ ಮಧ್ಯಾರ್ಘವೃದ್ಧಿಯು.

ಗಂಡಾದರೆ ಧನಿಕ, ಧಾರ್ಮಿಕ, ಅಭಿವೃದ್ಧಿಹೊಂದುವಾತ, ಧೈರ್ಯವಂತ, ನೀತಿವಂತ, ಅಲಸಿ, ಚಪಲ, ಬಂಧುಪ್ರೇಮಿ, ಸಜ್ಜನಹಿತಕಾರಿ, ನ್ಯಾಯವಾಗಿ ಧನಸಂಪಾದಿಸುವವ, ಒಳ್ಳೆ ಮಾತು, ಶತ್ರುಜಯಿ ಅಗುವನು. ಹೆಣ್ಣಾದರೆ ಶಾಂತಸ್ವಭಾವಿ, ಸಹಿಷ್ಣು, ಕ್ಷಮಾಶೀಲ, ಸತ್ಸಂತಾನವತಿ, ಗೌರವವುಳ್ಳವಳು ಆಗುವಳು. ೧ನೆ ಪಾದ ರವಿ ಅಧಿಪತಿ ತೀಕ್ಷ್ಣಾಂಶ ಚಂಚಲ, ಕೋಪಿ, ಕೆಂಗಣ್ಣು, ಪೈತ್ಯ–ಪೇತಲಶರೀರ, ಹಸಿವುಳ್ಳವ, ಕಾಮೀ, ಸ್ತ್ರೀದ್ವೇಷೀ, ಭ್ರಮಿಷ್ಟ, ವಿದೇಶಸಂಚಾರಿ, ಕುಲಸಂತಾಪಿ ಆಗುವನು. ೨ನೆ ಪಾದ ಬುಧ ಅಧಿಪತಿ ಜ್ಞಾನಾಂಶ, ಕರ್ಮಜ್ಞ, ಸುಗುಣಿ, ಗುಣಗ್ರಾಹಿ, ಅನೇಕವ್ಯವಹಾರ ಚತುರ, ಬಂಧುಪ್ರಿಯ, ಜಿತೇಂದ್ರಿಯ, ಪಂಡಿತ, ಸುಂದರ, ಸುಖೀ, ಕವಿ ಆಗುವನು. ೩ನೆ ಪಾದ ಶುಕ್ರ ಅಭಯಾಂಶ, ಮೇಧಾವಿ, ಪಂಡಿತ, ಭೋಗಿ, ಪರೋಪಕಾರಿ, ದಾನಿ, ಗುಣಗ್ರಾಹಿ, ಪರೇಂಗಿತಜ್ಞ, ದೈವಭಕ್ತ, ಶಾಸ್ತ್ರನಿರತ, ಶೂರ, ಮಾತುತಪ್ಪದವ,ತೇಜಸ್ವೀ, ಸುಗುಣಿ ಆಗುವನು. ೪ನೆ ಪಾದ ಕುಜ ಅಧಿಪತಿ ಉಗ್ರಾಂಶ, ಉದಾರಿ, ಮಲಿನ, ನಿಷ್ಠೂರಭಾಷಿ, ಬಹುವಿರೋಧಿ, ಮೂರ್ಖ, ಪರವಿತ್ತಾಪಹಾರಿ, ಪೇತಲಶರೀರ, ರೋಗಿ, ಕ್ರೋಧಿ, ಕಲಹಪ್ರಿಯುಡು, ಕಾರ್ಯವಿಘಾತಿ, ಲೋಭಿ, ಬಲಿಷ್ಟ ಆಗುವನು. ಉತ್ತರಾಭಾದ್ರಾ ೧ನೆ ಪಾದದಲ್ಲಿ ರೋಗ ಬಂದರೆ ೧೧ ದಿನಕ್ರೂರ, ೨ನೆ ಪಾದ ೧೫, ೩ನೆ ಪಾದ ೩೦, ೪ನೆ ಪಾದ ೩೦. ಕಳೆದ ವಸ್ತು ಬೇಗಸಿಗುವುದು ಕಷ್ಟ.

೧೯ ಸಂವತ್ಸರಗಳು ಶನಿದಶ. ೨ನೆಮಾಸದಲ್ಲಿ ೨ನೆಸಂವತ್ಸರದಲ್ಲಿ ಶೀತವಾತಾದಿಭಯ ೬ನೆಮಾಸದಲ್ಲಿ ೬ನೆ ಸಂವತ್ಸರದಲ್ಲಿ ವಿಷಮಶೀತ ವಾತಾದಿಬಾಧ, ೮ ಶೀತೋಪದ್ರವ, ೧೨ ಕ್ರಿಮಿಕೀಟಾದಿ ಭಯ, ೧೬ ಜಲಗಂಡ, ೨೨ ಉದರವ್ಯಾಧಿ, ೩೦ ಮೃಗಭಯ ಇಲ್ಲವೆ ಚೋರಬಾಧೆ, ೩೬ ಮಾಟದಿಂದ ಪೀಡೆ, ೪೮ ಸನ್ನಿಪಾತಾದಿ ಬಾಧೆ, ೬೦ ಅತಿಸಾರಾದಿಭಯ, ಇವೆಲ್ಲ ದಾಟಿದರೆ ೭೮ ಸಂವತ್ಸರಗಳು ಪರಮಾಯುವು.

**ರೇವತಿ:**–ಈ ನಕ್ಷತ್ರದ ೧–೨–೩ ಪಾದದಲ್ಲಿ ಎಂತಹ ಶಿಶುಜನಿಸಿದರೂ ದೋಷವಿಲ್ಲ. ಶುಭವು. ೪ ಪಾದದಲ್ಲಿ ಗಂಡುಹುಟ್ಟಿದರೆ ತಂದೆಗೆ–ಶಿಶುವಿಗೆ, ಹೆಣ್ಣುಹುಟ್ಟಿದರೆ ತಾಯಿಗೆ–ಶಿಶುವಿಗೆ ಅರಿಷ್ಟ. ಅದಕ್ಕೆ ಗೋಮುಖಪ್ರಸವಶಾಂತಿ, ಏಕಾದಶವಾರ ರುದ್ರಾಭಿಷೇಕ, ಧನ್ವಂತರಿಜಪ, ಮೃತ್ಯುಂಜಯಜಪ, ನಕ್ಷತ್ರಜಪ, ನವಗ್ರಹಜಪ, ಹೋಮ–ಸುವರ್ಣದಾನಗಳನ್ನು ಮಾಡಿದರೆ ಅರಿಷ್ಟನಿವಾರಣೆಯು. ೧–೨–೩ಪಾದಗಳಿಗೆ ನಕ್ಷತ್ರದ ಸಾಮಾನ್ಯದೋಷ ಪ್ರಯುಕ್ತ ಮಂತ್ರಸಹಿತವಾಗಿ ಎಣ್ಣೆಯಲ್ಲಿ ಶಿಶುಮುಖದರ್ಶನ ಶುಭವು. ರೇವತಿನಕ್ಷತ್ರ ಕೆಂಬಣ್ಣದ್ದು, ಮೀನಾಕಾರದ ೩೨



ನಕ್ಷತ್ರಗಳು, ದೇದೋಚಚಿ ನಾಲ್ಕು ಅಕ್ಷರಗಳು, ಸ್ತ್ರೀರೂಪ, ಬ್ರಾಹ್ಮಣಜಾತಿ, ಕಂಠರಜ್ಜು, ದೇವಗಣ, ತಿರ್ಯಙ್ಮುಖ, ಅಂಧಲೋಚನ, ಮೃದು, ವರುಣಮಂಡಲ, ಬಾಹ್ಯ, ಸಮತಾರ, ಶೂನ್ಯತಾರ, ಶೂನ್ಯಸ್ಥಾನ, ಚತುಷ್ಪಾತ್, ಮಾಧಕವೃಕ್ಷ, ಗಜಯೋನಿ,ಪುರುಷ, ಚತುಷ್ಪಾತ್, ಮೀನರಾಶಿ ಗುರುಅಧಿಪತಿ, ಅಂತ್ಯನಾಡಿ, ಕ್ರತುಗೋತ್ರ, ಮಯೂರಪಕ್ಷಿ, ಆಕಾಶತತ್ವ, ಸ್ತ್ರೀಲಿಂಗ, ಪಾದರಜ್ಜು, ಯಮದಿಕ್, ಯೋಗಿನಿ ವಾರಾಹಿ, ಧೂಮ್ರಾಯ. ದೇವತಾ ಪೂಷನ್, ಅಧಿದೇವತಾ ಅಹಿರ್ಬುಧ್ನ, ಪ್ರತ್ಯಧಿದೇವತ ಅಶ್ವಿನೀ. ಈ ನಕ್ಷತ್ರದಲ್ಲಿ ಕಿನ್ನರ ಅವತರಿಸಿದನು. ೩೦ ಘಟಿ ನಂತರ ವಿಷನಾಡಿ, ೫೪ ಘಟಿ ನಂತರ ಅಮೃತನಾಡಿ. ಯಾತ್ರೆಗೆ ವರ್ಜ್ಯವು. ತಂಡುಲಪಿಷ್ಟ ತಿಂದು ಸರ್ವದಿಕ್ ಪ್ರಯಾಣ ಶುಭಕರ.

ಪ್ರಥಮರಜೋದರ್ಶನವಾದರೆ ಪುತ್ರವತಿ, ಸೌಭಾಗ್ಯವತಿ ಆಗುವಳು. ವಿದ್ಯಾರಂಭ, ಬೋರುಬಾವಿತೆಗೆಸುವುದು, ನಿಷೇಕಾದಿಷೋಡಕರ್ಮಗಳು, ತೈಲಾಭ್ಯಂಗ, ತತ್ವವಾದ, ವಾಸ್ತು, ವಸ್ತ್ರಾಭೂಷಣಗಳು, ಸಮಸ್ತವಿದ್ಯಾರಂಭ, ಸಿಂಹಾಸನ–ಆಂದೋಳಿಕಾರೋಹಣ, ಸಮಸ್ತವಸ್ತು ಸಂಗ್ರಹ, ಗ್ರಾಮಪ್ರವೇಶ, ವೃಕ್ಷಲತಾದಿಗಳ ನೆಡುವಿಕೆ, ದೇವತಾಸ್ಥಾಪನ, ಕ್ರಯವಿಕ್ರಯ, ಧಾನ್ಯಾದಿ ಸಂಗ್ರಹ, ವೃಕ್ಷಾರೋಪಣ, ವೈದ್ಯಕ, ತೀರ್ಥಯಾತ್ರಾ, ದಾನ–ಧರ್ಮ–ಪರೋಪಕಾರಗಳಿಗೆ ಒಳ್ಳೆಯದು.

ಈ ನಕ್ಷತ್ರದಲ್ಲಿ ಜ್ವರ ಬಂದರೆ ಪ್ರಾಣಭಯವು ಅಥವಾ ೨೭ ದಿನಗಳು ಅರಿಷ್ಟವು. ಆದಿವಾರ ರೋಗ ಬಂದರೆ ೧೮ ದಿನಗಳು, ಸೋಮವಾರ ೧೨, ಮಂಗಳವಾರ ೧೭, ಬುಧವಾರ ೧೮, ಗುರುವಾರ ೧೦, ಶುಕ್ರವಾರ ೧೦, ಶನಿವಾರ ೨೫ ದಿನಗಳ ನಂತರ ಗುಣವು. ಶಾಂತಿಗೆ– ಕೆಂಬಣ್ಣದ ಪದ್ಮ ಧರಿಸಿದ ದ್ವಿಭುಜನಾದ ಪೂಷದೇವತೆ ಪ್ರತಿಮೆಯನ್ನು ಮಾಡಿ ಕೆಂಪುವಸ್ತ್ರ, ಅರ್ಕಪುಷ್ಪಗಳಿಂದ ಪೂಜಿಸಿ ತಿಲೋದನ ನೈವೇದ್ಯಮಾಡಿ, ಹಂಸಶುಚಿಷತ್ ಎಂಬ ಮಂತ್ರದಿಂದ ಪೂಜಿಸಿ, ೧೦೮ ಸಮಿಧೆ–ತುಪ್ಪ ಅಹುತಿ ಕೊಟ್ಟು ಗಂಧ,ಹೂವು, ತಿಲಾನ್ನವನ್ನು ಉತ್ತರದಿಕ್ಕಿಗೆ ಬಲಿ ಹಾಕಲು ತಕ್ಷಣ ಗುಣವು. ಆದಿವಾರ ಸ್ಥಿರಯೋಗ, ಸೋಮವಾರ ಮೃತ್ಯುಯೋಗ, ಮಂಗಳವಾರ ಯಮಕಂಟಕಯೋಗ, ಬುಧವಾರ ಯಮ ದಂಷ್ಟ್ರಯೋಗ, ಗುರುವಾರ ಶುಭಯೋಗ, ಶುಕ್ರವಾರ ನಾಶಯೋಗ, ಶನಿವಾರ ಉಗ್ರಯೋಗ, ನಂದಾತಿಥಿಯಲ್ಲಿ ನಿರ್ಜೀವಯೋಗ, ಏಕಾದಶಿದಿನ ವಿಷಯೋಗ, ಕುಜವಾರದಲ್ಲಿ ನಂದಾ ಬಂದಾಗ ಮರಣಯೋಗ, ಶನಿವಾರದಲ್ಲಿ ನಂದಾತಿಥಿಯಲ್ಲಿ ನಿರ್ಜೀವಯೋಗ, ಹಸ್ತಾ–ಉತ್ತರಾಷಾಢಗಳಲ್ಲಿ ಕ್ರೂರರಿದ್ದರೆ ಮಹಾಶೂಲಯೋಗ, ಕನ್ಯಾಮಾಸದಲ್ಲಿ ಶೂನ್ಯನಕ್ಷತ್ರ, ಉತ್ಪಾತವಾದರೆ ಅಗ್ನಿಕಲಹಚೋರಾದಿ ಭಯ, ಕಾಮನಬಿಲ್ಲು ಕಂಡರೆ ವೃಷ್ಟಿಪ್ರತಿಬಂಧಕವು, ಪರಿವೇಷ ಕಂಡರೆ ವಿಷಾದಿವೃದ್ಧಿ, ರಕ್ತಮೇಘ ಕಂಡರೆ ವೃಷ್ಟಿಯೋಗವು, ಸಂಕ್ರಮಣವಾದರೆ ಮಧ್ಯಾರ್ಘವೃದ್ಧಿಯು. ೧ನೆ ಪಾದದಲ್ಲಿ ರೋಗ ಬಂದರೆ ೧೭ ದಿನಕ್ರೂರ, ೨ನೆ ಪಾದ ೬, ೩ನೆ ಪಾದ ೬೦, ೪ನೆ ಪಾದ ೦ ದಿನ. ಕಳೆದ ವಸ್ತು ದೊರಕುವುದು ಕಷ್ಟ.

ಗಂಡಾದರೆ ಸುಂದರ, ಸ್ಥೂಲಕಾಯ, ತೇಜಸ್ವಿ, ಭೋಗೀ, ಧನಪ್ರಿಯ, ಪಂಡಿತ, ದೀರ್ಘಾಲೋಚನಪರ, ಅನ್ನದಾನಿ, ಪರೋಪಕಾರಿ ಆಗುವನು. ಹೆಣ್ಣಾದರೆ ಶಾಂತಸ್ವಭಾವ, ಸುಂದರಿ, ಸಹಿಷ್ಣು, ಕ್ಷಮಾಶೀಲೆ, ಸತ್ಸಂತಾನವತಿ, ಮಾನಿ ಆಗುವಳು. ೧ನೆಪಾದ ಗುರು ಅಧಿಪತಿ ಉನ್ನತಾಂಶ, ಧಾರ್ಮಿಕ, ಶಾಸ್ತ್ರವೇತ್ತ, ನೀತಿವಂತ, ಬಂಧುಸ್ನೇಹಿ, ಗಂಭೀರ, ಗೋಧನಧಾನ್ಯ ಸಂಪನ್ನ ಆಗುವನು. ೨ನೆ ಪಾದ ಶನಿ ಅಧಿಪತಿ ಉಗ್ರಾಂಶ, ಸುರೂಪಿ, ಕೋಪಿ, ಮಂದಬುದ್ಧಿ, ಕುಟಿಲ, ವಂಚಕ, ಗರ್ವಿಷ್ಟ, ಮೂರ್ಖ, ಅಸತ್ಯನಿಷ್ಟುರ ಬಾಷಿ ಆಗುವನು. ೩ನೆ ಪಾದ ಶನಿ ಪಾಪಾಂಶ, ಸುಳ್ಳುಹೇಳುವವ, ಧೈರ್ಯಸ್ಥ, ದುಃಖಭೋಗಿ, ಬಂಧುವಿರೋಧಿ ಆಗುವನು. ೪ನೆ ಪಾದ ಗುರು ಅಧಿಪತಿ ಶೋಭನಾಂಶ ಪಂಡಿತ, ಧೈರ್ಯಸ್ಥ, ಗುರುದೇವತಾಭಕ್ತ, ಹಿರಿಯರನು ಗೌರವಿಸುವಾತ,ಜ್ಞಾನಿ, ಜಿತೇಂದ್ರಿಯ,ಧಾರ್ಮಿಕ ಶ್ರದ್ಧೆಉಳ್ಳವ ಆಗುವನು. ೧೭ ಸಂವತ್ಸರಗಳು ಬುಧದಶ. ೧ನೆ ಮಾಸದಲ್ಲಿ ೧ನೆ ಸಂವತ್ಸರದಲ್ಲಿ ಶೀತವಾತಾದಿಭಯ, ೨ ಅಜೀರ್ಣ, ೩ ಸ್ಫೋಟಕವಸ್ತು ಭಯ, ೮ ಜ್ವರೋಪದ್ರವ, ೧೨ ಕ್ರಿಮಿಕೀಟಾದಿ ಭಯ, ೧೬ ಜಲಗಂಡ, ೨೪ ಶತ್ರುಭಯ, ೩೨ ಎತ್ತರದಿಂದ ಬೀಳೋಣ, ೩೬ ಮೃಗಬಾಧೆ, ೪೮ ಶ್ವಾಸರೋಗ, ೫೦ ಶತ್ರುಗಳಿಂದ ಅನೇಕವಿಧ ಬಾಧೆ, ೬೨ ಅತಿಸಾರ ಸನ್ನಿಪಾತಗಳಿಂದಲೂ, ನೇತ್ರಪೀಡೆ, ೭೪ ನಾನಾರೋಗಭೀತಿಯಿಂದ ಅಪಮೃತ್ಯುವು, ಇವೆಲ್ಲಾ ದಾಟಿದರೆ ೮೪ ಸಂವತ್ಸರಗಳು ಪರಮಾಯು.

## ಮೇಷಾದಿಲಗ್ನವಿಷಯಗಳು

## ಮೇಷಲಗ್ನ

ಮೇಷಲಗ್ನ ಜಾತಕಕ್ಕೆ ರವಿಯು ಪೂರ್ಣಶುಭಕೊಡುತ್ತಾನೆ. ಗುರು,ಶನಿಗಳು ಅರ್ಧಶುಭರು.

೧. ರವಿಯು– ಮೇಷ,ಸಿಂಹ,ವೃಶ್ಚಿಕ,ಧನುಸ್ಸಿನಲ್ಲಿದ್ದರೆ ಯೋಗಕೊಡವನು.

೨.ಚಂದ್ರನು–(೪ಅಧಿಪತಿ) ವೃಷಭ,ಕರ್ಕ,ವೃಶ್ಚಿಕ,ಧನುಸ್ಸಿ ನಲ್ಲಿದ್ದರೆ ಯೋಗ ಕೊಡವನು.

೩.ಕುಜನು–(೧,೮ಅಧಿಪತಿ)ಮೇಷ,ಮಿಥುನ,ಕರ್ಕ,ಕನ್ಯಾ, ವೃಶ್ಚಿಕದಲ್ಲಿದ್ದರೆ ಯೋಗಕೊಡವನು.

೪.ರಾಹುವು–(ಷಷ್ಟಾಧಿಪತಿ)ಮಿಥುನ,ಕನ್ಯಾ,ವೃಶ್ಚಿಕದಲ್ಲಿದ್ದರೆ ಯೋಗಕೊಡವನು.

೫.ಗುರುವು–(೨–೯ಅಧಿಪತಿ)ಕರ್ಕ,ಸಿಂಹ,ಕನ್ಯಾ,ವೃಶ್ಚಿಕ, ಧನುರ್, ಮಕರ ದಲ್ಲಿದ್ದರೆ ಯೋಗಕೊಡವನು.

೬.ಶನಿಯು–(೧೦–೧೧ಅಧಿಪತಿ)ಮೇಷ,ಮಿಥುನ,ಕನ್ಯಾ, ಮಕರ,ಕುಂಭ,ಮೀನದಲ್ಲಿದ್ದರೆ ಯೋಗಕೊಡವನು.

೭.ಬುಧನು–(ತೃತೀಯ ಷಷ್ಟಾಧಿಪತಿ)ವೃಶ್ಚಿಕ,ಮೀನದಲ್ಲಿದ್ದರೆ ಯೋಗಕೊಡುವನು.

೮.ಕೇತುವು_(ವ್ಯಯಾಧಿಪತಿ)ಮಿಥುನ,ಕನ್ಯಾ,ಮೀನದಲ್ಲಿದ್ದರೆ ಯೋಗಕೊಡುವನು.

೯.ಶುಕ್ರನು–(ದ್ವಿತೀಯ–ಸಪ್ತಮಾಧಿಪತಿ)ವೃಷಭ,ಕರ್ಕ,ಧನುಸ್ಸಿನದ್ದರೆ ಯೋಗಕೊಡುವನು.



ಶನಿಗುರುಗಳುಕೂಡಿ ಕರ್ಕ–ಧನುಸ್ಸುಗಳಲ್ಲಿದ್ದರೆ ಯೋಗಕೊಡುವರು. ಗುರುಕುಜರು ಕೂಡಿ ಕರ್ಕದಲ್ಲಿದ್ದರೆ ಕುಜನು ವಿಶೇಷವಾಗಿ ಯೋಗಕೊಡುವನು. ರವಿಬುಧರು ಕೂಡಿ ಮೇಷಸಿಂಹಧನುಸ್ಸುಗಳಲ್ಲಿದ್ದ್ರರೆ ಯೋಗಕೊಡುವರು.ಗುರುಕುಜರು ಕೂಡಿದ್ದರೂ, ಬುಧಗುರು ಗಳು, ಬುಧಕುಜರು, ಬುಧಕುಜರುಗುರುಗಳು, ಕೂಡಿದ್ದರೂ ಉತ್ತಮರಾಜಯೋಗವಾಗುವುದು. ಇವರ ಜೊತೆಗೆ ಇತರ ಯಾವಗ್ರಹಕೂಡಿದರೂ ಯೋಗ ಭಂಗವಾಗುವುದು.

## ವೃಷಭಲಗ್ನ

ವೃಷಭಲಗ್ನ ಜಾತಕಕ್ಕೆ ರವಿಶನಿಗಳು ಪೂರ್ಣಶುಭಕೊಡುತ್ತಾನೆ. ಬುಧನು ಅರ್ಧಶುಭನು.

೧. ರವಿಯು(೪ಅಧಿಪತಿ) ಮೇಷ,ಸಿಂಹ,ಮಿಥುನ,ಕನ್ಯಾ,ಕುಂಭ, ಮೀನಗಳಲ್ಲಿದ್ದರೆ ಯೋಗಕೊಡವನು.

೨.ಚಂದ್ರನು–(೩ಅಧಿಪತಿ)ವೃಷಭ,ತುಲಾ,ಧನುಸ್ಸು,ಮೀನಗಳಾಲ್ಲಿದ್ದರೆ ಯೋಗಕೊಡವನು.

೩. ಕುಜನು–(೭–೧೨ಧಿಪತಿ)ಮೇಷ,ಕರ್ಕ,ತುಲಾ, ಧನುಸ್ಸಿ ನಲ್ಲಿದ್ದರೆ ಯೋಗಕೊಡವನು.

೪.ರಾಹುವು–(ಪಂಚಮಾಧಿಪತಿ)ಮೇಷ,ಧನುಸ್ಸು,ಮೀನದಲ್ಲಿದ್ದರೆ ಯೋಗಕೊಡವನು.

೫.ಗುರುವು–(ಅಷ್ಟಮ–ಲಾಭಾಧಿಪತಿ)ಮೇಷ,ಕರ್ಕ,ತುಲಾ,ಧನುರ್, ಮೀನದಲ್ಲಿದ್ದರೆ ಯೋಗಕೊಡವನು. ಮೇಷದಲ್ಲಿದ್ದರೆ ಮೊದಲು ಯೋಗಕೊಟ್ಟು ಕೊನೆಗೆ ಅರಿಷ್ಟಮಾಡುವನು. ಸಪ್ತಮದಲ್ಲಿದ್ದರೆ ತನ್ನ ಮಹಾದೆಶೆಯಲ್ಲಿ ಹೆಂಡತಿಗೆ ಅನಾರೋಗ್ಯಕೊಡುವನು.

೬.ಶನಿಯು–(೯–೧೦ಅಧಿಪತಿ)೧–೨–೪–೫–೬೭–೯–೧೦–೧೧ಸ್ಥಾನದಲ್ಲಿದ್ದರೆ ಯೋಗ ಕೊಡವನು. ಕುಜನಜೊತೆ ಸೇರಿ ಮೇಲಿನಸ್ಥಾನಗಳಲ್ಲಿದ್ದರೆ ವಿಶೇಷಯೋಗಕೊಡುವನು.

೭.ಬುಧನು–(೨–೫ ಅಧಿಪತಿ)ವೃಷಭ,ಸಿಂಹ, ಮಕರ, ಕುಂಭದಲ್ಲಿದ್ದರೆ ಯೋಗಕೊಡುವನು. ಪಂಚಮದಲ್ಲಿದ್ದು ಶನಿಕುಜರಿಂದನೋಡಲ್ಪಟ್ಟರೆ ದತ್ತಪುತ್ರಯೋಗ ಕೊಡುವನು ಅಥವಾ ಬಹುಕಾಲದಮೇಲೆ ಸಂತಾನವುಂಟುಮಾಡುವನು.

೮.ಕೇತುವು_(ಲಾಭಾಧಿಪತಿ)ಮೇಷ,ಕರ್ಕ,ತುಲಾ,ಮೀನದಲ್ಲಿದ್ದರೆ ಯೋಗಕೊಡುವನು.

೯.ಶುಕ್ರನು–(ಲಗ್ನ–ಷಷ್ಟಾಧಿಪತಿ)ಮೇಷ,ತುಲಾ,ಧನುಸ್ಸಿನಲಿದ್ದರೆ ಹಾಗೆಯೇ ಮಕರ,ಕುಂಭ, ಮೀನಗಳಲ್ಲಿದ್ದರೂ ಯೋಗಕೊಡುವನು.

ರವಿ,ಬುಧ,ಶನಿಗಳುಕೂಡಿದರೆ ರಾಜಯೋಗವು. ರವಿ, ಬುಧರುಕೂಡಿ ಸಿಂಹ,ಕನ್ಯಾ, ಮಕರ,ಕುಂಭಗಳಲ್ಲಿದ್ದರೆ ಯೋಗಕೊಡು ವರು. ಶುಕ್ರ–ಚಂದ್ರರು ತುಲಾ,ಮೀನದಲ್ಲಿದ್ದರೆ ಯೋಗಕೊಡುವರು. ಗುರುವು ಕೇಂದ್ರ–ಕೋಣಗಳಲ್ಲಿದ್ದರೆ ವಿಶೇಷವಾಗಿ ಫಲಕೊಡುವನು ಮತ್ತು ಕೆಲವು ಸ್ಥಳಗಳಲ್ಲಿ ವಿಶೇಷ ಯೋಗಮಾಡುವುದಿಲ್ಲ. ಗುರುಶುಕ್ರರು,ಕುಜಶುಕ್ರರು,ಗುರುಕುಜರು, ಶುಕ್ರಗುರುಕುಜರು ಕೂಡಿದ್ದರೆ ರಾಜಯೋಗವಾಗುವುದು. ಇವರ ಜೊತೆಗೆ ಇತರ ಯಾವಗ್ರಹಕೂಡಿದರೂ ಯೋಗ ಭಂಗವಾಗುವುದು.

## ಮಿಥುನಲಗ್ನ

ಮಿಥುನಲಗ್ನ ಜಾತಕಕ್ಕೆ ಶುಕ್ರಶನಿಗಳು ಅರ್ಧಶುಭರು.

೧. ರವಿಯು(ತೃತೀಯಾಧಿಪತಿ) ಮೇಷ,ಸಿಂಹ,ವೃಶ್ಚಿಕ,ಮಕರಗಳಲ್ಲಿದ್ದರೆ ಯೋಗಕೊಡವನು.

೨.ಚಂದ್ರನು–(೨ಅಧಿಪತಿ)ಕರ್ಕ,ಕನ್ಯಾ,ತುಲಾ,ಕುಂಭ, ಮೀನಗಳಾಲ್ಲಿದ್ದರೆ ಯೋಗಕೊಡವನು.

೩. ಕುಜನು–(೧೧–೬ಧಿಪತಿ)ಮೇಷ,ವೃಷಭ,ಸಿಂಹ, ವೃಶ್ಚಿಕ,ಮಕರದಲ್ಲಿದ್ದರೆ ಯೋಗಕೊಡವನು.

೪.ರಾಹುವು–(ಚತುರ್ಥಾಧಿಪತಿ)ಮೇಷ,ಸಿಂಹ,ವೃಶ್ಚಿಕ,ಮಕರದಲ್ಲಿದ್ದರೆ ಯೋಗಕೊಡವನು.

೫.ಗುರುವು–(ಸಪ್ತಮ–ದಶಮಾಧಿಪತಿ)ಕನ್ಯಾ,ಕುಂಭ,ತುಲಾದಲ್ಲಿದ್ದರೆ ಯೋಗಕೊಡವನು. ಕರ್ಕ,ಮೀನಗಳಲ್ಲಿದ್ದರೆ ಮೊದಲು ಯೋಗಕೊಟ್ಟು ಕೊನೆಗೆ ಅರಿಷ್ಟಮಾಡುವನು. ಧನುಸ್ಸಿನಲ್ಲಿದ್ದರೆ ಸಾಧಾರಣವಾಗಿ ಅರಿಷ್ಟವನ್ನೇ ಕೊಡುವನು.

೬.ಶನಿಯು–(ಅಷ್ಟಮ–ನವಮಅಧಿಪತಿ)ಮೇಷ,ವೃಷಭ,ವೃಶ್ಚಿಕ,ಮೀನ ದಲ್ಲಿದ್ದರೆ ಯೋಗ ಕೊಡವನು. ಕುಂಭದಲ್ಲಿದ್ದರೆ ಮೊದಲು ಯೋಗಕೊಟ್ಟು ಕೊನೆಗೆ ಅರಿಷ್ಟಮಾಡುವನು.

೭.ಬುಧನು–(ಲಗ್ನ–ಚತುರ್ಥಾಧಿಪತಿ)ಮೇಷ,ತುಲಾ,ಕುಂಭದಲ್ಲಿದ್ದರೆ ಯೋಗಕೊಡುವನು. ಕರ್ಕದಲ್ಲಿದ್ದರೆ ಮೊದಲು ಯೋಗಕೊಟ್ಟು ಕೊನೆಗೆ ಅರಿಷ್ಟಮಾಡುವನು.

೮.ಕೇತುವು_(ದಶಮಾಧಿಪತಿ)ಮೇಷ,ವೃಷಭ,ಸಿಂಹ, ವೃಶ್ಚಿಕ ದಲ್ಲಿದ್ದರೆ ಯೋಗಕೊಡವನು.

೯.ಶುಕ್ರನು–(೧೨–೫ಅಧಿಪತಿ)ವೃಷಭ,ತುಲಾ,ವೃಶ್ಚಿಕ,ಮಕರ,ಮೀನದ್ದರೆ ಯೋಗ ಕೊಡುವನು.

ಗುರು,ಬುಧಕೂಡಿ ಕನ್ಯಾ,ಮಕರದಲ್ಲಿದ್ದರೆಮೊದಲು ಶುಭಯೋಗಕೊಟ್ಟು ಕೊನೆಗೆ ಅರಿಷ್ಟಮಾಡುವರು. ಗುರುಚಂದ್ರರು ಕೂಡಿ ಮೀನದಲ್ಲಿದ್ದರೆ ಗುರುವು ತನ್ನಮಹಾದಶೆಯಲ್ಲಿ ರಾಜಯೋಗಕೊಡುವನು. ಅಲ್ಲಿ ಪೂರ್ಣಚಂದ್ರಆಗಿದ್ದರೆ ಚಂದ್ರನು ಕೂಡ ಯೋಗಕೊಡುವನು. ರವಿಬುಧರು ಸೇರಿ ಕನ್ಯಾಮೀನಗಳಲ್ಲಿದ್ದರೆ ವಿಶೇಷವಾಗಿ ಮಹಾರಾಜಯೋಗವನ್ನು ಕೊಡುವರು. ಶನಿಶುಕ್ರರು, ಕುಜಶುಕ್ರರು, ಶನಿಶುಕ್ರಕುಜರು ಕೂಡಿದ್ದರೆ ರಾಜಯೋಗ ವಾಗುವುದು. ಇವರ ಜೊತೆಗೆ ಇತರ ಯಾವಗ್ರಹಕೂಡಿದರೂ ಯೋಗ ಭಂಗ ವಾಗುವುದು.

## ಕರ್ಕಾಟಕಲಗ್ನ

ಕರ್ಕಾಟಕಲಗ್ನ ಜಾತಕಕ್ಕೆ ಕುಜನು ಪೂರ್ಣ ಶುಭನು,ಗುರು ಅರ್ಧಶುಭ.

೧. ರವಿಯು(೨ಅಧಿಪತಿ) ಮೇಷ,ವೃಷಭ,ಸಿಂಹ,ವೃಶ್ಚಿಕ,ಮೀನಗಳಲ್ಲಿದ್ದರೆ ಯೋಗಕೊಡವನು.

೨.ಚಂದ್ರನು–(ಲಗ್ನಾಧಿಪತಿ)ವೃಷಭ,ತುಲಾ,ಮೀನಗಳಲ್ಲಿದ್ದರೆ ಯೋಗಕೊಡವನು.ಕರ್ಕದಲ್ಲಿದ್ದರೆ ಮೊದಲು ಯೋಗಕೊಟ್ಟು ಕೊನೆಗೆ ಅರಿಷ್ಟಮಾಡುವನು.

೩. ಕುಜನು–(ಪಂಚಮದಶಮಾಧಿಪತಿ)ಮೇಷ,ವೃಷಭ,ಸಿಂಹ,ಕನ್ಯಾ, ವೃಶ್ಚಿಕ ದಲ್ಲಿದ್ದರೆ ಯೋಗಕೊಡವನು. ಮಕರದಲ್ಲಿದ್ದರೆ ಮೊದಲು ಯೋಗಕೊಟ್ಟು ಕೊನೆಗೆ ಅರಿಷ್ಟಮಾಡುವನು.

೪.ರಾಹುವು–(ತೃತೀಯಾ)ವೃಷಭಮಿಥುನಕನ್ಯಾಧನುಸ್ಸುಕುಂಭ ದಲ್ಲಿದ್ದರೆ ಯೋಗಕೊಡವನು.



೫.ಗುರುವು–(ಷಷ್ಟ–ನವಮಾಧಿಪತಿ)ಕರ್ಕ,ಸಿಂಹತುಲಾವೃಶ್ಚಿಕಮೀನ ದಲ್ಲಿದ್ದರೆ ಯೋಗಕೊಡವನು. ಧನುಸ್ಸಿನದಲ್ಲಿದ್ದರೆ ಯಾರಜೊತೆಗೂ ಸೇರದೆ ಇದ್ದರೆ ಯೋಗ ಕೊಡುವನು.

೬.ಶನಿಯು–(೭–೮ಅಧಿಪತಿ)ಮೇಷ, ಮಿಥುನಧನುಕುಂಭ ದಲ್ಲಿದ್ದರೆ ಯೋಗಕೊಡವನು.

೭.ಬುಧನು–(೩–೧೨ಅಧಿಪತಿ)ವೃಷಭ,ಕನ್ಯಾ,ಧನುಸ್ಸು,ಕುಂಭ,ಮೀನದಲ್ಲಿದ್ದರೆ ಯೋಗಿಸುವನು.

೮.ಕೇತುವು_(ನವಮಾಧಿಪತಿ)ವೃಷಭ, ಮಿಥುನಧನುಸ್ಸುಗಳಲ್ಲಿದ್ದರೆ ಯೋಗಕೊಡವನು.

೯.ಶುಕ್ರನು–(ಚತುರ್ಥ–ಲಾಭಾಧಿಪತಿ) ವೃಷಭ,ತುಲಾ,ಮೀನದ್ದರೆ ಯೋಗಕೊಡುವನು.

ಕುಜಗುರುಕೂಡಿಮೀನಮೇಷವೃಶ್ಚಿಕದಲ್ಲಿದ್ದರೆ ರಾಜಯೋಗವು. ಗುರುಶನಿ ಕೂಡಿ ಮಿಥುನಕುಂಭಧನುಸ್ಸುನಲ್ಲಿದ್ದರೆ ಅಖಂಡರಾಜಯೋಗವು. ಶನಿಬುಧ, ಶುಕ್ರಚಂದ್ರ, ರವಿಬುಧ, ಗುರುಬುಧ, ಗುರುಶನಿ,ಗುರುಬುಧಶನಿಗಳು ಶ್ರುಭಸ್ಥಾನ ಗಳಲ್ಲಿದ್ದರೆ ರಾಜಯೋಗವನ್ನು ಕೊಡುವರು. ಇವರ ಜೊತೆಗೆ ಇತರ ಯಾವಗ್ರಹಕೂಡಿದರೂ ಯೋಗ ಭಂಗವಾಗುವುದು.

## ಸಿಂಹಲಗ್ನ

ಸಿಂಹಲಗ್ನ ಜಾತಕಕ್ಕೆ ಕುಜನು ಪೂರ್ಣ ಶುಭನು,ಗುರು ಅರ್ಧಶುಭ.

೧. ರವಿಯು(ಲಗ್ನಾಧಿಪತಿ) ಮೇಷ,ಸಿಂಹ,ಧನುಸ್ಸು,ಮಿಥುನ ಗಳಲ್ಲಿ ದ್ದರೆ ಯೋಗಕೊಡವನು.

೨.ಚಂದ್ರನು–(೧೨ಅಧಿಪತಿ)ವೃಷಭ,ಮಿಥುನ,ತುಲಾ,ಮಕರ, ಮೀನಗಳಲ್ಲಿದ್ದರೆ ಯೋಗಿಸುನು.

೩. ಕುಜನು–(ಚತುರ್ಥ–ಭಾಗ್ಯಾಧಿಪತಿ) ಮೇಷ,ವೃಶ್ಚಿಕ ಧನುಸ್ಸಿನಲ್ಲಿದ್ದರೆ ಯೋಗಕೊಡವನು.

೪.ರಾಹುವು–(ದ್ವಿತೀಯಾ)ಮಿಥುನಕರ್ಕಮಕರಮೀನದಲ್ಲಿದ್ದರೆ ಯೋಗಕೊಡವನು.

೫.ಗುರುವು–(ಪಂಚಮಅಷ್ಟಮಾಧಿಪತಿ) ಕರ್ಕ,ಧನುಸ್ಸು,ಮಕರ ದಲ್ಲಿದ್ದರೆ ಯೋಗಕೊಡವನು.

೬.ಶನಿಯು–(ಷಷ್ಠಸಪ್ತಮಾಧಿಪತಿ) ಮೇಷ,ಕರ್ಕ,ಮಕರ,ಮೀನ ದಲ್ಲಿದ್ದರೆ ಯೋಗಕೊಡವನು. ತುಲಾರಾಶಿಯಲ್ಲಿದ್ದರೆ ಮೊದಲು ಯೋಗಕೊಟ್ಟು ನಂತರ ಅರಿಷ್ಟವನ್ನುಂಟಮಾಡುವನು.

೭.ಬುಧನು–(ದ್ವಿತೀಯ–ಲಾಭಾಧಿಪತಿ) ಮೇಷ, ವೃಷಭ, ಸಿಂಹ, ಕನ್ಯಾ, ಧನುಸ್ಸು, ಮಿಥುನ ದಲ್ಲಿದ್ದರೆ ಯೋಗಕೊಡುವನು.

೮.ಕೇತುವು_(ಅಷ್ಟಮಾಧಿಪತಿ)ತುಲಾಮಕರಮಿಥುನಗಳಲ್ಲಿದ್ದರೆ ಯೋಗಕೊಡವನು.

೯.ಶುಕ್ರನು–(೩–೧೦ಅಧಿಪತಿ) ವೃಷಭ,ಮಿಥುನ,ತುಲಾ,ವೃಶ್ಚಿಕಧನುಸ್ಸಿನಲ್ಲಿದ್ದರೆಯೋಗಿಸುವನು.

ಬುಧಶುಕ್ರರು ಕೂಡಿ ಮೇಷವೃಷಭಮಿಥುನಸಿಂಹಕನ್ಯಾ ವೃಶ್ಚಿಕದಲ್ಲಿದ್ದರೆ ರಾಜಯೋಗವು. ಶುಕ್ರಚಂದ್ರ,ಕುಜಶುಕ್ರರು ಕೂಡಿ ರಾಜಯೋಗವು ಆದರೆ ಇವರ ಜೊತೆ ಗುರುಸೇರಿ ದರೂ ನೋಡಿದರೂ ಯೋಗವು ಹಾಳಾಗುವುದು. ರವಿಕುಜಬುಧ ಒಂದು ರಾಶಿಯಲ್ಲಿ ಸೇರಿದರೂ ನೋಡಿದರೂಉತ್ತಮಯೋಗವಾಗುವುದು. ಶನಿಚಂದ್ರ, ಗುರುಚಂದ್ರ, ಗುರುಶನಿ, ಚಂದ್ರಗುರುಶನಿಗಳು ಕೂಡಿದ್ದರೆ ಉತ್ತಮರಾಜಯೋಗವನ್ನು ಕೊಡುವರು. ಇವರ ಜೊತೆಗೆ ಇತರ ಯಾವಗ್ರಹಕೂಡಿದರೂ ಯೋಗ ಭಂಗವಾಗುವುದು.

## ಕನ್ಯಾಲಗ್ನ

ಕನ್ಯಾಲಗ್ನ ಜಾತಕಕ್ಕೆ ಬುಧಶುಕ್ರು ಪೂರ್ಣ ಶುಭರು,ಶನಿ ಅರ್ಧಶುಭ.

೧. ರವಿಯು(ವ್ಯಯಾಧಿಪತಿ) ಮೇಷ,ಕರ್ಕ,ಸಿಂಹ,ವೃಶ್ಚಿಕ,ಕುಂಭ ಗಳಲ್ಲಿದ್ದರೆ ಯೋಗಿಸುವನು.

೨.ಚಂದ್ರನು–(ಲಾಭಾಧಿಪತಿ)ವೃಷಭ,ಮಿಥುನ,ಕರ್ಕ,ತುಲಾ,ಧನುಸ್ಸು ಮಕರ, ಮೀನಗಳಲ್ಲಿದ್ದರೆ ಯೋಗಕೊಡವನು.

೩.ಕುಜನು–(೩–೮ಅಧಿಪತಿ) ಮೇಷ,ಕರ್ಕ,ಸಿಂಹ,ವೃಶ್ಚಿಕ,ಕುಂಭಗಳಲ್ಲಿದ್ದರೆ ಯೋಗಿಸುವನು.

೪.ರಾಹುವು– ಮೇಷ,ಕರ್ಕ,ಸಿಂಹ,ವೃಶ್ಚಿಕ,ಕುಂಭಗಳಲ್ಲಿದ್ದರೆ ಯೋಗಕೊಡವನು.

೫.ಗುರುವು–(೪–೭ಅಧಿಪತಿ) ವೃಷಭ,ಮಿಥುನ,ಕರ್ಕ, ಧನುಸ್ಸುಗಳಲ್ಲಿದ್ದರೆ ಯೋಗಿಸುವನು.

೬.ಶನಿಯು–(ಪಂಚಮ–ಷಷ್ಠಾಧಿಪತಿ) ಮೇಷ,ಸಿಂಹ,ವೃಶ್ಚಿಕ, ಕುಂಭಗಳಲ್ಲಿ ಯೋಗಿಸುವನು.

೭.ಬುಧನು–(ಲಗ್ನ–ದಶಮಾಧಿಪತಿ) ವೃಷಭ,ಮಿಥುನ,ಕರ್ಕ,ಕನ್ಯಾ, ತುಲಾ, ಧನುಸ್ಸು, ಮಕರದಲ್ಲಿದ್ದರೆ ಯೋಗಕೊಡುವನು.

೮.ಕೇತುವು_(ಸಪ್ತಮಾಧಿಪತಿ)ಮೇಷಮೀನಗಳಲ್ಲಿದ್ದರೆ ಯೋಗ ಕೊಡವನು.

೯.ಶುಕ್ರನು–(ದ್ವಿತೀಯ–ನವಮಾಧಿಪತಿ) ವೃಷಭ,ಮಿಥುನ,ಕರ್ಕ, ತುಲಾ,ಧನುಸ್ಸು,ಮಕರದಲ್ಲಿದ್ದರೆ ಯೋಗಕೊಡುವನು. ಮೀನದಲ್ಲಿದ್ದರೆ ತನ್ನಮಹಾದೆಶೆಯಲ್ಲಿ ಮೊದಲು ಯೋಗಕೊಟ್ಟು ನಂತರ ಅರಿಷ್ಟವನ್ನುಂಟಮಾಡುವನು.

ಬುಧಶುಕ್ರರು,ಗುರುಶುಕ್ರರು ಕೂಡಿ ರಾಜಯೋಗವು. ಈ ರಾಜಯೋಗ ಕುಜನೋಡಿದರೆ ಭಂಗವಾಗುವುದು. ರವಿಶನಿ,ಶನಿಕುಜ, ರವಿಕುಜ,ರವಿಕುಜಶನಿ,ಶುಕ್ರಚಂದ್ರ ಕೂಡಿ ತುಲಾಕರ್ಕ ಗಳಲ್ಲಿದ್ದರೆ ಉತ್ತಮಧನಯೋಗವಾಗುವುದು. ಇವರ ಜೊತೆಗೆ ಇತರ ಯಾವಗ್ರಹಕೂಡಿದರೂ ಯೋಗ ಭಂಗವಾಗುವುದು.

## ತುಲಾಲಗ್ನ

ಈ ತುಲಾಲಗ್ನಕ್ಕೆ ಶನಿ ಪೂರ್ಣಶುಭನು, ಬುಧ ಅರ್ಧಶುಭನು.

೧.ರವಿ(ಲಾಭಾಧಿಪತಿ) ವೃಶ್ಚಿಕಧನುಸ್ಸುಕುಂಭಸಿಂಹಗಳಲ್ಲಿದ್ದರೆ ಯೋಗಕೊಡುವನು.

೨.ಚಂದ್ರ(ದಶಮಾಧಿಪತಿ) ಮಕರಕುಂಭತುಲಾಗಳಲ್ಲಿ ಯೋಗಕೊಡುವನು.

೩.ಕುಜ(ದ್ವಿತೀಯ–ಸಪ್ತಮಾಧಿಪತಿ)ಧನುರ್ಮೀನಸಿಂಹಕನ್ಯಾ ಗಳಲ್ಲಿದ್ದರೆ ಯೋಗಕೊಡುವನು.

೪.ರಾಹು (ವ್ಯಯಾಧಿಪತಿ) ಧನುರ್ಮೀನವೃಷಭಸಿಂಹಕನ್ಯಾ ಗಳಲ್ಲಿದ್ದರೆ ಯೋಗಕೊಡುವನು.

೫.ಗುರು (ತೃತೀಯಷಷ್ಟಾದಿಪತಿ) ಧನುರ್ಮೀನವೃಷಭಕನ್ಯಾ ಗಳಲ್ಲಿದ್ದರೆ ಯೋಗಕೊಡುವನು. ಕುಂಭಮಿಥುನತುಲಾರಾಶಿಗಳಲ್ಲಿದ್ದರೆ ದಶಾಂತರ್ದಶೆಗಳಲ್ಲಿ ಮೊದಲು ಯೋಗಕೊಟ್ಟು ಅನಂತರ ಅರಿಷ್ಟವುಂಟುಮಾಡುವನು.

೬.ಶನಿ (ಚತುರ್ಥಪಂಚಮಾಧಿಪತಿ)ಧನುರ್ಮಕರಮೇಷಕರ್ಕಸಿಂಹ ಗಳಲ್ಲಿದ್ದರೆ ಯೋಗಕೊಡುವನು



.ಕುಂಭಮಿಥುನತುಲಾರಾಶಿಗಳಲ್ಲಿದ್ದರೆ ದಶಾಂತರ್ದಶೆಗಳಲ್ಲಿ ಮೊದಲು ಯೋಗಕೊಟ್ಟು ಅನಂತರ ಅರಿಷ್ಟವುಂಟುಮಾಡುವನು.

೭.ಬುಧ (ಭಾಗ್ಯವ್ಯಯಾಧಿಪತಿ) ತುಲಾವೃಶ್ಚಿಕಮೀನವೃಷಭಕರ್ಕ ಸಿಂಹ ಕನ್ಯಾ ರಾಶಿಗಳಲ್ಲಿದ್ದರೆ ಯೋಗಕೊಡುವನು.

೮.ಕೇತು (ಅಷ್ಟಮಾಧಿಪತಿ) ವೃಷಭದಲ್ಲಿದ್ದರೆ ಯೋಗಕೊಡುವನು.

೯.ಶುಕ್ರ (ಲಗ್ನ–ಅಷ್ಟಮಾಧಿಪತಿ) ವೃಷಭಮೀನದಲ್ಲಿದ್ದರೂ ಮೊದಲು ಯೋಗಕೊಟ್ಟು ಅನಂತರ ಬಹುಅರಿಷ್ಟವುಂಟುಮಾಡುವನು.

ಬುಧಚಂದ್ರರು ಕೂಡಿಮಿಥುನಕರ್ಕಮಕರಕುಂಭಗಳಲ್ಲಿದ್ದರೆ ವಿಶೇಷಯೋಗ ಕೊಡುವರು. ಶನಿಚಂದ್ರ,ರವಿಕುಜಶನಿಬುಧರು ಕೂಡಿದ್ದರೂ ಪರಸ್ಪರದೃಷ್ಟಿಸಿದರೂ ಪರಿವರ್ತನಯೋಗ ದಲ್ಲಿದ್ದರೂ ಧನಸೌಭಾಗ್ಯಗಳನ್ನು ಕೊಡುವರು. ಬುಧಶುಕ್ರರು,ಗುರುಬುಧರು, ಗುರುಶುಕ್ರರು, ಕೂಡಿದ್ದರೂ, ಪರಸ್ಪರನೋಡಿದರೂ ರಾಜಯೋಗ ವನ್ನುಂಟು ಮಾಡುವರು.ಇತರಗ್ರಹರ ಸಂಬಂಧವಿರಬಾರದು.

## ವೃಶ್ಚಿಕಲಗ್ನ

ಈ ವೃಶ್ಚಿಕಲಗ್ನಕ್ಕೆ ರವಿಚಂದ್ರಗುರುಗಳು ಪೂರ್ಣಶುಭರು.

೧.ರವಿ(ದಶಮಾಧಿಪತಿ) ಧನುಸ್ಸುಕುಂಭಮೀನಗಳಲ್ಲಿದ್ದರೆ ಯೋಗ ಕೊಡುವನು.

೨.ಚಂದ್ರ(ನವಮಾಧಿಪತಿ) ಧನುಸ್ಸುಕುಂಭಮೀನಕರ್ಕಸಿಂಹಕನ್ಯಾ ಗಳಲ್ಲಿಯೋಗಕೊಡುವನು.

೩.ಕುಜ (ಲಗ್ನ–ಷಷ್ಟಾಧಿಪತಿ) ಮೇಷಮಿಥುನತುಲಾಮಕರಗಳಲ್ಲಿದ್ದರೆ ಯೋಗಕೊಡುವನು.

೪.ರಾಹು (೧೧ಅಧಿಪತಿ) ಮಕರಮೇಷಮಿಥುನಕನ್ಯಾತುಲಾ ಗಳಲ್ಲಿದ್ದರೆ ಯೋಗಿಸುವನು.

೫.ಗುರು (೨–೫ಅಧಿಪತಿ) ಧನುಃಕುಂಭಮೀನಕರ್ಕಸಿಂಹ ಗಳಲ್ಲಿದ್ದರೆ ಯೋಗಕೊಡುವನು.

೬.ಶನಿ (೩–೪ಅಧಿಪತಿ) ಮಕರಕುಂಭಮೇಷಸಿಂಹಗಳ ಲ್ಲಿದ್ದರೆ ಯೋಗಕೊಡುವನು.

೭.ಬುಧ (೮–೧೧ಅಧಿಪತಿ) ಮೇಷಮಿಥುನತುಲಾಮಕರರಾಶಿಗಳಲ್ಲಿದ್ದರೆ ಯೋಗಿಸುವನು.

೮.ಕೇತು (ನವಮಾಧಿಪತಿ) ಮಕರಮೇಷಕನ್ಯಾತುಲಾಗಳಲ್ಲಿದ್ದರೆ ಯೋಗಕೊಡುವನು.

೯.ಶುಕ್ರ (ಸಪ್ತಮವ್ಯಯಾಧಿಪತಿ) ತುಲಾಮೇಷಮಿಥುನಗಳಲ್ಲಿದ್ದರೆ ಯೋಗ ಕೊಡುವನು. ಮೀನಕರ್ಕಾಟಕಗಳಲ್ಲಿದ್ದರೆ ಮಹತ್ತರ ಯೋಗಕೊಡಲಾರನು. ಸಪ್ತಮಸ್ಥಾನಕ್ಕೆ ಯಾವ ಗ್ರಹದವೀಕ್ಷಣೆ ಇಲ್ಲದೆ ಶುಕ್ರನು ಶನಿಯೊಡನೆ ತುಲಾರಾಶಿಯಲ್ಲಿ ದ್ದರೆ ವಿವಾಹವು ತಡವಾಗಿ ಆಗುವುದು. ರವಿಚಂದ್ರರು ಪರಸ್ಪರ ಕೂಡಿ–ನೋಡಿದರೂ ಬುಧಶುಕ್ರರ ಸಂಬಂಧ ವಿಲ್ಲದೆ ಹೋದರೆ ಯೋಗಕೊಡುವರು. ರವಿಶನಿ ಕೂಡಿ ಕುಂಭಮೀನಸಿಂಹ, ರವಿಗುರು ಸೇರಿ ಧನುಕುಂಭಮೀನಕರ್ಕ ಸಿಂಹದಲ್ಲಿದ್ದರೂ, ಗುರುಚಂದ್ರರು ಸೇರಿದ್ದರೂ ಪರಸ್ಪರನೋಡಿದರೂ, ಪರಿವರ್ತನಮಾಡಿದರೂ ಯೋಗ ಕೊಡುವರು. ಶನಿಚಂದ್ರ, ಕುಜಶುಕ್ರರು, ಕುಜಬುಧರು,ಕುಜಬುಧಶುಕ್ರರು, ಕೂಡಿದ್ದರೂ

ರಾಜಯೋಗವನ್ನುಂಟುಮಾಡುವರು.ಇತರಗ್ರಹರ ಸಂಬಂಧವಿರದ್ದರೆ ವ್ಯತ್ಯಸ್ತವಾಗಿದ್ದರೂ ಅರಿಷ್ಟಕೊಡುವರು.

## ಧನುರ್‌ಲಗ್ನ

ಈ ಧನುರ್‌ಲಗ್ನಕ್ಕೆ ರವಿ ಪೂರ್ಣಶುಭನು. ಕುಜ ಅರ್ಧಶುಭನು

೧.ರವಿ(ನವಮಾಧಿಪತಿ) ಸಿಂಹಮಕರಮೀನಗಳಲ್ಲಿದ್ದರೆ ಯೋಗ ಕೊಡುವನು.

೨.ಚಂದ್ರ(ಅಷ್ಟಮಾಧಿಪತಿ) ಕುಂಭವೃಷಭವೃಶ್ಚಿಕಗಳಲ್ಲಿ ಯೋಗ ಕೊಡುವನು.

೩.ಕುಜ (೧೨-೫ಅಧಿಪತಿ) ಮೇಷಮಿಥುನತುಲಾಮಕರ ಗಳಲ್ಲಿದ್ದರೆ ಯೋಗಕೊಡುವನು.

೪.ರಾಹು (೧೦ಅಧಿಪತಿ) ಮಕರಮೇಷಮಿಥುನಕನ್ಯಾತುಲಾ ಗಳಲ್ಲಿದ್ದರೆ ಯೋಗಕೊಡುವನು.

೫.ಗುರು (೧-೪ಅಧಿಪತಿ) ಕುಂಭವೃಷಭಕರ್ಕತುಲಾವೃಶ್ಚಿಕ ಗಳಲ್ಲಿದ್ದರೆ ಯೋಗಕೊಡುವನು.

೬.ಶನಿ (೨-೩ಅಧಿಪತಿ)ವೃಷಭತುಲಾವೃಶ್ಚಿಕ ಕುಂಭ ಗಳಲ್ಲಿದ್ದರೆ ಯೋಗಕೊಡುವನು.

೭.ಬುಧ (೭-೧೦ಅಧಿಪತಿ) ಮೇಷಸಿಂಹತುಲಾಧನುರ್ ಮಕರರಾಶಿ ಗಳಲ್ಲಿದ್ದರೆ ಯೋಗಕೊಡುವನು.

೮.ಕೇತು (ಚತುರ್ಥಾಧಿಪತಿ) ಮಕರಮೇಷಕನ್ಯಾತುಲಾಗಳಲ್ಲಿದ್ದರೆ ಯೋಗ ಕೊಡುವನು.

೯.ಶುಕ್ರ (೬-೧೧ಅಧಿಪತಿ)ವೃಷಭಕರ್ಕತುಲಾವೃಶ್ಚಿಕಮೀನಗಳಲ್ಲಿದ್ದರೆ ಯೋಗಕೊಡುವನು.

ರವಿಬುಧ,ಗುರುಬುಧ,ರವಿಗುರು ಪರಸ್ಪರ ಕೂಡಿ-ನೋಡಿದರೂ ರಾಜ ಯೋಗ ಕೊಡುವರು. ಶುಕ್ರಚಂದ್ರರು ಕೂಡಿ ಕುಂಭವೃಷಭ ಕರ್ಕ ವೃಶ್ಚಿಕದ್ದರೆ ರಾಜಯೋಗಕೊಡುವರು. ಕುಜಶುಕ್ರರು, ಕುಜಶುಕ್ರ ಚಂದ್ರರು ಯೋಗ ಕೊಡುವರು. ಇತರಗ್ರಹರ ಸಂಬಂಧ ವಿರದ್ದರೂ ವ್ಯತ್ಯಸ್ತವಾಗಿದ್ದರೂ ಅರಿಷ್ಟಕೊಡುವರು.

## ಮಕರಲಗ್ನ

ಮಕರಲಗ್ನಕ್ಕೆ ಕುಜಶುಕ್ರಬುಧರು ಅರ್ಧಶುಭರು

೧.ರವಿ(ಅಷ್ಟಮಾಧಿಪತಿ) ಮಿಥುನಸಿಂಹಧನುಸ್ಸು ಮೀನಗಳಲ್ಲಿದ್ದರೆ ಯೋಗ ಕೊಡುವನು.

೨.ಚಂದ್ರ(ಸಪ್ತಮಾಧಿಪತಿ) ವೃಷಭಕನ್ಯಾತುಲಾಗಳಲ್ಲಿ ಯೋಗ ಕೊಡುವನು.

೩.ಕುಜ (೪-೧೧ಅಧಿಪತಿ) ಮೇಷವೃಷಭಮಿಥುನಕನ್ಯಾವೃಶ್ಚಿಕಗಳಲ್ಲಿದ್ದರೆ ಯೋಗಿಸುವನು.

೪.ರಾಹು (೯ಅಧಿಪತಿ) ಮಿಥುನಸಿಂಹವೃಶ್ಚಿಕಧನುಸ್ಸುಮೀನ ಗಳಲ್ಲಿದ್ದರೆ ಯೋಗಕೊಡುವನು.

೫.ಗುರು (೩-೧೨ಅಧಿಪತಿ)ಮಿಥುನಸಿಂಹಧನುಸ್ಸುಮೀನ ಗಳಲ್ಲಿದ್ದರೆ ಯೋಗಕೊಡುವನು.

೬.ಶನಿ (೧-೨ಅಧಿಪತಿ)ಮೇಷತುಲಾಮಿಥುನಧನುಸ್ಸುಮಕರ ಮೀನ ಗಳಲ್ಲಿದ್ದರೆ ಯೋಗಿಸುವನು.

೭.ಬುಧ (ಷಷ್ಟನವಮಾಧಿಪತಿ) ವೃಷಭಕನ್ಯಾತುಲಾರಾಶಿಗಳಲ್ಲಿದ್ದರೆ ಯೋಗಕೊಡುವನು. ಮೇಷವೃಶ್ಚಿಕಕುಂಭ ಗಳಲ್ಲಿದ್ದರೆ ವಿಶೇಷವಾಗಿ ಯೋಗಕೊಡುವುದಿಲ್ಲ.

೮.ಕೇತು (ತೃತೀಯಾಧಿಪತಿ) ಮಿಥುನಸಿಂಹಧನುಸ್ಸುಮೀನಗಳಲ್ಲಿದ್ದರೆ ಯೋಗಕೊಡುವನು.



೯.ಶುಕ್ರ (೫-೧೧ಅಧಿಪತಿ) ಮೇಷವೃಷಭಕನ್ಯಾತುಲಾವೃಶ್ಚಿಕ ಗಳಲ್ಲಿದ್ದರೆ ಯೋಗಿಸುವನು.

ರವಿಬುಧ,ಗುರುಬುಧ,ರವಿಗುರು,ರವಿಗುರುಬುಧರು ಪರಸ್ಪರ ಕೂಡಿ-ನೋಡಿದರೂ ರಾಜ ಯೋಗಕೊಡುವರು. ಶನಿಬುಧರು ಕೂಡಿಕುಂಭಕನ್ಯಾದಲ್ಲಿದ್ದರೆ ಬುಧಕುಜರುಕೂಡಿ ಮೇಷಕನ್ಯಾತುಲಾ ವೃಶ್ಚಿಕಗಳಲ್ಲಿದ್ದರೂ, ಶನಿಶುಕ್ರರು,ಕೂಡಿದ್ದರೂ ಉತ್ತಮ ಯೋಗ ಕೊಡುವರು. ಇವರಿಗೆ ಇತರಗ್ರಹರ ಸಂಬಂಧವಿದ್ದರೂ ವ್ಯತ್ಯಸ್ತವಾಗಿದ್ದರೂ ಅರಿಷ್ಟಕೊಡುವರು.

## ಕುಂಭಲಗ್ನ

ಕುಂಭಲಗ್ನಕ್ಕೆ ಶುಕಪೂರ್ಣಶುಭ,ಕುಜನು ಅರ್ಧಶುಭರು.

೧.ರವಿ(ಸಪ್ತಮಾಧಿಪತಿ) ಮೇಷಕರ್ಕಧನುಸ್ಸುಮಕರಗಳಲ್ಲಿದ್ದರೆ ಯೋಗ ಕೊಡುವನು.

೨.ಚಂದ್ರ(ಷಷ್ಟಾಧಿಪತಿ) ಮೇಷವೃಷಭಕನ್ಯಾಮಕರಮೀನಗಳಲ್ಲಿ ಯೋಗಕೊಡುವನು.

೩.ಕುಜ (ತೃತೀಯದಶಮಾಧಿಪತಿ) ಮೇಷವೃಷಭಮಿಥುನಕರ್ಕತುಲಾ ವೃಶ್ಚಿಕಧನುಸ್ಸು ಗಳಲ್ಲಿದ್ದರೆ ಯೋಗಕೊಡುವನು.

೪.ರಾಹು (ಅಷ್ಟಮಾಧಿಪತಿ) ಮೇಷಕರ್ಕಕನ್ಯಾಮಕರಧನುಸ್ಸುಗಳಲ್ಲಿದ್ದರೆ ಯೋಗಕೊಡುವನು.

೫.ಗುರು (೨-೧೧ಅಧಿಪತಿ)ವೃಷಭಮಿಥುನಸಿಂಹತುಲಾವೃಶ್ಚಿಕ ಧನುಸ್ಸುಮೀನ ಗಳಲ್ಲಿದ್ದರೆ ಯೋಗಕೊಡುವನು.

೬.ಶನಿ (೧-೧೨ಅಧಿಪತಿ)ಮೇಷಕರ್ಕಕನ್ಯಾಧನುಸ್ಸುಮಕರಮೀನ ಗಳಲ್ಲಿದ್ದರೆ ಯೋಗಿಸುವನು.

೭.ಬುಧ (೫-೮ಅಧಿಪತಿ) ವೃಷಭಮಿಥುನಕರ್ಕಕನ್ಯಾ ವೃಶ್ಚಿಕಧನುಸ್ಸು ರಾಶಿಗಳಲ್ಲಿದ್ದರೆ ಯೋಗಿಸುವನು.

೮.ಕೇತು (ದ್ವಿತೀಯಾಧಿಪತಿ) ಮೇಷಕರ್ಕಮಕರಧನುಸ್ಸುಗಳಲ್ಲಿದ್ದರೆ ಯೋಗ ಕೊಡುವನು.

೯.ಶುಕ್ರ (೪-೯ಅಧಿಪತಿ) ವೃಷಭಮಿಥುನತುಲಾವೃಶ್ಚಿಕ ಧನುರ್ಮೀನಗಳಲ್ಲಿದ್ದರೆ ಯೋಗ ಕೊಡುವನು. ಗುರುಶುಕ್ರ,ಗುರುಕುಜರು,ಕುಜಶುಕ್ರರು,ಬುಧಚಂದ್ರ,ಶನಿಬುಧಶನಿಚಂದ್ರಬುಧರು ಪರಸ್ಪರ ಕೂಡಿದರೆ ರಾಜ ಯೋಗಕೊಡುವರು.

## ಮೀನಲಗ್ನ

ಮೀನ ಲಗ್ನಕ್ಕೆ ಕುಜಚಂದ್ರರುಪೂರ್ಣಶುಭರು.

೧.ರವಿ(ಷಷ್ಟಾಧಿಪತಿ) ವೃಷಭಸಿಂಹತುಲಾಮಕರಕುಂಭಗಳಲ್ಲಿದ್ದರೆ ಯೋಗ ಕೊಡುವನು.

೨.ಚಂದ್ರ(ಪಂಚಮಾಧಿಪತಿ) ಮೇಷಮಿಥುನಧನುರ್‌ಮೀನಗಳಲ್ಲಿ ಯೋಗಕೊಡುವನು.

೩.ಕುಜ (ದ್ವಿತೀಯದಶಮಾಧಿಪತಿ) ಮೇಷಮಿಥುನವೃಶ್ಚಿಕಧನುಸ್ಸು ಮಕರ ಗಳಲ್ಲಿದ್ದರೆ ಯೋಗಕೊಡುವನು.

೪.ರಾಹು (ಸಪ್ತಮಾಧಿಪತಿ) ವೃಷಭಸಿಂಹಮಕರಕುಂಭಗಳಲ್ಲಿದ್ದರೆ ಯೋಗಕೊಡುವನು.

೫.ಗುರು (೧-೧೦ಅಧಿಪತಿ)ಮೇಷಮಿಥುನಕರ್ಕವೃಶ್ಚಿಕಧನುಸ್ಸು ಮಕರಗಳಲ್ಲಿದ್ದರೆ ಯೋಗಿಸುವನು.

೬.ಶನಿ (ಲಾಭವ್ಯಯಾಧಿಪತಿ)ವೃಷಭಸಿಂಹಮಕರಕುಂಭಗಳಲ್ಲಿದ್ದರೆ ಯೋಗಿಸುವನು. ಕರ್ಕತುಲಾ ಗಳಲ್ಲಿದ್ದರೆ ತನ್ನದಶೆಬಂದಾಗ ಮೊದಲು ಯೋಗಕೊಟ್ಟು ನಂತರ ಬಹುಅರಿಷ್ಟ ಕೊಡುವನು.

೭.ಬುಧ (ಚತುರ್ಥಸಪ್ತಮಾಧಿಪತಿ) ಮಿಥುನಕರ್ಕವೃಶ್ಚಿಕಮಕರ ರಾಶಿಗಳಲ್ಲಿದ್ದರೆ ಯೋಗಕೊಡುವನು. ಕನ್ಯಾದಲ್ಲಿದ್ದರೆ ತನ್ನದಶೆಬಂದಾಗ ಮೊದಲು ಯೋಗಕೊಟ್ಟು ನಂತರ ಬಹುಅರಿಷ್ಟಕೊಡುವನು.

೮.ಕೇತು  ತುಲಾದಲ್ಲಿದ್ದರೆ ಯೋಗ ಕೊಡುವನು.

೯.ಶುಕ್ರ (ತೃತೀಯಾಷ್ಟಮಾಧಿಪತಿ) ವೃಷಭಸಿಂಹತುಲಾಗಳಲ್ಲಿದ್ದರೆ ಯೋಗ ಕೊಡುವನು.

ಗುರುಕುಜರು,ಬುಧಚಂದ್ರರುಕೂಡಿದ್ದರೆ ಶುಭ. ಆದರೆ ಚಂದ್ರಬುಧರು ತುಲೆಯಲ್ಲಿದ್ದರೆ ಫಲವಿಲ್ಲ. ಗುರುಚಂದ್ರ,ಕುಜಚಂದ್ರ,ರವಿಶುಕ್ರ,ರವಿಶನಿ, ಶನಿಶುಕ್ರ,ರವಿಶನಿಶುಕ್ರ ಪರಸ್ಪರ ಕೂಡಿದರೆ ರಾಜ ಯೋಗಕೊಡುವರು. ಇವರಿಗೆ ಬೇರೆಗ್ರಹರ ಸಂಬಂಧವಿರಬಾರದು.

ಈ ಮೇಲೆತಿಳಿಸಿದ ವಿಷಯಗಳು ಬೃಹಜ್ಜಾತಕ, ಸರ್ವಾರ್ಥ ಚಿಂತಾಮಣಿ, ಜಾತಕಪಾರಿಜಾತ, ಜ್ಯೋತಿಷ್ಯಾಮೃತ,  ಕೇರಳಜ್ಯೋತಿ ಶಾಸ್ತ್ರ ಮೊದಲಾದ ಗ್ರಂಥಗಳಿಂದ ಸಂಗ್ರಹಿಸಿದ್ದೇವೆ.

**ವಧೂವರರ ಏಕನಕ್ಷತ್ರವಿಚಾರ**

ವಿಶಾಖಾದ್ರಾರ್ಶ್ರವಣಪ್ರಜೇಶ ತಿಷ್ಯಾಂತ್ಯತತ್ಪೂರ್ವಮಖಾಃ ಪ್ರಶಸ್ತಾಃ।
ಸ್ತ್ರೀಪುಂಸತಾರೈಕ್ಯ ಪರಿಗಹೇತು ಶೇಷಾವಿವರ್ಣ್ಯಾ ಸಂಗಿರಂತಿ॥

ವಿಶಾಖಾ,ಆರ್ದ್ರಾ,ಶ್ರವಣಾ, ರೋಹಿಣೀ, ಪುಷ್ಯಾ, ರೇವತೀ, ಉತ್ತರಾಭಾದ್ರಾ, ಮಖಾ ಈ ನಕ್ಷತ್ರಗಳಲ್ಲಿ ಜನಿಸಿದ ವಧೂ–ವರರಿಗೆ ಒಂದೇನಕ್ಷತ್ರವಾದರೂ ವಿವಾಹಕ್ಕೆ ಶುಭವಾಗಿದೆ ಮಾಡಬಹುದು. ಉಳಿದನಕ್ಷತ್ರಗಳು ಶುಭವಲ್ಲ ಎಂದು ಪ್ರಾಚೀನರು ಹೇಳುತ್ತಾರೆ.

**ಘಾತವಾರದಲ್ಲಿ ಮಾಡಬಹುದಾದ ಕಾರ್ಯಗಳು**

ವಿವಾಹಕಾಲೇ ವ್ರತಬಂಧಯಜ್ಞೇ ಪಟ್ಟಾಭಿಷೇಕೇಪಿ ನಿಷೇಕಕರ್ಮೇ।
ಸೀಮಂತಪುಂಸವನಜಾತಕರ್ಮೇ ನೋಚಿಂತನೀಯಾ ಖಲು ಘಾತವಾರಃ॥

ವಿವಾಹ,ಉಪನಯನ,ಯಜ್ಞ,ಪಟ್ಟಾಭಿಷೇಕ,ನಿಷೇಕ,ಸೀಮಂತ, ಪುಂಸವನ,ಜಾತಕರ್ಮ ಗಳಲ್ಲಿ ಘಾತವಾರವನ್ನು ಎಣಿಸಬಾರದು.

**ಘಾತವಾರದಲ್ಲಿ ಮಾಡಬಾರದ ಕಾರ್ಯಗಳು**

ವಾಣಿಜ್ಯಯಾತ್ರಾಚ ತಟಾಕಕೂಪ ವಾಸ್ತುಪ್ರವೇಶೇ ಕೃಷಿಘಾತವರ್ಜ್ಯಮ್॥

ವ್ಯಾಪಾರ,ಪ್ರಯಾಣ,ಕೆರೆ–ಕಟ್ಟೆಕಟ್ಟಿಸುವುದು,ಬೋರುಭಾವಿ ತೋಡಿಸುವುದು, ವಾಸ್ತುಕರ್ಮ,ಗೃಹ–ಗ್ರಾಮಪ್ರವೇಶ, ವ್ಯವಸಾಯಕಾರ್ಯಗಳಲ್ಲಿ ಘಾತವಾರವನ್ನು ನೋಡಬೇಕು.

**ಘಾತಚಂದ್ರ**

ಯುದ್ಧೇಚ್ಛೈವ ವಿವಾಹೇ ಚ ಕುಮಾರೀ ಪೂಜನಂ ತಥಾ।
ರಾಜಸೇವಾ ವಾಹನಾದೌ  ಘಾತಚಂದ್ರಂ ನ ಚಿಂತಯೇತ್॥



ಯುದ್ಧಕಾರ್ಯದಲ್ಲಿ, ವಿವಾಹದಲ್ಲಿ, ಕುಮಾರೀಪೂಜೆಯಲ್ಲಿ, ರಾಜಸೇವೆಯಲ್ಲಿ, ವಾಹನಖರೀದಿ ವಿಷಯದಲ್ಲಿ ಘಾತಚಂದ್ರನನ್ನು ನಾಡಬೇಕಾಗಿಲ್ಲ.

ತೀರ್ಥಯಾತ್ರಾವಿವಾಹಾನ್ನಪ್ರಾಶನೇ ಚೋಪನಾಯನೇ।
ಮಾಂಗಲ್ಯ ಶುಭಕಾರ್ಯೇಷು ಘಾತಚಂದ್ರಂ ಚ ಚಿಂತಯೇತ್॥

ತೀರ್ಥಯಾತ್ರೆ, ವಿವಾಹ, ಅನ್ನಪ್ರಾಶನ, ಉಪನಾಯನ, ಮಂಗಳವಾದ ಶುಭಕಾರ್ಯಗಳಲ್ಲಿ ಘಾತಚಂದ್ರ ನೋಡಬೇಕು.

**ವರ್ಜ್ಯಗಳಾದ ಅಮೃತಸಿದ್ಧಿಯೋಗಗಳು**

ಗುರುವಾರ–ಪುಷ್ಯ ವಿವಾಹಶುಭವಲ್ಲ, ಶನಿವಾರ ರೋಹಿಣಿ ಪ್ರಯಾಣ ಶುಭವಲ್ಲ,
ಮಂಗಳವಾರ–ಅಶ್ವಿನಿ ಗೃಹಾರಂಭಶುಭವಲ್ಲ.

**ವಾಸ್ತುಪುರುಷಸ್ಥಿತಿ**

ಭಾದ್ರಪದ–ಆಶ್ವಯುಜ–ಕಾರ್ತಿಕ ಮಾಸಗಳಲ್ಲಿ ಪೂರ್ವಕ್ಕೆ ಶಿರಸ್ಸು, ಮಾರ್ಗಶೀರ್ಷ– ಪುಷ್ಯ–ಮಾಘ ಮಾಸಗಳಲ್ಲಿ ದಕ್ಷಿಣಕ್ಕೆ ಶಿರಸ್ಸು, ಫಾಲ್ಗುಣ–ಚೈತ್ರ–ವೈಶಾಖ ಮಾಸ ಗಳಲ್ಲಿ ಪಶ್ಚಿಮ ಶಿರಸ್ಸು, ಜ್ಯೇಷ್ಠ–ಆಷಾಢ–ಶ್ರಾವಣ ಮಾಸಗಳಲ್ಲಿ ಉತ್ತರ ಶಿರಸ್ಸು ಮಾಡಿ ವಾಸ್ತುಪುರುಷನು ಎಡಮಗ್ಗುಲಾಗಿ ಮಲಗಿದ್ದಾಗ ಅತನು ನೋಡುವ ದಿಕ್ಕಿನಲ್ಲೂ, ಪಾದಗಳು ಇರುವ ದಿಕ್ಕಿನಲ್ಲೂ ಗೃಹಕಟ್ಟಲು ಪ್ರಾರಂಭಮಾಡಬಾರದು.

**ಪಂಕ್ತಿಭೋಜನ**

ಉತ್ತಮಆಚಾರವುಳ್ಳವನು ಸ್ವಬಂಧುವಾದರೂ ಜೊತೆಕೂಡಿ ಊಟ ಮಾಡಬಾರದು. ಏಕೆಂದರೆ ಅವನು ಗುಪ್ತವಾಗಿ ಏನು ಪಾಪಕಾರ್ಯ ಮಾಡುವನೋ ಯಾರಿಗೆ ತಿಳಿಯುತ್ತದೆ. ಆದ್ದರಿಂದ ಪಂಕ್ತಿಯೊಳಗೆ ದುರಾತ್ಮನು ಕುಳಿತಿದ್ದರೆ ಅವನ ಪಾಪವೆಲ್ಲಾ  ಆಚಾರವಂತನಿಗೆ ಸಂಕ್ರಮಿಸುವುದು. ಅದಕ್ಕಾಗಿ ಪಂಕ್ತಿಮಧ್ಯದಲ್ಲಿ ಬೂದಿಯನ್ನೊ, ನೀರನ್ನೊ, ದಾರವನ್ನೊ, ತೃಣವನ್ನೊ, ದಾರಿಯನ್ನೊ ವ್ಯವಧಾನವಿಟ್ಟರೆ ಪಂಕ್ತಿದೋಷ ವಿರುವುದಿಲ್ಲ.

**ಉತ್ತಮಕಾರ್ಯಕ್ಕಾಗಿ ಹೊರಟಾಗ ಕಾಗೆ–ಬೆಕ್ಕುಗಳ ಶಕುನ**

ಪ್ರಯಾಣಹೊರಟಾಗ ಕಾಗೆ–ಬೆಕ್ಕುಗಳು ಅಡ್ಡಬಂದರೆ ಕಾರ್ಯಭಂಗವು, ಬೆಕ್ಕು ಇಲಿಯನ್ನು,ಕಾಗೆಯು ಹುಳವನ್ನು ಹಿಡಿದುಕೊಂಡು ಎದುರಾದರೆ ತನಗೆ ವಿಜಯವು, ವಿರೋಧಿಗಳಿಗೆ ಅಪಜಯವಾಗುತ್ತದೆ ಆದ್ದರಿಂದ ಒಳ್ಳೆಯದು. ಬೆಕ್ಕು ಮುಖವನ್ನು ಒರೆಸಿಕೊಂಡರೆ ಮನೆಗೆ ಸ್ವಜನರು ಬರುವರು.

**ಗ್ರಹಬಾಧಾನಿವಾರಣೆಯ ಉಪಾಯ**

ಪೂರ್ವಜನ್ಮಕೃತಂ ಪಾಪಂ ವ್ಯಾಧಿರೂಪೇಣ ಬಾಧತೇ।
ತಚ್ಛಾಂತಿರೌಷದ್ಯೈರ್ದಾನೈ ಜಪಹೋಮಸುರಾರ್ಚನೈಃ॥

ಜೀವಿಗೆ ಹಿಂದೆ ಜನ್ಮಾಂತರಗಳಲ್ಲಿ ಮಾಡಿದ ಪಾಪವು ಈ ಪ್ರಸ್ತುತ ಜನ್ಮದಲ್ಲಿ ವ್ಯಾಧಿರೋಪದಲ್ಲಿ

ಪೀಡಿಸುವುದು. ಆದ್ದರಿಂದ ಅದಕ್ಕೆ ಪರಿಹಾರವು ಕೇವಲ ಔಷಧಿಯಿಂದ ಸಾಧ್ಯವಾಗದು. ಜೊತೆಗೆ ವಿಶೇಷವಾಗಿ ದಾನ, ಜಪ,ಹೋಮ, ಬ್ರಾಹ್ಮಣರು–ದೇವತಾ ಪೂಜಾದಿ ಗಳಿಂದ ಶಾಂತಿ ಉಂಟಾಗುತ್ತದೆ ಎಂದು ಧರ್ಮಶಾಸ್ತ್ರಗಳಲ್ಲಿ ಹೇಳಿದೆ.

ಮನಶ್ಶುದ್ಧಿರ್ಜಪಾದ್ದಾನಾತ್ ಹೋಮಾದಧ್ವರದರ್ಶನಾತ್।
ನೋಕುರ್ವಂತಿಗ್ರಹಾಃ ಪೀಡಾಂ ದುಷ್ಟಸ್ಥಾನಸ್ಥಿತಾ ಅಪಿ॥

ಶುದ್ಧಮನಸ್ಸಿನಿಂದ ಜಪ, ಹೋಮಾದಿಗಳನ್ನು ಮಾಡುವಿಕೆ, ಯಜ್ಞಾದಿಗಳ ಸಂದರ್ಶನ, ಇವು ಗ್ರಹಗಳು ದುಷ್ಟಸ್ಥಾನಗಳಲ್ಲಿದ್ದರೂ ಪೀಡ ಕೊಡಲು ಸಮರ್ಥವಾಗಲಾರವು. ಆದ್ದರಿಂದ ಏನು ಮಾಡಿದರೂ ಶುದ್ಧ ಮನಸ್ಸಿನಿಂದ ಆಚರಿಸಬೇಕು. ಅಂದರೆ ತ್ರಿಕರಣಶುದ್ಧಿಯಿಂದ ಬ್ರಾಹ್ಮಣರು – ದೇವತಾಪೂಜಾದಿಗಳು, ದಾನಧರ್ಮಾದಿಗಳನ್ನು ಮಾಡುವವರಿಗೆ ಸರ್ವಾರಿಷ್ಟಗಳು ದೂರವಾಗುವವು.

ದೇವಬ್ರಾಹ್ಮಣವಂದನಾದ್ಗುರುವಚಸ್ಸಂಪಾದನಾತ್ ಪ್ರತ್ಯಹಮ್।
ಸಾಧೂನಾಮಭಿಭಾಷಣಾತ್ ಶ್ರುತಿರವಃ ಶ್ರೇಯಃ ಕಥಾ ವರ್ಣನಾತ್।
ಹೋಮಾದ್ಯಧ್ವರ ದರ್ಶನಾತ್ ಶುಚಿಮನೋಭಾವಾತ್ ಜಪಾದ್ದಾನತೋ
ನೋಕುರ್ವಂತಿ ಕದಾಚಿದೇವ ಪುರುಷಸ್ಯೈವಂ ಗ್ರಹಃ ಪೀಡನಮ್॥

ದೇವ–ಬ್ರಾಹ್ಮಣರನ್ನು ಭಕ್ತಿಯಿಂದ ಸೇವೆ–ನಮಸ್ಕಾರಾದಿಗಳಿಂದ ಸಂತೋಷ ಗೊಳಿಸುವುದು. ಗುರುಗಳು ಉಪದೇಶಿಸಿದಂತೆ ಅವರು ತೋರಿದ ದಾರಿಯಲ್ಲಿ ನೆಡೆಯುವುದು. ಪ್ರತಿನಿತ್ಯ ಸಜ್ಜನಸಂಗ ಮಾಡುವುದು. ವೇದಮಂತ್ರಗಳನ್ನು ಕೇಳುವುದು. ಹೋಮಮಾದಿ ಗಳನ್ನು ಮಾಡುವುದು–ನೋಡುವುದು. ಇನ್ನೊಬ್ಬರಿಗೆ ಕೇಡು ಚಿಂತಿಸದೆ ಪರಿಶುದ್ಧಭಾವದಿಂದ ನೆಡೆದುಕೊಳ್ಳುವುದು. ಜಪವನ್ನು ಆಚರಿಸುವುದು. ಬಂದ ಆದಾಯದಲ್ಲಿ ಆರುಭಾಗವನ್ನು ತಪ್ಪದೆ ದಾನಮಾಡುವುದು ಇವು ಮಾನವರಿಗೆ ಗ್ರಹಾದಿಗಳ ಸಮಸ್ತಬಾಧೆಗಳನ್ನು ತೊಲಗಿಸುವುದು.

**ಬೆಳಿಗ್ಗೆ ಎದ್ದತಕ್ಷಣ ನೋಡಬೇಕಾದ ವಸ್ತುಗಳು**

ಕಪಿಲಂದರ್ಪಣಂಭಾನುಂಭಾಗ್ಯವಂತಂಚ ಭೂಪತಿಮ್।
ಆಚಾರ್ಯಮನ್ನದಾತಾರಂ ಪ್ರಾತಃ ಪಶ್ಯೇತ್ಪತಿವ್ರತಾಮ್॥

ಎಂದು ಹೇಳಿರುವಂತೆ ಕರುವಿನಿಂದ ಸಹಿತವಾದ ಹಸು,ಕನ್ನಡಿ( ಕನ್ನಡಿಯನ್ನು ನೋಡಿ ದರೆವೀರ್ಯವೃದ್ಧಿ, ಸಂತೋಷ, ಸರ್ವಾಕರ್ಷಣ ಸಿದ್ಧಿಸುವುದು.) ಸೂರ್ಯ ದೇವನನ್ನು, (ಒಂದುವೇಳೆ ಸೂರ್ಯೋದಯಕ್ಕಿಂತ ಮುಂಚೆ ಏಳುವುದಾದರೆ ವಿಗ್ರಹವನ್ನಾಗಲೀ, ಚಿತ್ರವನ್ನಾಗಲೀ ನೋಡಬಹುದು), ಅದೃಷ್ಟವಂತನನ್ನು, ಅನ್ನಹಾಕುವಧಣಿಯನ್ನು, ಪತಿವ್ರತೆಯಾದ ಮುತ್ತೈದೆಯನ್ನು ನೋಡಬೇಕು. ಇದಲ್ಲದೆ ಕಮಲಪುಷ್ಪ, ಸುವರ್ಣ,ಜ್ವಲಿಸುವದೀಪ, ಪ್ರಜ್ವಲಿಸುವ ಅಗ್ನಿ, ಅರುಣವರ್ಣದ ವಸ್ತು,ಚಂದನ,ಸಮುದ್ರ, ಮೇಘಾಚ್ಛಾದಿತ ಪರ್ವತ, ತನ್ನಬಲಗೈ, ಹೆಂಡತಿ



ಮತ್ತು ತನ್ನಲ್ಲಿ ಪ್ರೀತಿಯಿರುವವರನ್ನು ನೋಡುವುದು,ಆನೆ, ಕರಿಬಣ್ಣದ ಕೋಳಿ,ದೇವಾಲಯದ ಗೋಪುರ ಇವು ನೋಡುವುದರಿಂದ ಶುಭವಾಗುವುದು.

**ಪ್ರಥಮರಜಸ್ವಲಾವಿಚಾರ**

| ನಕ್ಷತ್ರ | ಫಲಗಳು | ತಿಥಿ | ಫಲಗಳು |
|---|---|---|---|
| ಅಶ್ವಿನಿ | ಶಾಂತಿಇಲ್ಲ | ಪ್ರತಿಪತ್ | ಸಂತಾನಹಿನತೆ |
| | ಸೌಭಾಗ್ಯವೃದ್ಧಿ | ದ್ವಿತೀಯಾ | ಅಲ್ಪಸೌಖ್ಯ |
| ಭರಣಿ | ೧ನೇಪಾದ ಪತಿಗೆ ಅರಿಷ್ಟ | ತೃತಿಯಾ | ಸೌಭಾಗ್ಯ |
| | ೨ನೇಪಾದ ಸಂತಾನ | ಚತುರ್ಥಿ | ಪಾಪಿಷ್ಠೆ |
| | ೩ನೇಪಾದ ಧನಾರಿಷ್ಟ | ಪಂಚಮೀ | ಸುಸಂತತಿ |
| | ೪ನೇಪಾದ ಪತಿಗೆ ಅರಿಷ್ಟ | ಷಷ್ಠೀ | ಪರನಿಂದ |
| ಕೃತ್ತಿ | ೧ನೇಪಾದ ಶುಭ | ಸಪ್ತಮೀ | ಧನಧಾನ್ಯಸಮೃದ್ಧಿ |
| | ೨ನೇಪಾದ ಸಂತತಿನಷ್ಟ | ಅಷ್ಟಮೀ | ಪ್ರತಾಪ |
| | ೩ನೇಪಾದ ದರಿದ್ರತೆ | ನವಮೀ | ದುಃಖ |
| | ೪ನೇಪಾದ ದುಃಖ | ದಶಮೀ | ಸೌಭಾಗ್ಯ |
| ರೋಹಿ | ಶುಭ ಸಂತಾನವೃದ್ಧಿ | ಏಕಾದಶೀ | ಸದಾಚಾರ |
| ಮೃಗ | ಶುಭ ಸಂತಾನವೃದ್ಧಿ | ದ್ವಾದಶೀ | ಪರದೂಷಣ |
| ಆರ್ದ್ರಾ | ೧ನೇಪಾದ ಶುಭ | ತ್ರಯೋದಶೀ | ಸಂತೋಷ |
| | ೨ನೇಪಾದ ಸಂತತಿನಷ್ಟ | ಚತುರ್ದಶೀ | ವ್ಯಭಿಚಾರದೋಷ |
| | ೩ನೇಪಾದ ಧನಾರಿಷ್ಟ | ಪೂರ್ಣಿಮಾ | ಸಂತೋಷ |
| | ೪ನೇಪಾದ ಪತಿಗೆ ಅರಿಷ್ಟ | ಕೃಷ್ಣಪಕ್ಷದಲ್ಲಿ | ಸಾಮಾನ್ಯಫಲ |
| ಪುನ | ೧ನೇಪಾದ ಶುಭ | ಚತುರ್ದಶೀ | ಪರಪುರುಷಾಸಕ್ತಿ |
| | ೨ನೇಪಾದ ಸಾಮಾನ್ಯ | ಅಮಾವಾಸ್ಯೆ | ಅಲ್ಪಭೋಗ |
| | ೩–೪ನೇಪಾದ ಶುಭ | **ಉಟ್ಟಬಟ್ಟೆಯಫಲ** | |
| ಪುಷ್ಯ | ಶಾಂತಿಇಲ್ಲ ಶುಭ | ಬಿಳಿಬಟ್ಟೆ | ಸೌಭಾಗ್ಯ |
| ಆಶ್ಲೇ | ೧ನೇಪಾದ ಪತಿಗೆ ಅರಿಷ್ಟ | ದಪ್ಪಬಟ್ಟೆ | ಪತಿವ್ರತೆ |
| | ೨ನೇಪಾದ ಸಂತತಿನಷ್ಟ | ರೇಷ್ಮೆಬಟ್ಟೆ | ಐಶ್ವರ್ಯ |
| | ೩ನೇಪಾದ ಧನಾರಿಷ್ಟ | ಹೊಸಬಟ್ಟೆ | ಸೌಭಾಗ್ಯ |
| | ೩ನೇಪಾದ ಅಮಂಗಳ | ಹಳೇಬಟ್ಟೆ | ದಾರಿದ್ರ್ಯ |
| ಮಘ | ಹೋಮ ಅನ್ನಶಾಂತಿ | ಕೆಂಪುಬಟ್ಟೆ | ರೋಗ |

| | | | |
|---|---|---|---|
| ಪೂಫ | ಹೋಮ ಅನ್ನಶಾಂತಿ | ಕಪ್ಪುಬಟ್ಟೆ | ಅಮಂಗಳ |
| | ೬ಮಾಸದೋಷ | ಮಾಸಿದಬಟ್ಟೆ | ದಾರಿದ್ರ್ಯ |
| ಉತ್ತರ | ಶಾಂತಿಇಲ್ಲ ಶುಭ | **ವಾರಫಲ** | |
| | | ಭಾನುವಾರ | ರೋಗ |
| ಹಸ್ತ | ಶಾಂತಿಇಲ್ಲ ಶುಭ | ಸೋಮವಾರ | ಪತಿವ್ರತೆ |
| ಚಿತ್ರಾ | ಶಾಂತಿಇಲ್ಲ ಶುಭ | ಮಂಗಳವಾರ | ಅಶುಭ |
| ಸ್ವಾತಿ | ಶಾಂತಿಇಲ್ಲ ಶುಭ | ಬುಧವಾರ | ಪುತ್ರಸಂತತಿ |
| ವಿಶಾಖ | ಶಾಂತಿಇಲ್ಲ ಶುಭ | ಗುರುವಾರ | ಐಶ್ವರ್ಯ |
| ಅನೂ | ಶಾಂತಿಇಲ್ಲ ಶುಭ | ಶುಕ್ರವಾರ | ಸೌಭಾಗ್ಯ |
| ಜ್ಯೇಷ್ಠ | ೧ನೇಪಾದ ಧನಾರಿಷ್ಟ | ಶನಿವಾರ | ಅಜ್ಞಾನ |
| | ೨ನೇಪಾದ ಸಂತತಿನಷ್ಟ | **ಲಗ್ನಫಲ** | |
| | | ಮೇಷಲಗ್ನ | ವ್ಯಭಿಚಾರ |
| | ೩ನೇಪಾದ ಬಂಧು ಅರಿಷ್ಟ | ವೃಷಭ | ಸೌಭಾಗ್ಯ |
| | ೪ನೇಪಾದ ಪತಿಗೆ ಅರಿಷ್ಟ | ಮಿಥುನ | ಸಂತತಿ |
| ಮೂಲಾ | ಶಾಂತಿಇಲ್ಲ ಶುಭ | ಕರ್ಕ | ವ್ಯಭಿಚಾರ |
| ಪೂಷಾ | ೧ನೇಪಾದ ಪತಿಗೆ ಅರಿಷ್ಟ | ಸಿಂಹ | ಸಂತತಿ |
| | ೨ನೇಪಾದ ಸಂತತಿನಷ್ಟ | ಕನ್ಯಾ | ಐಶ್ವರ್ಯ |
| | ೩ನೇಪಾದ ಧನಾರಿಷ್ಟ | ತುಲಾ | ಸೌಭಾಗ್ಯ |
| | ೪ನೇಪಾದ ಪತಿಗೆ ಅರಿಷ್ಟ | ವೃಶ್ಚಿಕ | ವ್ಯಭಿಚಾರ |
| ಉಷಾ | ಶಾಂತಿಇಲ್ಲ ಶುಭ | ಧನುಸ್ಸು | ಪತಿವ್ರತೆ |
| ಶ್ರವಣ | ಶಾಂತಿಇಲ್ಲ ಶುಭ | ಮಕರ | ದುರಭಿಮಾನ |
| ಧನಿಷ್ಠ | ಶಾಂತಿಇಲ್ಲ ಶುಭ | ಕುಂಭ | ಧನಾಗಮ |
| ಶತಭಿಷ | ಶಾಂತಿಇಲ್ಲ ಶುಭ | ಮೀನ | ತೀರ್ಥಯಾತ್ರೆ |
| ಪೂಭಾ | ಹೋಮ ಅನ್ನಶಾಂತಿ | ಪ್ರಾತಃಕಾಲ ಶುಭ | |
| ಉಭಾ | ಶಾಂತಿಇಲ್ಲ ಶುಭ | ಪೂರ್ವಾಹ್ನ | ತೀರ್ಥಯಾತ್ರೆ |
| ರೇವತಿ | ಶಾಂತಿಇಲ್ಲ ಶುಭ | ಮಧ್ಯಾಹ್ನ | ಸೌಭಾಗ್ಯ |
| ಅಪರಾಹ್ನ | ವ್ಯಭಿಚಾರ | ಸಂಜೆ | ಪರಪುರುಷಯೋಗ |
| ಸಂಧ್ಯಾಕಾಲ | ವ್ಯಭಿಚಾರ | ಪೂರ್ವರಾತ್ರಿ | ದೀರ್ಘಾಯು |
| ಬೆಳಗಿನಝುವ | ಸೌಖ್ಯಹೀನೆ | ಸಂಧಿಕಾಲ ದರಿದ್ರತೆ | |



ರಜಸ್ವಲೆಯಾದನಂತರವೇ ಈಗ ವಿವಾಹವು ಚಾಲ್ತಿಯಲ್ಲಿದೆ,
ಆದ್ದರಿಂದ ಹೆಣ್ಣುಮಕ್ಕಳು ಪ್ರಥಮರಜಸ್ವಲೆಯಾದಾಗ ಇತ್ತೀಚಗೆ ಶುಭಾಶುಭಗಳನ್ನು ಸಾಮಾನ್ಯವಾಗಿ ಬಿಟ್ಟಿರುವಂತೆ ಕಂಡುಬರುತ್ತದೆ. ಆದರೆ ಅದು ತಪ್ಪು ಸ್ತ್ರೀಗೆ ಜನನ ಸಮಯವು ಹೇಗೆಯೋ ಹಾಗೆಯೇ ಪ್ರಥಮರಜೋದರ್ಶನಸಮಯವೂಕೂಡ ಅತಿಮುಖ್ಯವಾದುದು. ಪೂರ್ವಕಾಲದಲ್ಲಿ ಹುಟ್ಟಿದ ಸಮಯದಲ್ಲಿ ಬರೆಯವಂತೆ ಪುಷ್ಪವತಿ ಯಾದಾಗ ಕೂಡ ಜಾತಕಬರೆದು ಫಲವನ್ನು ನೋಡುತ್ತಿದ್ದರು. ಪ್ರಥಮರಜೋದರ್ಶನಸಮಯವು ದುಷ್ಟವಾಗಿದ್ದರೆ ಬಹುಕಾಲದ ನಂತರ ವಿವಾಹವಾಗುವುದು. ಒಂದು ವೇಳೆ ವಿವಾಹವಾದರೂ ಪತಿಸೌಖ್ಯಉಂಟಾಗುವುದಿಲ್ಲ. ವಿವಾಹವಾಗದ ಕನ್ಯಗೆ ರಜೋದೋಷಪರಿಹಾರಕ್ಕಾಗಿ ಶಾಂತಿಅನ್ನದಾನಾದಿಗಳನ್ನು ಮಾಡಿ ಕನ್ಯೆಯಕೈಯಿಂದ ದಾನಾದಿಗಳನ್ನು ಮಾಡಿದರೆ ದೋಷಪರಿಹಾರವಾಗಿ ಬೇಗನೇ ವಿವಾಹ ವಾಗುವುದು.

**ಸ್ತ್ರೀಜಜನ ನಕ್ಷತ್ರ ದೋಷವಿಚಾರ**

ಮೂಲಾನಕ್ಷತ್ರದಲ್ಲಿ ಹುಟ್ಟಿದಸ್ತ್ರೀ ಮಾವನಿಗೆ ಅರಿಷ್ಟಮಾಡುವಳು ಎಂದು ಹೇಳೀದೆ ಆದರೆ ನಿರ್ಣಯಸಿಂಧುವಿನಲ್ಲಿ ಮೂಲಾನಕ್ಷತ್ರದ ೧,೨,೩ಪಾದಗಳಲ್ಲಿ ಹುಟ್ಟಿದವಳು ಮಾವನಿಗೂ, ಆಶ್ಲೇಷಾ ನಕ್ಷತ್ರದ ೨,೩,೪ ಪಾದಗಳಲ್ಲಿ ಹುಟ್ಟಿದವಳು ಅತ್ತೆಗೂ,ವಿಶಾಖಾನಕ್ಷತ್ರ ೪ ಪಾದದಲ್ಲಿ ಹುಟ್ಟಿದವಳು ಮೈದುನನಿಗೂ,ಜ್ಯೇಷ್ಟ ನಕ್ಷತ್ರದ ೪ಪಾದದಲ್ಲಿ ಹುಟ್ಟಿದವಳು ಗಂಡನ ಅಣ್ಣನಿಗೂ ಅರಿಷ್ಟವನ್ನುಂಟುಮಾಡುತ್ತಾಳೆ. ಈ ಮೇಲೇ ಹೇಳಿದ ನಕ್ಷತ್ರ ದೋಷವು ಸ್ತ್ರೀಯರಿಗೆ ಹೊರತು ಪುರುಷರಿಗಲ್ಲ. ಜನ್ಮಜಾತಕದಲ್ಲಿ ಶುಭಗ್ರಹಯೋಗ ಪ್ರಬಲವಾಗಿದ್ದರೆ ಈ ದೋಷಗಳಿಗೆ ಪ್ರಾಬಲ್ಯವಿರುವುದಿಲ್ಲ. ಮೇಲೆ ಹೇಳಿದ ನಕ್ಷತ್ರಗಳಿಂದ ಯಾವ ಯಾವಭಾವಕ್ಕೆ ದೋಷ ಉಕ್ತವಾಗಿದೆಯೋ ಆ ಭಾವಾಧಿಪರು ಶುಭರಾಗಿದ್ದು,ಶುಭದೃಷ್ಟರಾದರೂ,ಬಲಿಷ್ಠರಾಗಿದ್ದರೆ ಎಲ್ಲಾದೋಷ ಗಳನ್ನು ನಾಶಮಾಡುವರು.

**ತಾರಾಬಲವಿವೇಚನೆಯಿಂದ ಪ್ರತಿನಕ್ಷತ್ರಕ್ಕೂಶುಭಾಶುಭಚಿಂತನೆ**

ಸಾಮಾನ್ಯವಾಗಿ ಎಲ್ಲರಿಗೂ ತಾರಾಬಲ ನೋಡಲು ಬರುವುದಿಲ್ಲ. ಅದಕ್ಕಾಗಿ ಜನ್ಮನಕ್ಷತ್ರದ ಅಥವಾ ನಾಮನಕ್ಷತ್ರವನ್ನು ತಿಳಿದು ಕೊಂಡವರಿಗೆ ಅವರವರ ತಾರಾಬಲವಿರುವ ನಕ್ಷತ್ರಗಳ ಪಟ್ಟಿಯನ್ನು ಕೆಳಗೆ ಶಾಸ್ತ್ರಾಧಾರ ದಿಂದ ಗಮನಿಸಿ ಹಾಕಿರುತ್ತೇವೆ. ಪಂಚಾಂಗ ದಲ್ಲಿರುವ ನಕ್ಷತ್ರವನ್ನು ನೋಡಿ ಶುಅಭವೋ ಅಲ್ಲವೋ ಸುಲಭವಾಗಿ ಗ್ರಹಿಸ ಬಹುದು. ಸಜ್ಜನರು ಇದನ್ನು ನೋಡಿಕೊಂಡು ಅನುಷ್ಠಾನಮಾಡಿದರೆ ನನ್ನ ಶ್ರಮಸಾರ್ಥಕವಾಗುತ್ತದೆ

**ಅಶ್ವಿನಿ**

ರೋಹಿ,ಪುಷ್ಯ,ಹಸ್ತ,ಸ್ವಾತಿ,ಅನೂ,ಜ್ಯೇಷ್ಠ,ಶ್ರವ,ಶತ,ಉಭಾ,ರೇವತಿ ಈ ನಕ್ಷತ್ರಗಳು ಯಾವ ಕಾರ್ಯಕ್ಕೆ ಆಗಲಿ ಶುಭನಕ್ಷತ್ರಗಳು. ಮಘ,ಮೂಲ,ಭರಣಿ,ಪೂಷಾ,ಆದ್ರಾ್ರ,ಆಶ್ಲೇ,ಪೂಫ ಈ ನಕ್ಷತ್ರಗಳು ಯಾವ ಕಾರ್ಯಕ್ಕೆ ಆಗಲಿ ಮಧ್ಯಮನಕ್ಷತ್ರಗಳು. ಕೃತ್ತಿ,ಉಷಾ,ಮೃಗ,ಚಿತ್ರಾ ಈ ನಕ್ಷತ್ರಗಳು

